# ಬದುಕಿನ ಸುಳಿಯಲ್ಲಿ

( ಸ್ವತಂತ್ರ ಸಾಮಾಜಿಕ ಕಾದಂಬರಿ )

ಬರೆದವರು:

**ಶ್ರೀ ಸೇವ ನಮಿರಾಜ ಮಲ್ಲ**

ಮುದ್ರಕರು ಮತ್ತು ಪ್ರಕಾಶಕರು:

ಭಾಲಚಂದ್ರ ವೆಂಕಟೇಶ ಘಾಣೇಕರ

**ಪ್ರತಿಭಾ ಮುದ್ರಣ, ಧಾರವಾಡ.**

ಏಪ್ರಿಲ್ ೧೯೫೩ ]          [ ಬೆಲೆ: ೨-೦-೦

# ಅ ರಿ ಕೆ.

ಹತ್ತನೆಯ ವರುಷದ ಮೂರನೆಯ ಕಿರಣವನ್ನಾಗಿ ಶ್ರೀ. ಸೇವ ನಮಿರಾಜ ಮಲ್ಲರು ನಮಗೆ ತಮ್ಮ ಅಮೌಲ್ಯ ಕೃತಿಯಾದ "ಬದುಕಿನ ಸುಳಿಯಲ್ಲಿ" ಪ್ರಕಟಣೆಗೆ ಕೊಟ್ಟುದಕ್ಕಾಗಿ ಅವರಿಗೆ ತುಂಬ ಋಣಿಯಾಗಿದ್ದೇವೆ.

ಶ್ರೀ ಮಲ್ಲರು ಈ ಮೊದಲೇ ಮೂರು-ನಾಲ್ಕು ಕಾದಂಬರಿಗಳನ್ನು ಬರೆದು ಕನ್ನಡ ವಾಚಕರಿಂದ ಮನ್ನಣೆ ಪಡೆದವರಾಗಿದ್ದಾರೆ. ಇವರ ಈ ಕಾದಂಬರಿಯು ನಮ್ಮ ಓದುಗರನ್ನು ಮೆಚ್ಚಿಸುವದೆಂದು ನಂಬಿದ್ದೇವೆ.

—ಪ್ರಕಾಶಕ

---

ಸೂಚನೆ:— ಈ ಕಾದಂಬರಿಯ ಪಾತ್ರಗಳು ಸನ್ನಿವೇಶ ಇತ್ಯಾದಿಗಳೆಲ್ಲ ಸಂಪೂರ್ಣ ಕಲ್ಪಿತ ವಿನಃ ಯಾವ ವ್ಯಕ್ತಿ ಇಲ್ಲವೆ ಸಂಸ್ಥೆಯನ್ನು ಉದ್ದೇಶಿಸಿಲ್ಲ.

ಅ ರ್ಪ ಣ .

ಪು. ಆ. ಕ.

ಸ್ಮರಣೆಗೆ.

—ಸ. ಮ.

# ಪ್ರಸ್ತಾಪ.

ಖಾಸಗಿ ಸೊತ್ತನ್ನು ಮನ್ನಿಸುವ ಮಾನವ ಸಮಾಜದ ಇತಿಹಾಸವಲ್ಲಿ ಹಿರಿಯರ ಸಂಪತ್ತಿನ ಉತ್ತರಾಧಿಕಾರತ್ವವು ತಂದೆಯ ಇಲ್ಲವೇ ತಾಯಿಯ ಮೂಲಕ ಉರುಳುತ್ತಿತ್ತು. ನ್ಯಾಯ ಇತಿಹಾಸಕಾರ ಮೇಯಿನ್‌ರ ಅಭಿಪ್ರಾಯದಲ್ಲಿ ಪುರಾತನ ಸಮಾಜದಲ್ಲಿ ತಾಯಿಯ ಮೂಲಕ ಉತ್ತರಾಧಿಕಾರ ವಹಿಸುವ ಪದ್ಧತಿಯೇ ಹೆಚ್ಚು ಆಚರಣೆಯಲ್ಲಿತ್ತು ಎಂದು ವ್ಯಕ್ತವಾಗುತ್ತದೆ.

ಪ್ರಕೃತ ಸಮಾಜದಲ್ಲೂ ತಾಯಿಯ ಮೂಲಕ ಉತ್ತರಾಧಿಕಾರ ಉರುಳುವ ಪದ್ಧತಿಯು 'ಅಳಿಯ ಸಂತಾನ', 'ಮರುಮಕ್ಕತ್ತಾಯಂ' ಇತ್ಯಾದಿ ಹೆಸರುಗಳಿಂದ ನಮ್ಮ ನಾಡಿನ ಪಶ್ಚಿಮ ಕರಾವಳಿಯ ಕೇರಳ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳ ಕೆಲವು ಜನರಲ್ಲಿ ಆಚರಣೆಯಲ್ಲಿದೆ.

ಈ ಪದ್ಧತಿಯನ್ನು ಹಿನ್ನೆಲೆಯಲ್ಲಿಟ್ಟುಕೊಂಡು ರಚಿತವಾದ ಕೃತಿ ಇದು.

ಆದರೆ ಇಲ್ಲಿ ಯಾವೊಂದು ವಿಚಾರದ ಪ್ರತಿಪಾದನೆ ಇಲ್ಲವೇ ಖಂಡನೆಯನ್ನು ನಡೆಸಿಲ್ಲ.

ಅಂಥ ವೈಯಕ್ತಿಕ ಪ್ರತಿಕ್ರಿಯೆಗಳನ್ನು ನಿರೂಪಿಸಲು ಇಲ್ಲಿ ಎಡೆಯಿಲ್ಲವೆಂದು ನನ್ನ ನಂಬಿಕೆ.

ಒಂದುವೇಳೆ, ಕೃತಿಗಾರನ ಒಲವು–ನಿಲವುಗಳು ಕಾದಂಬರಿಯೊಳಗೆ ಮೂಡಿ, ಅವನ ನೈತಿಕ, ಸಾಮಾಜಿಕ ಹಾಗೂ ರಾಜಕೀಯ ದೃಷ್ಟಿಕೋನಗಳೇನೆಂಬುದನ್ನು ತಿಳಿಸಲೇಬೇಕೆಂದಿದ್ದರೆ, ಮುಂದಿನ ಕಾದಂಬರಿಯ ಮುನ್ನುಡಿಯಲ್ಲೇ ನನ್ನ ಆತ್ಮಚರಿತ್ರೆಯನ್ನು ಬರೆದು ಬಿಡುವೆ.

ಎರಡು ವರ್ಷಗಳ ಹಿಂದೆ ಈ ಕೃತಿಯನ್ನು ಬರೆಯುತ್ತಿದ್ದಾಗ ನನ್ನ ಮನಸಿನೊಡನೆ ತನ್ನ ಮನಸನ್ನು ಹೆಣೆದು ಚೇತನವನ್ನಿತ್ತ ಚಿ॥ ಸುಶೀಲಳನ್ನು ನಾನು ಕೃತಜ್ಞತಾಪೂರ್ವಕ ನೆನೆಯಬೇಕು. ಅಲ್ಲದೆ ಬರೆದಾದ ಬಳಿಕ ಹಸ್ತಪ್ರತಿಯನ್ನೋದಿ ಸಲಹೆ–ಸೂಚನೆಗಳನ್ನಿತ್ತ ಗೆ॥ ಮ. ವಿ. ನಾಯಕರ ಉಪಕಾರವೂ ಸ್ಮರಣೀಯ. ಅದೇ ಮೇರೆಗೆ ಇದರ ಪ್ರಕಾಶನದ ಭಾರವನ್ನು ಹೊತ್ತ ಶ್ರೀ. ಘಾಣೇಕರರಿಗೆ ನಾನು ಚಿರಋಣಿ.

ಮದ್ರಾಸು,

೧೯೫೩.

ನ. ಮು.

# ಬದುಕಿನ ಸುಳಿಯಲ್ಲಿ.



## ಅಧ್ಯಾಯ ಒಂದು.

ಕೋಣೆಯ ಕದ ಮುಚ್ಚಿ ಚಿಲಕ ಹಾಕುವಾಗ ಸಂಜೀವನ ಉಸಿರು ಕಟ್ಟಿ ಹೋದಂತಾಗಿತ್ತು.

ಅದು ಮಾಳಿಗೆಯ ಕೋಣೆ. ಒಳಗೊಂದು ಮಿಣುಕು ದೀಪ ಉರಿಯುತ್ತಿದೆ. ಕಿಟಕಿಯ ಬಾಗಿಲ ಹತ್ತಿರವಿದ್ದ ರೆಂಜೆಯ ಮರದ ಹೂ ಆಗ ತಾನೇ ಅರಳುತ್ತ ಗಾಳಿಯಲ್ಲಿ ಘಮಘಮಿಸುತಿತ್ತು. ಮನೆಯ ಹಿಂಬದಿಯ ಕಾಡಿನಲ್ಲಿ ನರಿಗಳ " ಉಕ್ಕೆ ಊ........ಉಕ್ಕೆ ಉಕ್ಕೆ........ಊ........ಊ.... ಉಕ್ಕೆ ಊ........ " ಕೇಳಬರುತ್ತಿದೆ. ಮತ್ತೆ ಮರಗಳಲ್ಲಿ ತಂಗಿದ್ದ ಕಾಗೆಗಳ ಚೀರಾಟವೂ ಒಮ್ಮೊಮ್ಮೆ ಕೇಳುತಿತ್ತು.

ಸಂಜೀವ ಕಿಟಕಿಯ ಬಳಿ ತಿರುಗಿದ. ಪಾರ್ವತಿ ಕಿಟಕಿಯ ಸರಳುಗಳಿಗೆ ಮುಖವನ್ನೊತ್ತಿ ಆಕಾಶವನ್ನು ನೋಡುತಿದ್ದಾಳೆ. ಕ್ಷಣಕಾಲ ಅವನು ಅವಳ ಹಿಂದೆ ನಿಂತು ಅವಳ ಮುಡಿಯಲ್ಲಿದ್ದ ಸಂಪಿಗೆಹೂವಿನ ಪರಿಮಳವನ್ನು ಆಸ್ವಾದಿಸುತ್ತ ಆಕಾಶವನ್ನು ನೋಡಿದ. ಅಸಂಖ್ಯಾತ ನಕ್ಷತ್ರಗಳು ಸಾಲಾಗಿ ಮುದ್ದೆಮುದ್ದೆಯಾಗಿ, ಗುಂಪಾಗಿ, ಬೇರೆಬೇರೆಯಾಗಿ ಮಿನುಗುತಿದ್ದುವು. ಅವುಗಳ ಬೆಳಕಿನ ನರ್ತನಕ್ಕೆ ಹಿಮ್ಮೇಳದಂತೆ ಸುತ್ತಲಿದ್ದ ಕೀಟಗಳು ನಾನಾ ರೀತಿಯಿಂದ ಕಿರುಚುತಿದ್ದುವು.

ಆ ಸೂಕ್ಷ್ಮವಾದ ದೀಪದ ಬೆಳಕಿನಲ್ಲಿ ಪಾರ್ವತಿಯ ಅಲೆಅಲೆಯಾಗಿ ಬಾಚಿದ ತಲೆಗೂದಲು ಅವನ ಕಣ್ಣಿಗೆ ಬಿತ್ತು. ಸುಳಿಸುಳಿಯಾಗಿ ನೇಯ್ದ ಜಡೆ ಅವಳ ನೀಳವಾದ ಬೆನ್ನಿನ ಮೇಲೆ ಅಂಗಾತ ಇಳಿದು ಬಿದ್ದಿತ್ತು. ಅವಳು ಧರಿಸಿದ್ದ ನಸುಹಸುರು ಬಣ್ಣದ ಸೀರೆಯ ಮೇಲೆ ಚಿಕ್ಕ ಚಿಕ್ಕ ಹೂಗಳ ಚಿತ್ರ

ಗಳು ಚುಕ್ಕೆಗಳಂತೆ ಕಾಣುತ್ತಿದ್ದುವು. ಸಂಜೀವನ ಎದೆ ಜೋರಾಗಿ ಬಡೆಯ ತೊಡಗಿತು. ಅವನ ಕಾಲುಗಳ ಶಕ್ತಿ ಕುಂದುತ್ತಿರುವಂತೆ ಭಾಸವಾಗುತ್ತಿತ್ತು.

ಕೆಳಗಿನಿಂದ ಶಬ್ದ ಕೇಳುತ್ತಲೇ ಇದೆ. ಕೆಲವರು ಗಟ್ಟಿಯಾಗಿ ಮಾತ ನಾಡುತ್ತಿದ್ದಾರೆ. ಕೆಲವರು ನಗುತ್ತಿದ್ದಾರೆ. ಎಲ್ಲವೂ ಸಂತೋಷದಲ್ಲಿ. ಒಂದೆಡೆ "ನನ್ನದು ಗುಲಾಮು........ನನ್ನದು ನೈಲ........ನನ್ನದು ತುರುಪು.... ಹೊಡೆ........ಬಿಡಬೇಡ........ಬಛಾವ್" ಇತ್ಯಾದಿ ಇಸ್ಪೀಟು ಆಟಗಾರರ ಹುರುಪಿನ ನಗುವಿನ ಧ್ವನಿ. ಅವರ ಉತ್ಸಾಹವನ್ನು ನೋಡುವಾಗ ಅವರಿಗೆ ಮದುವೆಯ ಸಂಭ್ರಮದಲ್ಲಿ ರಾತ್ರಿಯಾದುದೇ ತಿಳಿದಿಲ್ಲವೋ ಎಂದು ತೋರು ತ್ತಿತ್ತು.

ಅಲ್ಲೊಂದು 'ಧಡಂ' ಶಬ್ದ. ಸಿಡಿಮದ್ದುಗಳು ಇನ್ನೂ ನಾಮಾವ ಶೇಷವಾಗಿಲ್ಲ. ಸಂಜೀವ ಹಾರಿಬಿದ್ದ. ಯಾರೋ ಹುಡುಗರ ಕೆಲಸವಾಗಿ ರಬೇಕು.

ಕೋಣೆಯ ಬಾಗಿಲ ಬಳಿಯಲ್ಲೇ ಕಿಲಕಿಲನೆ ನಗುವುದು ಕೇಳುತ್ತಿತ್ತು. "ಸುಮ್ಮನಿರು.... ಗಪ್ ಚುಪ್........ಆಗೋ ಶಬ್ದ....ಹುಂ....ಹುಂ....ಒಳಗೆ ತಿಳಿದೀತು." ಸಂಜೀವನಿಗೆ ಅರ್ಥವಾಯಿತು. ಏನು ಈ ಸಂಭ್ರಮದ ಪುರಾಣ! ಒಮ್ಮೆ ಪ್ರಾರಂಭವಾಯಿತೆಂದರೆ ಯುಗಗಳು ಕಳೆದುಹೋದರೂ ಅಂತ್ಯವಿಲ್ಲ. ವಿನೋದಕ್ಕಾಗಿ, ವಿರಾಮಕ್ಕಾಗಿ ಹಾತೊರೆಯುತ್ತಿದ್ದ ಜನರಿ ಗೆಲ್ಲ ಇದೊಂದು ಒಳ್ಳೆಯ ನಿಮಿತ್ತ. ಒಳ್ಳೆಯ ನೆವ. ಇಲ್ಲಿ ಹೊಣೆಗಾರಿಕೆ ಇಲ್ಲ. ಭಾರವಿಲ್ಲ. ಪುನಃ ತಂತಮ್ಮ ಮನೆಗಳಿಗೆ ಹೋದರೆಂದರೆ ಅವರ ಯಥಾವತ್ತಿನ ಜೀವನದ ಹೊರೆ ಮುಂದೆ ಬಂದು ನಿಲ್ಲುವುದು. ಮುನ್ನೂರ ಐವತ್ತೈದು ದಿನಗಳ ವರುಷದಲ್ಲಿ ಇಂಥ ಬಿಡುವಿನ, ನಗುವಿನ ಸಂದರ್ಭ ಬರೇ ಕೆಲವು ದಿನ.

ಸಂಜೀವ ಶಬ್ದಮಾಡದೆ ದೀಪವಾರಿಸಿ ಮೆಲ್ಲನೆ ಹಾಸಿಗೆಯ ಮೇಲೆ ಕುಳಿತುಕೊಂಡ. ಹಾಸಿಗೆಯ ದಪ್ಪ ಅವನನ್ನು ಮಂಕುಮಾಡಿತು. ಒಂದು ವರುಷದಲ್ಲಿ ಎರಡು ಮರಗಳಲ್ಲಾದ ಹತ್ತಿಯನ್ನು ಅದರೊಳಗೆ ಜಜ್ಜಿ, ಗುದ್ದಿ ತುರುಕಿಸಿರಬೇಕು.

ಅಲ್ಲಿಯೇ ತಲೆದಿಂಬಿತ್ತು. ಹತ್ತಿಯ ಒತ್ತಡದಿಂದ ಅದು ಕಲ್ಲಿನಂತಾ

ಗಿತ್ತು. ಮೆಲ್ಲನೆ ಸಂಜೀವ ಅದನ್ನು ಬೆನ್ನ ಹಿಂದೆ ಎಳೆದುಕೊಂಡ.

ಅವನಿಗೆ ಆಕಳಿಕೆ ಬರುತಿತ್ತು. ಪಾರ್ವತಿ ಆಕಾಶದಲ್ಲಿನ ನಕ್ಷತ್ರಗಳನ್ನೆಲ್ಲ ಲೆಕ್ಕ ಮಾಡುತ್ತಿರುವಳೋ ಎಂದು ಅವನಿಗೆ ತುಸು ಸಂಶಯವಾಗಿರಬೇಕು. ಅವನ ಇರವಿನ ಪ್ರತಿಕ್ರಿಯೆ ಒಂದಿಷ್ಟೂ ಅವಳ ಬಹಿರಂಗದಲ್ಲಿ ತೋರುತ್ತಿರಲಿಲ್ಲ. ಅಷ್ಟು ಸ್ತಬ್ಧತೆ.

ಪುನಃ ಅದೇ ಶಬ್ದ. “ ಆಟೀನ್ ಎಕ್ಕ....ತುರುಪು ಖಾಲಿ....ನಮಗೆ ....ನಮಗೆ....ಮೋಸವಾಯಿತು....ಔಟ್ ! ”

ಅವರೆಲ್ಲರ ಕುತ್ತಿಗೆಯನ್ನು ಹಿಚುಕಿ ಬಿಡೋಣವೇ ಎಂದೆನಿಸಿತು ಸಂಜೀವನಿಗೊಮ್ಮೆ. ಏನು ಅಪ್ರಸ್ತುತ! ಈ ನೆಂಟರೆಲ್ಲ ಸುಮ್ಮನೆ ನಿದ್ರಿಸಬಾರದೆ? ಬೇಕಾದಷ್ಟು ತಿಂದಿದ್ದಾರೆ. ಇನ್ನೂ ಆಟ !

ಧಡ ಧಡನೆ ಮಾಳಿಗೆಯ ಮೆಟ್ಟಲಿಳಿದುಕೊಂಡು ಹೋಗುವ ಶಬ್ದ. ಹೆಂಗಸರ ಆಟ ಅಲ್ಲಿಗೆ ತೀರಿರಬೇಕು. ದೀಪ ನಂದುವ ತನಕ ಅವರು ಬಾಗಿಲಿನ ಸಂದಿನಿಂದ ನೋಡುತಿದ್ದಿರಬೇಕು. ದೀಪ ನಂದಿಸಿದ ಮೇಲೆ ಅವರು ಒಳಗಿಂದ ಏನಾದರೂ ಸದ್ದಾದರೂ ಆಗಬಹುದೆಂದು ನಿರೀಕ್ಷಿಸಬೇಕು. ಕಾದು ಕಾದು ಬೇಸರ ಬಂತು. ನಿರೀಕ್ಷಣೆ ಸುಳ್ಳಾಯಿತು. ಆಶೆ ನಿರಾಶೆಯಾಯಿತು. ಬಹುಶಃ ಅಲ್ಲಿ, ಇದೇನಾದರೂ ತಂತ್ರವೇ ? ಎಲ್ಲರೂ ಹೋದರೆಂದು ಬಗೆದು ಇನ್ನಾದರೂ ದಂಪತಿಗಳು ಮಾತನಾಡಲಿ, ಮಾತನಾಡಿಕೊಳ್ಳಲಿ.... ಎಂದು ? ಸಂಜೀವ ಸಂಶಯಪಟ್ಟ. “ ಈ ಮಾರಿ ಹೆಂಗಸರ ಪೈಕಿ ಕೆಲವಂತಾದರೂ ಇಂಥ ರಾತ್ರಿಗಳ ಅನುಭವ ಪಡೆದಿರಬೇಕು. ಕೆಲವರು ಇಂಥ ಸಾವಿರಗಟ್ಟಲೆ ರಾತ್ರಿಗಳನ್ನು ಕಳೆದಿರಬೇಕು. ಆದರೂ ಅವರಿಗೆ ಒಂದಿಷ್ಟಾದರೂ ನಾಚಿಕೆಯಿಲ್ಲ. ನನ್ನನ್ನೇಕೆ ಶಾಂತಿಯಿಂದಿರಲು ಬಿಡರು ? ನಮ್ಮ ಮೇಲೆ ಇವರಿಗೆ ಏಕೆ ಇಷ್ಟು ಆಸಕ್ತಿ ? ಎಲ್ಲರಂತೆಯೇ ನಾವೂ ಬಹುಶಃ ”

ಪಾರ್ವತಿ ಆ ಕಿಟಕಿಯ ಕಬ್ಬಿಣ ಸಲಾಕೆಗಳ ಒಂದು ಭಾಗವಾಗಿ ಹೋಗಿದ್ದಳು ಆಗ. ನಿಂತು ನಿಂತು ಅವಳ ಕಾಲುಗಳಿಗೆ ಕೂಡ ಆಯಾಸವಾಗಲಿಲ್ಲ.

ಹೊರಗೆ ಯಕ್ಷಗಾನ ತಾಳ ಮದ್ದಲೆ ಸುರುವಾಯಿತು ಭಾಗವತರು ಮಂಗಲ ಮುಗಿಸಿ ಪ್ರಸಂಗಕ್ಕೇ ಇಳಿದಿದ್ದರು.

" ಮುಂದೆ ನೋಡಲು ಪಂಚವಟಿಯಲಿ.... "

ಅವರ ರಾಗದಲ್ಲಿ ತುಂಬ ಭಾವವಿತ್ತು. ಹಾಡುವವ ಅದೇ ಊರಿನ ರಾಮಪ್ಪ. ಅವನ ಏರಿಳಿತ, ತಾಳ-ಲಯಗಳೆಲ್ಲ ಶಾಸ್ತ್ರಬದ್ಧವಾಗಿದ್ದುವು. ಆ ರಾಗದಲ್ಲಿ ಇಂಪೂ ಇತ್ತು.

ಮತ್ತೆ ಅರ್ಥ: " ಎಲೈ ಅಣ್ಣನೇ ಕೇಳುವಂಥವನಾಗು.... " ಲಕ್ಷ್ಮಣ ಹೇಳುತಿದ್ದ. ರಾಮನು ಗಾಂಭೀರ್ಯ ಸ್ವರದಿಂದ ಮಾತನಾಡುತಿದ್ದ.

ಸಂಜೀವ ಸ್ವಲ್ಪ ದೂರಕ್ಕೆ ಕಾಲು ಚಾಚುತ್ತ ಒಂದು ನಿಟ್ಟುಸಿರನ್ನೆಳೆದ. ಬೇಗನೇ ಎಲ್ಲರೂ ಮಲಗಲು ಹೋದಾರೆಂದು ಅವನು ಎಣಿಸಿದ್ದ. ಇನ್ನು ತಾಳ ಮದ್ದಲೆ ಕೊನೆಗೊಳ್ಳುವಾಗ ಬೆಳಗಾಗದಿರಲಿಲ್ಲ. ತಾಳ ಮದ್ದಲೆಯ ಉತ್ಸಾಹದ ಮಿತಿ ಅವನಿಗೆ ಚನ್ನಾಗಿ ಗೊತ್ತು.

ಒಮ್ಮೆ ಪಾರ್ವತಿಯತ್ತ ಕಣ್ಣು ಹೊರಳಿಸಿದ. ಛೆ, ಈ ಹುಡುಗಿ ಕೈಗೆ ಬಂದ ತುತ್ತು! ಬಾಯಿಗೆ ಇನ್ನೂ ಬರಲಿಲ್ಲ. ಇವಳೇಕೆ ಹೀಗೆ ಮಣ್ಣು ಗುಂಪೆಯಂತೆ ನಿಂತಿದ್ದಾಳೆ! ಇವಳ ಅಭ್ಯಾಸವೇ ಹೀಗೆಯೋ ಇರಬಹುದೆ ? ಸಾಧಾರಣದವರು ಹೀಗೆ ಅಲುಗಾಡದೆ ಗಂಟೆಕಟ್ಟಲೆ ನಿಂತಿದ್ದರೆ ಅವರ ಕಾಲು ಗಂಟುಗಳು ನೋಯದಿರುತಿದ್ದಿಲ್ಲ.

" ಅವಳಿಗೆ ದುಃಖ ? ಏನು ದುಃಖ, ಎಂಥ ದುಃಖ? ಹೆಂಗಸಾದವಳು ಹೆಂಡತಿಯಾಗಲೇ ಬೇಕು. ಅದು ಅನಿವಾರ್ಯ. ಅವಳು ಇನ್ನು ನನ್ನೊಡನೆ ಬರುವಾಗ ಅವಳ ತಂದೆ ತಾಯಿಗಳನ್ನಗಲಬೇಕೆಂದೇ ? ಅದು ಸಹಜವಾದ ಕಾರಣವಾದರೂ, ವಿವೇಕದಿಂದ ಕೂಡಿದುದಿಲ್ಲ. ಅವಳ ತಂದೆ ತಾಯಿಗಳು ಅವಳಿಗೆ ತೋರಿಸುತಿದ್ದ ಮಮತೆಗಿಂತ ನೂರುಪಾಲು ಹೆಚ್ಚಾಗಿ ನಾನು ತೋರಿಸಲಿರುವೆನು.

" ಮತ್ತೆ ನಾಚಿಕೆ ? ಹುಂ ನಾಚಿಕೆ, ನಾಚಿಕೆ! ಹೆಂಗಸರ ಸ್ವಾಭಾವಿಕ ಮನೋಗುಣವದು. ಆದರೆ ಇಷ್ಟಾದ ಮೇಲೆ ಇನ್ನೆಂಥ ನಾಚಿಕೆ? ನನ್ನ ಹಟ್ಟಿಯಲ್ಲಿರುವ ದನದಂತಾಗಿದ್ದಾಳೆ ಅವಳು. ನನ್ನನ್ನು ನೋಡುವುದಂತಿರಲಿ, ಅವಳಿಗೆ ಅಲ್ಲಿ ಕುಳಿತುಕೊಳ್ಳುವ ಮನಸ್ಸು ಕೂಡ ಆಗುವುದಿಲ್ಲವಲ್ಲ! "

ಸಂಜೀವ ಮೆಲ್ಲನೆ ಎದ್ದು ಪಾರ್ವತಿಯ ಬಳಿಗೆ ಹೋಗಿ ಅವಳ ಭುಜದ ಮೇಲೆ ಎರಡೂ ಕೈಗಳನ್ನಿಟ್ಟ. ಆದರೂ ಅವಳು ಅಲುಗಾಡಲಿಲ್ಲ. ಅವನ

ಕೈಗಳು ಇನ್ನೂ ಮುಂದೆ ಸಾಗಿದುವು ಅವನ ಹೆಬ್ಬೆಟ್ಟಿಗೆ ಅವಳ ಮೃದುವಾದ ದವಡೆ ತಾಗಿತು. ಆ ಮೃದುವಾದ ಘರ್ಷಣೆ ಅವನ ಮೈಯ್ಯಲ್ಲಿ ವಿದ್ಯುಚ್ಛಕ್ತಿಯ ಪ್ರವಾಹವನ್ನು ಹರಿಸಿದಂತಾಯಿತು. ಕೈ, ಸೆರಗಿನ ಮೇರೆಯನ್ನು ಮೀರಿ ರವಕೆಯ ಅಂಚಿನ ಬಳಿ ಸರಿಯಿತು. ಅವಳ ಎಸೆಯಮೇಲ್ಬದಿಯ ಹಸಿಮಾಂಸ ನುಣುಪಾಗಿತ್ತು. ಮತ್ತೂ ಕೈಗೆ ಮುಂದರಿಯಬೇಕೆಂದು ತೋರಿತು. ಅವಳ ಎದೆಯ ಬಡಿತ ಅವನಿಗೆ ಆಗ ಚೆನ್ನಾಗಿ ತಿಳಿಯುತಿತ್ತು.

ಫಕ್ಕನೆ ಒಂದು ಧ್ವನಿ: ಸಂಜೀವ ಅವಾಕ್ಕಾಗಿ ಹಾಸಿಗೆಯ ಬಳಿ ಹಾರಿದ. ತುಸು ಹೊತ್ತು ನಿಶ್ಯಬ್ದ. ಏನೋ ತಂತ್ರ ಹೂಡಿದ್ದರೆಂದು ಅವನಿಗೆ ನಿಶ್ಚಯ ವಾಯಿತು. ಮತ್ತೆ ಹೊರಗಿಂದ ತಾಳಮದ್ದಲೆ ಕೂಟದವರ ಗದ್ದಲವಲ್ಲದೆ ಬೇರೇನೂ ಕೇಳಬರುತಿದ್ದಿಲ್ಲ.

ಇಂದು ಪಾರ್ವತಿಯನ್ನು ಇದ್ದ ಹಾಗೇ ಬಿಟ್ಟುಬಿಟ್ಟರೆ ಲೇಸೆಂದು ಅವನಿಗೆ ತೋರಿತು. ಉಳಿದ ಜೀವಮಾನವಿಡೀ ಅವರಿಬ್ಬರದೇ. ಅವನೇ ಅದರ ಕುಬೇರ. ಅವನ ಸ್ವಾತಂತ್ರ್ಯವನ್ನು ಪ್ರಶ್ನಿಸುವವರು ಯಾರೂ ಇಲ್ಲ. ಇಂದು ಪಾಪ, ಕಳವಳಗೊಂಡು ಇಲಿಯಂತಾದ ಹುಡುಗಿಯನ್ನೇಕೆ ತಾನು ಇನ್ನೂ ಇಕ್ಕಟ್ಟಿಗೊಳಪಡಿಸಬೇಕು ?

ಮೆಲ್ಲಗೆ ಹಾಸಿಗೆಯ ಮೇಲೆ ಉರುಳಾಡಿದ. ಸೊಳ್ಳೆಗಳ ಬಾಧೆಯಿಂದ ನಿವೃತ್ತಿ ಹೊಂದಲು ವಸ್ತ್ರವನ್ನು ಹೊದ್ದುಕೊಂಡ. ಆಕಳಿಕೆ ಬರುತಿತ್ತು. ಆದರೆ ನಿದ್ದೆ ಬಾರದು. ಅತ್ತಿತ್ತ ಹೊರಳಾಡಿದ. ಒಮ್ಮೆ ಕಾಲುಗಳನ್ನು ಮಡಚಿದ. ಇನ್ನೊಮ್ಮೆ ತಲೆದಿಂಬಿಗೆ ಮುಖವನ್ನೊತ್ತಿ ಮಲಗಿದ. ನಾಲ್ಕೈದು ಸಲ ಮೈಯನ್ನು ನೇವರಿಸಿಕೊಂಡ. ಕಣ್ಣು ಮುಚ್ಚಿದರೂ ನಿದ್ರೆ ಬಾರದು. ಅವನು ಅದನ್ನು ಗಾಢವಾಗಿ ಬಯಸುತಿದ್ದ.

ಆ ಮುಚ್ಚಿದ ರೆಪ್ಪೆಗೂ ತೆರೆದ ರೆಪ್ಪೆಗೂ ಎಷ್ಟು ಅಂತರ! ಆ ರೆಪ್ಪೆಗೆ ಅವನ ಇದಿರಿರುವ ಲೋಕವನ್ನೇ ಮಾಯ ಮಾಡಿಸುವ ಶಕ್ತಿ ಇದೆ. ಅವನು ರೆಪ್ಪೆಯನ್ನು ಮುಚ್ಚಿದೊಡನೆ ಪಾರ್ವತಿ ಕೂಡ ಒಮ್ಮೆ ಅದೃಶ್ಯಳಾಗಿ ಬಿಡುತಿದ್ದಳು. ಅವಳಿಗೂ ಅವನಿಗೂ ಆಗ ಇರುವ ಅಂತರ ಆಗಮ್ಯವಾದುದು, ಅನಂತವಾದುದು. ಆ ಅನಂತವನ್ನು ಭೇದಿಸಿ ಹೊರಬಂದು ಕುಣಿಯಲು ಅವನ ಮನಸ್ಸು ಹಾತೊರೆಯುತಿತ್ತು.

ಅಲ್ಲೆ ಒಂದು ಬೆಕ್ಕು 'ಮಿಯಾಂವ್ ಮಿಯಾಂವ್' ಎನ್ನುತ್ತ ತಿರುಗಾಡತೊಡಗಿತು. ಆ ನಿಶ್ಯಬ್ದತೆಯಲ್ಲಿ ಅದರ ಮೃದುವಾದ ಕಾಲಿನ ಸಪ್ಪಳ ಅವನಿಗೆ ಅಸ್ಪಷ್ಟವಾಗಿ ಕೇಳುತಿತ್ತು. ಅದು ಮೆಲ್ಲನೆ ಪಾರ್ವತಿಯ ಕಾಲಿನ ಬಳಿಗೆ ಹೋಗಿ ಬಾಲವನ್ನು ನೇವರಿಸಿ 'ಕುರ್ ಕುರ್' ಎನ್ನುತ್ತ ಒರಸತೊಡಗಿತು. ಸಂಜೀವ ಅದನ್ನು ನೋಡತೊಡಗಿದ. ಅದರ ಚಲನೆಯಲ್ಲಿ ಎಂಥ ಚೈತನ್ಯ, ಎಂಥ ಲವಲವಿಕೆ ಇತ್ತು! ತಲೆಯನ್ನು ಬೇಕೆಂದೇ ಪಾರ್ವತಿಯ ಕಾಲಿಗೆ ಅಪ್ಪಳಿಸಿ ಮೈಯನ್ನು ಕೊಂಕಿಸುತ್ತ ಅವಳ ಹಿಂದೆ ಮುಂದೆ ಹೋಗುವುದು.

ಪಾರ್ವತಿ ಮೆಲ್ಲನೆ ಹಿಂತಿರುಗಿ ನೋಡಿದಳು. ಸಂಜೀವನಿಗೆ ಅವಳ ಮುಖ ಕಾಣಿಸದು. ಅಷ್ಟು ಕತ್ತಲೆ. ಅವನು ಹೊದ್ದಿದ್ದ ಮುಸುಕನ್ನು ಕಂಡು ಅವನು ನಿದ್ರೆ ಹೋಗಿರಬೇಕೆಂದು ಎಣಿಸಿದಳು. ಮತ್ತೆ ಬೆಕ್ಕನ್ನು ಕೈಗೆ ತೆಗೆದುಕೊಂಡು ಮೆಲ್ಲನೆ ಕುಳಿತಾಗ, ಸಂಜೀವನ ಮುಚ್ಚಿದ ಕಣ್ಣಿನರೆಪ್ಪೆ ತೆರೆಯಿತು. ಅವಳು ಬೆಕ್ಕನ್ನು ಸವರುತಿದ್ದಾಳೆ. ಅದರ ನುಣುಪಾದ ರೋಮವನ್ನು ಮುಖಕ್ಕೆ ಒರಸಿಕೊಳ್ಳುತಿದ್ದಾಳೆ. ಸಂಜೀವನ ಎದೆ ವೇಗವಾಗಿ ಬಡೆಯತೊಡಗಿತು. ಆ ಬೆಕ್ಕಿನ ಸ್ಥಾನದಲ್ಲಿ ನಾನಿರುತಿದ್ದರೆ........ ಹೀಗೆಂದು ಮನಸಿನಲ್ಲೇ ಎಣಿಸಿದ.

ಆದರೆ ಆ ಬೆಕ್ಕಿನ ಮಾಟವೇನು! ಕುತ್ತಿಗೆಯವರೆಗೆ ಎಲ್ಲ ಬಿಳಿ. ಶುಭ್ರ ಬಿಳಿ. ಆಮೇಲೆ ಕಪ್ಪು ಚುಕ್ಕೆಗಳು. ಕಾಲಿನ ಉಗುರುಗಳನ್ನು ಪುಪ್ಪುಸಗಳೊಳಗೆ ಎಳೆದುಕೊಂಡು ಅವಳ ತೊಡೆಯ ಮೇಲೆ ಪಾದಗಳನ್ನು ಒತ್ತುತ್ತ ಬಾಲವನ್ನು ನೇವರಿಸಿ 'ಕುರ್ ಕುರ್' ಎನ್ನುತಿದೆ. ಏನು ಚೆಲುವಿನ ಪ್ರಾಣಿ! ತಾನು ಅದರಷ್ಟು ಚೆಲುವಿರುವೆನೇ? ಅಷ್ಟು ರೂಪ-ಲಾವಣ್ಯಗಳು ತನಗಿದೆಯೇ? ಅದರ ಸಲ್ಲಾಪದಲ್ಲಿ ಎಂಥ ಮಧುರವಾದ ಮೋಹಕತೆ!

ಸಂಜೀವನಿಗೊಮ್ಮೆ ಎದ್ದು ಪಾರ್ವತಿಯ ಮೇಲೆ ಹಾರಿ ಬಿಡೋಣವೆಂದೆನಿಸಿತು. ಆದರೆ ಅಷ್ಟರಲ್ಲಿ ಅವಳ ಸಂತೋಷ ಪೂರ್ಣ ಮಾಯವಾದರೆ? ಅವಳ ಮನಸಿನ ಝುಂಝೂಟ ಬಿಗುವಾದರೆ? ಅಲ್ಲೇನೂ ಪಿಸು ಮಾತನಾಡಲು ಕೂಡ ಸಾಧ್ಯವಿಲ್ಲ. ಮಾತಿನ ಮುನ್ನುಡಿಯಿಲ್ಲದಿದ್ದರೆ, ಮುಖತಃ

ಮನಸಿನ ಪರಿಚಯವಿಲ್ಲದಿದ್ದರೆ ದೈಹಿಕ ಮಿಲನ ಮಾತ್ರ ಏನು ಪ್ರಯೋಜನ?

ಇಲ್ಲ. ತಾನು ಬೇರೆಯವರು ಹೇಳುವುದನ್ನು ಕೇಳಿದ್ದೇನೆ. ಮೊದಲ ರಾತ್ರಿಯಲ್ಲಿ ಅವರು ಹುಡುಗಿಯನ್ನು ಹಿಡಿದು ಒಮ್ಮೆಲೇ ವಸ್ತ್ರ ಸೆಳೆದಿದ್ದರಂತೆ. ಹುಡುಗಿಯ ಬಾಗಿದ ಮುಖವನ್ನು ಮೇಲಕ್ಕೆತ್ತಿದ್ದರಂತೆ. ಹುಡುಗಿಯನ್ನು ಜೀವ ಜೀವ ತಿಂದಿದ್ದರಂತೆ, ತೇಗಿದ್ದರಂತೆ.

ಸಂಜೀವನ ತಲೆಯಲ್ಲಿ ಯೋಚನೆಗಳೇ ಯೋಚನೆಗಳು. ಕೊನೆಗೆ ಈ ರಾತ್ರಿಯೊಮ್ಮೆ ಕಳೆದು ಹೋಗಲಾರದೇ ಎಂದು ಅವನಿಗೆ ತೋರಿತು. ಆ ರಾತ್ರಿಯ ಕತ್ತಲೆ ಅಷ್ಟು ಕರಾಳವಿತ್ತು. ಅದು ಅವನ ಪ್ರಪಂಚವನ್ನಿಡೀ ಆಪ್ಪಿಕೊಂಡಿತ್ತು.

ಇನ್ನೂ ಬಹುಶಃ ಯಾರೂ ನಿದ್ರಿಸಿಲ್ಲ. ಎಲ್ಲ ನಗುತಿದ್ದಾರೆ, ಮಾತನ್ನಾಡುತಿದ್ದಾರೆ. ಒಂದೆಡೆಯಿಂದ ತಾಳ ಮದ್ದಲೆಯ ಅರ್ಥ–ಪದ್ಯಗಳು ಕೇಳುತ್ತಲೇ ಇವೆ. ಹಾಂ. ಈಗ ಶೂರ್ಪನಖಿ ಬಂದಳು. ಅವಳ ವರ್ಣನೆಯ ಪದ್ಯವನ್ನು ಹಾಡುತಿದ್ದಾರೆ.

"ಎಲೈ ಪ್ರಿಯತಮ ಕೇಳುವಂಥವನಾಗು! ನಿನ್ನೊಡನೆ ನನ್ನ ಮನಸ್ಸು ಪೂರ್ಣ ಮಿಲನವಾಗಿದೆ. ನಿನ್ನ ತೇಜಸ್ವೀ ಕಣ್ಣುಗಳು ನನ್ನನ್ನು ಸೆರೆಹಿಡಿದಿವೆ. ನಿನ್ನ ಮೈಯ್ಯಲ್ಲಿ ಚೇತನ ತುಂಬಿ ಹರಿಯುವ ಲಾವಣ್ಯದ ಪ್ರವಾಹ ನನ್ನನ್ನು ಹುಚ್ಚು ಹಿಡಿಸಿದೆ. ಅಯ್ಯಾ, ಸುಂದರ ಮೂರ್ತಿಯಾದ ದೊರೆಯೇ ನನ್ನನ್ನು ಸ್ವೀಕರಿಸು, ಸ್ವೀಕರಿಸು."

ಸಂಜೀವನ ಅಣ್ಣ ದೇವಪ್ಪ ಹೀಗೆಂದು ಅರ್ಥ ಹೇಳುತ್ತಿದ್ದ: ಲಕ್ಷ್ಮಣ ಅವಳಿಗೆ ಬುದ್ಧಿ ಹೇಳುತಿದ್ದ. ಆದರೆ ಶೂರ್ಪನಖಿಗೆ ವಿವೇಕ ಮೂಡುವಂತಿರಲಿಲ್ಲ.

ಮತ್ತೆ ಪಾರ್ವತಿಯನ್ನೊಮ್ಮೆ ನೋಡಿದ. ಅವಳು ಆ ತಿಳಿಯಾದ ನೆಲದ ಮೇಲೆಯೇ ಉರುಳಿಕೊಂಡಿದ್ದಾಳೆ. ಬಹುಶಃ ಆ ಒಳಗೇ ಅವಳಿಗೆ ನಿದ್ದೆ ಬಂದಿರಬಹುದು. ಅವಳು ಶ್ವಾಸ ಬಿಡುತಿದ್ದ ಧ್ವನಿ ಅವನಿಗೆ ಅಸ್ಪಷ್ಟವಾಗಿ ಕೇಳಿಸುತಿತ್ತು. ಒಮ್ಮೊಮ್ಮೆ ಅವಳು ಅತ್ತಿತ್ತ ಅಲ್ಲಾಡುವಾಗ ಕೈಗಳ ಬಳೆಗಳು ಸದ್ದು ಮಾಡುತಿದ್ದುವು. ಎದೆಯ ಮೇಲೆ ಬಿದ್ದಿದ್ದ ಭಾರವಾದ

ಬಂಗಾರದ ಆಭರಣಗಳು ಒಂದಕ್ಕೊಂದು ತಾಗುತಿದ್ದುವು. ಅವಳಿಗೆ ಗಾಢವಾದ ನಿದ್ದೆ ಬಂದಿರಬೇಕು. ಬಹುಶಃ

ಸಂಜೀವನ ಮನಸ್ಸಿನಲ್ಲಿ ಬೆಳಕು ಮೂಡಿತು. ಕತ್ತಲಾಗಿದ್ದರೂ ಅವಳ ಮುಖ ಅವನಿಗೆ ಸ್ಪಷ್ಟವಾಗಿ ಕಾಣುತಿತ್ತು. ಅವಳು ನಿದ್ದೆಯಲ್ಲಿ ನಿಶ್ಚೇತಳಾಗಿ ಮಲಗಿದ್ದರೂ ಅವಳ ಚಲನವಲನ ಅವನಿಗೆ ಗೋಚರಿಸುತಿತ್ತು. ನೀಳವಾದ, ಸ್ಪಷ್ಟವಾದ ಹುಬ್ಬುಗಳುಳ್ಳ ಅವಳ ಸಣ್ಣ ಮುಖ. ಭಾವಮಯ, ಅರ್ಥಮಯವಾದ ಚಿಕ್ಕ ಕಣ್ಣಾಲಿಗಳು. ಕೂದಲ ರಾಶಿಯಲ್ಲಿ ಅಡಗಿರುವ ಕಿವಿಗಳಿಂದ ನೇತಾಡುತಿದ್ದ ಪಚ್ಚೆಕಲ್ಲಿನ ತೊಟ್ಟಿಲು ಲೋಲಾಕುಗಳು. ಅಗಲ ಕಿರಿದಾದ ಹಣೆ. ಕೆಂಪು ಕೆಂಪಾದ ಕೆನ್ನೆಗಳು. ಮೃದುವಾಗಿ ಉಬ್ಬಿ ಹರಡಿದ ಮೂಗು. ಕಿರಿದಾದ ನಸುಗೆಂಪು ತುಟಿಗಳು. ಉಬ್ಬಿ ಬಂದ ದವಡೆಗಳು. ಸಣ್ಣದಾದ ಗಲ್ಲ.

ಸಂಜೀವನಿಗೆ ಮತ್ತೂ ಕಾಣುತಿದೆ: ರವಕೆಯೊಳಗಿಂದ ಉಬ್ಬಿ ಚೂಪಾಗಿ ನಿಂತ ಎದೆ. ನುಣುಪಾದ ತೋಳುಗಳು. ಮಾಂಸ ತುಂಬಿದ ಅಂಗೈ. ಸೀರೆಯ ನೆರಿಗೆಯಿಂದ ಅವಳ ಅಂಗಾಂಗಗಳ ರೂಪರೇಷೆ ಹೊರಗೆ ಇಣುಕುತ್ತಿದೆ. ತುಂಬಿ ಬಂದ ತಾರುಣ್ಯದಿಂದ ತುಳುಕುವ ಅವಳ ಮೂರ್ತಿಮತ್ತಾದ ದೇಹರಾಶಿ ಅವನ ಪದತಲದಲ್ಲಿ ಬಿದ್ದುಕೊಂಡಿದ್ದಂತೆ ಭಾಸವಾಯಿತು.

ಅಂಗಾತ, ಅಲುಗಾಡದೆ, ಬಿದ್ದುಕೊಂಡಿದೆ.

ಫಕ್ಕನೆ ಮುಖಕ್ಕೆ ಮುಚ್ಚಿದ್ದ ಮುಸುಕನ್ನು ಅತ್ತ ಸೀಳಿ ಮೇಲಕ್ಕೆದ್ದ. ಪಾರ್ವತಿ ಗಾಢನಿದ್ದೆಯಲ್ಲಿದ್ದಾಳೆ. ಅವಳ ಹತ್ತಿರ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ಸರಿದ. ಅವಳ ಮುಖದ ಹತ್ತಿರ ಮೊಣಕಾಲೂರಿ ಅವಳ ಮುಖದ ಮೇಲಿದ್ದ ಕೈಯನ್ನು ಮೆಲ್ಲನೆ ಮುಟ್ಟಿದ. ಪಾರಿವಾಳಗಳನ್ನು ಬೇಟೆಯಾಡುವವರು ಸಹ ಅಷ್ಟು ಜಾಗರೂಕರಾಗಿರುತಿದ್ದಿಲ್ಲ. ಒಮ್ಮೆಯೇ ಅವಳ ಕೈ ಅವನ ಕೈಗಳಿಂದ ತಪ್ಪಿಸಿಕೊಂಡು ಸೆಟೆದು ಹೋದಂತಾಯಿತು. ಅವಳು ಉರುಳಿ ಗೋಡೆಗೆ ಮುಖ ತಿರುಗಿಸಿದಳು.

ಮರುಗಳಿಗೆಯಲ್ಲೇ ಸಂಜೀವ ಹಾಸಿಗೆಯಲ್ಲಿದ್ದಾನೆ. ಅವಳ ಮುಖದಲ್ಲಿ ಅವನು ಕೆಲ ಕ್ಷಣಗಳಹಿಂದೆ ಕಂಡಿದ್ದ ಆ ಬೆಳಕಿನ ಛಾಯೆ ಈಗ ಮಾಯ

ವಾಗಿತ್ತು. ಅವಳ ಕಣ್ಣುಗಳು, ಅವಳ ತುಟಿಗಳು, ಅವಳ ದೇಹ—ಎಲ್ಲ ಬರಿಯ ಮಾಂಸ, ರಕ್ತ ಮತ್ತು ಎಲುಬುಗಳಂತೆ ಅವನಿಗೆ ಹೊಳೆಯಿತು. ಅದನ್ನು ಸ್ವೀಕರಿಸಲು, ಭಕ್ಷಿಸಲು, ತಾನು ಸಿದ್ಧನಿಲ್ಲವೆಂದು ಸಾವಿರ ಸಾರಿ ಹೇಳಿಕೊಂಡ.

ತಾಳ ಮದ್ದಲೆ ಇನ್ನೂ ನಡೆಯುತಿತ್ತು. ಭಾಗವತರ ಜಾಗಟೆಯ ಬದಲಾಗದ ಸ್ವರವನ್ನು ಕೇಳುತ್ತ ಕೇಳುತ್ತ ಮತ್ತೆ ಅವನಿಗೆ ನಿದ್ದೆ ಬಂತು.

ಬೆಳಗ್ಗೆ ಎಚ್ಚರನಾಗುವಾಗ ಕೋಣೆಯಲ್ಲಿ ಅವನೊಬ್ಬನೇ ಇದ್ದ. ತಾನು ಕಳೆದ ಆ ರಾತ್ರಿ ಬರೀ ಸ್ವಪ್ನವೊ ಇಲ್ಲ, ಸತ್ಯವಾದುದೋ ಎಂದು ಕ್ಷಣಕಾಲ ಅವನಿಗೆ ಸ್ಪಷ್ಟವಾಗಲಿಲ್ಲ. ಎಚ್ಚರವಾಗುವ ತನಕವೂ ಪಾರ್ವತಿ ತನ್ನ ಬಳಿಯಲ್ಲೇ, ತನ್ನ ಬದಿಯಲ್ಲೇ ಇದ್ದಾಳೆಂದು ನೆನೆಸಿದ್ದ. ಅವಳ ಮೃದುವಾದ ತುಟಿಯ ಸವಿ ಅವನ ಬಾಯಲ್ಲಿ ಇನ್ನೂ ಉಳಿದಿದೆಯೆಂದು ಕಲ್ಪಿಸಿದ್ದ. ಅವಳನ್ನು ಗಾಢವಾಗಿ ಆಲಂಗಿಸುವಾಗ ಸ್ಪರ್ಶವಾಗುತಿದ್ದ ಅವಳ ಎದೆಯ ಏರಿಳಿತದ ಘರ್ಷಣೆ ಇನ್ನೂ ಅವನ ಎದೆಯಲ್ಲಿ ಅನುಭವವಾಗುತಿತ್ತು.

ಇಷ್ಟಾದರೂ ಈಗ ಅವಳ ಕುರುಹು ಸಹ ಕಾಣಸಿಗದು.

ಹಾಸಿಗೆಯ ಮೇಲೆ ಕುಳಿತುಕೊಂಡು ತುಸು ಯೋಚಿಸಿ ಕಣ್ಣುಜ್ಜುತ್ತ ಮತ್ತೆ ಮೆಲ್ಲನೆ ಕೋಣೆಯ ಹೊರಗೆ ಹೋದ. ಮನೆಯವರೆಲ್ಲ ಆಗಲೇ ಎದ್ದಿದ್ದರು.

ಅವನು ಮುಖ ತೊಳೆಯುತಿದ್ದಾಗ ಪಾರ್ವತಿ ಹೂದೋಟದಲ್ಲಿ ಹೂ ಕೊಯ್ಯುತಿದ್ದುದು ಕಂಡಿತು. ಅವಳ ಮುಖದ ಮೇಲೆ ಬಿಸಿಲಿನ ಕಿರಣಗಳು ಫಳಫಳನೆ ಹೊಳೆಯುತಿದ್ದುವು.

“ ಮುಖದಲ್ಲೇನು, ಮೇಣ ಹಿಡಿದಿದೆಯೆ ? ಹೀಗೇಕೆ ಇಷ್ಟುಹೊತ್ತು ತಿಕ್ಕಿಕೊಳ್ಳುತಿದ್ದಾನೆ ? ” ಎಂದು ಹಿಂದಿನಿಂದ ಯಾರೋ ನಗುತ್ತ ಹೇಳುವುದನ್ನು ಕೇಳಿ ಸಂಜೀವ ನಾಚಿಗೊಂಡ.

---

# ಅಧ್ಯಾಯ ಎರಡು.

ನಾರಾಯಣಸೆಟ್ಟರು ಮಧ್ಯಾಹ್ನ ಊಟ ತೀರಿಸಿ ಬಂಧುಗಳನ್ನು, ಸ್ನೇಹಿತರನ್ನು ಎಲ್ಲ "ಇನ್ನು ನೀವು ಯಾವಾಗ ನೋಡಸಿಗುತ್ತೀರೋ ಏನೋ! ಸಮಯವಿದ್ದಾಗ ಅಗತ್ಯ ಬನ್ನಿ" ಎಂದು ಗೋಳ್ಹೆಂದು ನಗುತ್ತ ಕೈಮುಗಿದು ಬೀಳ್ಕೊಳ್ಳುತ್ತಿದ್ದರು. ಸಂಜೀವನೂ ಅವರ ಬದಿಯಲ್ಲೇ ನಿಂತುಕೊಂಡಿದ್ದ. ಅವನು ಪಾರ್ವತಿಯೊಡನೆ ಅವರೆಲ್ಲರ ಪಾದವನ್ನು ಮುಟ್ಟಿ ಆಶೀರ್ವಾದಗಳನು ಪಡೆದುಕೊಂಡಾಗಿತ್ತು.

"ಇನ್ನು ಬರುವ ವರುಷ ಕಿಟ್ಟುವಿಗೆ ಮದುವೆಯಿದೆಯಲ್ಲ!" ಎಂದು ಶಾಂತಪ್ಪಸೆಟ್ಟರು ನಗುತ್ತ ಹೋದರು. ಕಿಟ್ಟು ಇದನ್ನು ಕೇಳಿ ಒಳಗಿಂದೊಳಗೇ ನಕ್ಕ. ಅವನು ಪಾರ್ವತಿಯ ತಮ್ಮ.

ನಾರಾಯಣಸೆಟ್ಟರು ಮಧ್ಯ ವಯಸ್ಸು ದಾಟಿದವರು. ಎತ್ತರಾದ ನಸುಗಪ್ಪು ಶರೀರ. ತಲೆಯಲ್ಲಿ ಜುಟ್ಟಿದೆ. ತುಟಿಯಲ್ಲಿ ಉದ್ದವಾದ ಮೀಸೆ. ಸ್ವಲ್ಪ ಬಿಳಿಯಾಗಿದೆ. ಸಾಧಾರಣ ದೊಡ್ಡ ಹೊಟ್ಟೆ. ಎದೆಯಲ್ಲೆಲ್ಲ ಹಂದಿಯಂತೆ ರೋಮರಾಶಿ. ಬಿಳಿಯ ಗೀಟುಗಳುಳ್ಳ ಕೆಂಪು ಬಣ್ಣದ ವಸ್ತ್ರವನ್ನುಟ್ಟುಕೊಂಡು ಕಪ್ಪಾದ ಎಲವಸ್ತ್ರವನ್ನು ಹಾಕಿಕೊಂಡಿದ್ದಾರೆ. ಒಳ್ಳೆಯ ಲಕ್ಷಣವಾದ ತೀಕ್ಷ್ಣ ಕಣ್ಣುಗಳುಳ್ಳ ಮುಖ ಅವರದು.

ಸೆಟ್ಟರು ಊರಿನಲ್ಲಿ ಹೆಸರುವಾಸಿ ಜಮೀನುದಾರು. ಪಾರಂಪರ್ಯವಾಗಿ ಬಂದಿದ್ದ ಸಾವಿರ ಮುಡಿ ಗೇಣಿ ಸಿಗುವ ಆಸ್ತಿಯಿತ್ತು. ಮತ್ತೆ ಮರ, ಕಾಡು ತೆಂಗಿನಕಾಯಿ, ಅಡಿಕೆ ಇತ್ಯಾದಿ ನೈಸರ್ಗಿಕ ಸಂಪತ್ತಿಗೂ ಕಡಿಮೆಯಿಲ್ಲ. ಅವರಿಗೆ ಇಪ್ಪತ್ತೇಳು ವಯಸ್ಸಿನಲ್ಲಿ ಮಾವ ಸತ್ತು ಇಡೀ ಆಸ್ತಿ ಸಿಕ್ಕಿತ್ತು. ಆಗ ಕುಟುಂಬದಲ್ಲಿ ಅವರೇ ಹಿರಿಯರು. ಅವರ ಜಾತಿಯ ಸಾಂಪ್ರದಾಯದ ಪ್ರಕಾರ ಅವರು ಯಜಮಾನರಾದರು. ಕುಟುಂಬದ ಉಳಿದವರೆಲ್ಲ ಅವರ ಕೈಕೆಳಗೆ. ಅವರಿಗೆ ಊಟಕ್ಕೊಂದಲ್ಲದೆ ಬೇರೆ ಯಾವುದಕ್ಕೂ ಹಕ್ಕಿಲ್ಲ.

ನಾರಾಯಣಸೆಟ್ಟರ ಆಡಳಿತೆಯಲ್ಲಿ ತುಂಬ ಸುಧಾರಣೆ ನಡೆದಿತ್ತಂತೆ.

ಎಷ್ಟೋ ಗುಡ್ಡ ಪ್ರದೇಶಗಳನ್ನು ಅಗೆದು ಫಲವತ್ತಾದ ಬೈಲುಗಳನ್ನಾಗಿ ಅವರು ಮಾರ್ಪಡಿಸಿದ್ದರು. ಅವರ ಹಿರಿಯರ ಕಾಲದಲ್ಲಿ ಸಿಗುತಿದ್ದ ಏಳುವರೆ ಖಂಡಿ ಅಡಿಕೆ ಈಗ ನೂರೈವತ್ತು ಖಂಡಿಗಳಷ್ಟಾಗಿತ್ತು. ಎಲ್ಲಿ ನೋಡಿದರೂ ಬಂಜರು ಸ್ಥಳ ಕಾಣಲೇ ಸಿಗದು.

ಪಾರ್ವತಿ ಸೆಟ್ಟರ ಮೂರನೆ ಮಗಳು. ಮೊದಲಿನವರಿಬ್ಬರು ತೀರಿ ಹೋಗಿದ್ದರು. ಅವಳನ್ನು ಸೆಟ್ಟರ ತಂಗಿಯ ಮಗ ಬಾಬುವಿಗೆ ಕೊಡುವು ದೆಂದೇ ಹಿಂದೆ ನಿಶ್ಚಯಿಸಿದ್ದರು. ಹೆಚ್ಚಾಗಿ ಅವರ ಕುಟುಂಬದ ಪಾಡಿಗೆ ಅದು. ಅವರ ಕುಟುಂಬದೊಳಗೇ ಸಂಬಂಧವಾದರೆ ಅವರ ಮಕ್ಕಳು ಆಸ್ತಿಯ ಹೊರಗೆ ಹೋಗಲಿಕ್ಕಿಲ್ಲ. ಇದರಿಂದಾಗಿ ಅವರು ಶೇಖರಿಸಿದ ಸಂಪ ತ್ತೆಲ್ಲ ಅವರ ಹೆಂಡತಿಯ ಮಕ್ಕಳ ಚಕ್ರದೊಳಗೇ ಉರುಳುವುದು.

ಬಾಬುವಿಗೆ ಸಂಬಂಧವಾಗಬೇಕೆಂದು ಸೆಟ್ಟರು ಹೂಡಿದ ತಂತ್ರ ಹೆಚ್ಚು ಕಡಿಮೆ ಎಲ್ಲರಿಗೂ ತಿಳಿದುದೇ. ಬಾಬು ಸಣ್ಣವನಿರುವಾಗಲೇ ಅವನ ತಂದೆ ತೀರಿ ಹೋಗಿದ್ದರು. ಆ ಬಳಿಕ ಅವನು ಸೆಟ್ಟರಲ್ಲೇ ದಿನ ಕಳೆಯಬೇಕಾ ಯಿತು. ಸೆಟ್ಟರು ಅವನಿಗೆ ಕೊಡುತಿದ್ದ ಉಪಟಳ ಅಷ್ಟಿಷ್ಟಲ್ಲ. ಸೆಟ್ಟರ ಹೆಂಡತಿ ಬಾಬುವಿನ ತಾಯಿ ಸಂಕುವನ್ನು ದಿನವಿಡೀ ದುಡಿಸುತಿದ್ದರು. ಇಷ್ಟಾದರೂ ಸೆಟ್ಟರು ಸಂಕುವಿಗೆ ವರುಷಕ್ಕೊಂದು ಜೋಡಿ ಸೀರೆ ಕೊಟ್ಟರೆ, ಅವರ ಹೆಂಡತಿ ಲಿಂಗಮ್ಮ ಮತ್ತೆ ಒಂದು ವಾರವಾದರೂ ಮಾತು ಬಿಟ್ಟು ಸಿಕ್ಕಸಿಕ್ಕಲ್ಲಿ ಬಯ್ಯು ದಿಲ್ಲ; ಒಂದೆರಡು ದಿನ ಅಡುಗೆ ಮಾಡುವುದನ್ನು ಕೂಡ ಬಿಟ್ಟುಬಿಡುವರು.

ಸಂಕು ದುಡಿತದ ಕುದುರೆಯಂತಾಗಿದ್ದಳು. ಅವಳ ಸುಖದ ದಿನಗಳು ಅವಳ ಗಂಡನೊಡನೆಯೋ ಮಾಯವಾದುವು. ಸೆಟ್ಟರು ಅವಳ ಅಣ್ಣ. ಚಿಕ್ಕಂದಿ ನಲ್ಲಿ ಒಟ್ಟಿಗೆ ಮಾವನ ಮನೆಯಲ್ಲಿ ಆಡಿದವರು, ಉಂಡವರು. ಬಹಳ ಪ್ರೀತಿ ಯಿಂದ, ವಿಶ್ವಾಸದಿಂದ ದಿನಗಳೆದವರು. ಅವಳ ಮದುವೆಗೆಂದು ಸೆಟ್ಟರೆಷ್ಟು ಕಷ್ಟಪಟ್ಟಿದ್ದರೆಂದು ಅವಳಿಗೆ ಚನ್ನಾಗಿ ಗೊತ್ತು. ಸೆಟ್ಟರ ಪ್ರೇಮ ಕುಂದಿದುದು ಅವರು ಲಿಂಗಮ್ಮನ ಕೈಹಿಡಿದ ನಂತರ. ಆಮೇಲೆ ಸಂಕುವೇನಾದರೂ ಹಬ್ಬ ಹುಣ್ಣಿಮೆಗೆಂದು ಮನೆಗೆ ಬಂದರೆ ಅವಳಿಗೆ ಮುಳ್ಳಿನ ಮೇಲೆ ಕಾಲಿಟ್ಟಂತಾಗು ತಿತ್ತು. ಮನೆಯಲ್ಲಿ ಹೆಚ್ಚು ಕಡಿಮೆ ಯಾರೂ ಮಾತನಾಡುವವರಿಲ್ಲ.

ಸೆಟ್ಟರು ಗಂಭೀರವಾಗಿ ಗೃಹಕೃತ್ಯದ ವ್ಯವಹಾರ ನಡೆಸುತ್ತ ತಮ್ಮ ಮಕ್ಕಳೊಂದಿಗೇ ಸಮಯಗಳೆಯುವರು. ಲಿಂಗಮ್ಮ ದಿನಕ್ಕೆ ಎರಡು ಮೂರು ಶಬ್ದಗಳನ್ನು ಮಾತ್ರ ಅತ್ತಿಗೆಯೊಡನೆ ಮಾತನಾಡುವಳು. ಆಮೇಲೆ ಹೊರಗೆ–ಒಳಗೆಲ್ಲ ಚಾಡಿಯ ತಂತ್ರ. ಸಂಕು ಯಾರಯಾರೊಡನೆ ಏನೇನು ಮಾತನಾಡುವಳು. ಯಾರಯಾರ ಕುರಿತು ಏನೇನು ಹೇಳುವಳು ಇತ್ಯಾದಿ ವರದಿಗಳನ್ನು ಸಂಗ್ರಹಿಸಿ ಗಂಡನೊಡನೆ ಹೇಳುವಳು. ಅಪ್ರತ್ಯಕ್ಷವಾಗಿ ದೂಷಿಸುವಳು.

ಗಂಡನಿರುವಾಗ ಸಿಕ್ಕಿದ ಸೆಟ್ಟರ ಮತ್ತು ಲಿಂಗಮ್ಮನ ವರ್ತನೆಯ ಮುನ್ನರುಚಿ, ಸಂಕುವಿಗೆ ಗಂಡ ಸತ್ತ ಬಳಿಕ ಕಣ್ಣೀರಿನ ಸತ್ಯವಾಗಿ ಪರಿಣಮಿಸಿತು. ಮೊದಮೊದಲು ಅವಳು ದಿನವಿಡೀ ಅಳುವುದಿತ್ತು. ರಾತ್ರೆಯೂ ನಿದ್ದೆಮಾಡುತಿರಲಿಲ್ಲ. ಆದರೆ ಅವಳ ವಯಸ್ಸಿನೊಡನೆ ಅವಳ ಭಾವಾವೇಶಗಳ ಚೇತನ ಕುಂದಿತು. ಬೈಗಳನ್ನು ಕೇಳುವುದು, ವಿನಾಕಾರಣ ಆರೋಪಗಳನ್ನು ಹೇರಿಕೊಳ್ಳುವುದು ಇವೆಲ್ಲ ಅವಳಿಗೆ ರೂಢಿಯಾಯಿತು. ಅವುಗಳು ತನ್ನ ಪಾಲಿಗೆ ಬಂದ ಪ್ರಸಾದವೆಂದು ಮನಗಂಡು ನಿಸ್ಸಹಾಯ ಪ್ರವೃತ್ತಿಯನ್ನು ತಾಳಿದಳು. ಲಿಂಗಮ್ಮ ಹೊಡೆಯಲಿಕ್ಕೆ ಬಂದರೆ ಕೂಡ ಅವಳು ಮಾತನಾಡುತ್ತಿರಲಿಲ್ಲ. ಪ್ರತ್ಯುತ್ತರವಾಗಿ. ಬಾಬುವನ್ನವಳು ಇಷ್ಟತ್ತು ವರುಷ ಸಂರಕ್ಷಿಸಿದುದು ಅವಳಿಗೇ ಆಶ್ಚರ್ಯವನ್ನುಂಟು ಮಾಡುತಿತ್ತು.

ಬಾಬುವಿನ ಚಿಕ್ಕಂದಿನ ಕಷ್ಟಜೀವನ ಅವನ ಎಳೆಯ ಮನಸಿನ ಮೇಲೆ ಹೆಚ್ಚು ಪರಿಣಾಮವನ್ನುಂಟು ಮಾಡದಿದ್ದರೂ ಅವನ ದೇಹಪ್ರಕೃತಿ ಮತ್ತು ಅವನ ಸ್ವಭಾವಗಳ ಮೇಲೆ ತುಂಬ ವರ್ಚಸ್ಸನ್ನು ಬೀರಿತ್ತು. ಸುಮಾರು ಹನ್ನೆರಡು ವರುಷಗಳ ತನಕ ಅವನಿಗೆ ಮನೆಯಲ್ಲಿ ದನ ಕಾಯುವ ಕೆಲಸ ಮಾತ್ರ. ಬೆಳಿಗ್ಗೆ ದನಕರುಗಳನ್ನು ಗುಡ್ಡೆಗೆ ಅಟ್ಟಿಕೊಂಡು ಹೋಗಿ ಮಧ್ಯಾಹ್ನ ಬಂದು ಉಣ್ಣಬೇಕು. ಆಮೇಲೆ ಸಂಜೆಗೆ ಪುನಃ ಗುಡ್ಡೆ. ತನ್ಮಧ್ಯೆ ನಡುನಡುವೆ ಗದ್ದೆಗಳ ಕೆಲಸ ಸ್ವಲ್ಪ ಸ್ವಲ್ಪ ಮಾಡಬೇಕು. ಲಿಂಗಮ್ಮನ ಬಿಟ್ಟಿ ಕೆಲಸಗಳಿಗಂತೂ ತುದಿ ಮೊದಲೇ ಇಲ್ಲ. ಅವಳ ಮಕ್ಕಳು ಅಳುತ್ತ ಚಂಡಿ ಹಿಡಿಯುತಿದ್ದರೆ ಬಾಬು ಅವುಗಳನ್ನು ಎತ್ತಿಕೊಳ್ಳಬೇಕು. ಅವೇನಾದರೂ ತಮಗೆ ಆಟಕ್ಕೆ ಒಂದು ಬೊಗರಿಯಾಗಬೇಕು, ಇಲ್ಲವೇ ಒಂದು ಗಾಡಿಯಾಗ

ಬೇಕೆಂದರೆ ಬಾಬುವೇ ಮಾಡಿಕೊಡಬೇಕು. ಅವರಿಗೆ ಅವನು ಅವಿಧೇಯತನ ತೋರಿಸಿದರೆ ಅನ್ನಕ್ಕೇ ಕಲ್ಲು ಬೀಳುತಿತ್ತು.

ಮತ್ತೆ ಸ್ವಲ್ಪ ದೊಡ್ಡವನಾದ ಬಳಿಕ ಅವನಿಗೆ ಬೇಸಾಯದ ಕೆಲಸ ವಹಿಸಿದರು. ಬೆಳಿಗ್ಗೆ ಇಡೀ ಉಳಬೇಕು. ಆಮೇಲೆ ಎತ್ತುಗಳನ್ನು ನೀರಿನಲ್ಲಿ ಚೆನ್ನಾಗಿ ತೊಳೆದು ಮಧ್ಯಾಹ್ನ ಎರಡು ಗಂಟೆಗೆ ಊಟಕ್ಕೆ ಬರಬೇಕು. ನೇಜಿ ನೆಡುವ ಸಮಯದಲ್ಲಿ ಮತ್ತು ಪೈರು ಕೊಯ್ಯುವ ಸಮಯ ಇಡೀ ದಿನವೂ ಅವನಿಗೆ ಕೆಲಸ. ಕಾಯಿಪಲ್ಯದ ತೋಟ ಮಾಡಬೇಕು. ಆಮೇಲೆ ಎರಡು ತಿಂಗಳು ಅದಕ್ಕೆ ದಿನಾಲೂ ನೀರು ಹಾಕಬೇಕು.

ಬಾಬುವಿಗೆ ವಯಸ್ಸು ತುಂಬುತ್ತ ಬರುತಿದ್ದಂತೆಯೇ ಅವನ ಕೆಲಸದ ಕಠಿಣತೆ ಅವನಿಗೆ ಮನದಟ್ಟಾಗುತಿತ್ತು. ಕೆಲವೊಮ್ಮೆ ಉಳಲು ಬೇರೇ ಜನವೇ ಇಲ್ಲ. ಅವನೇ ಇಡಿ ಗದ್ದೆಯನ್ನು ದಿನವಿಡೀ ಉಳಬೇಕು. ಒಮ್ಮೊಮ್ಮೆ ಗೊಬ್ಬರ ಹೊರಲು ಯಾರೂ ಬರುವುದಿಲ್ಲ. ಅಂದು ಅವನೇ ಹಟ್ಟಿಯಲ್ಲಿದ್ದ ಗೊಬ್ಬರವನ್ನೆಲ್ಲ ಹೊರಬೇಕು. ಸೆಟ್ಟರೇನೋ ಅವನು ಚಿಕ್ಕವನಿರುವಾಗ ಅವರು ಹೇಳಿದ ಕೆಲಸ ಸರಿಯಾಗಿ ಮಾಡದ್ದಕ್ಕೆ ಒಮ್ಮೆ ಒಂದು ಪೆಟ್ಟು ಕೊಟ್ಟಿದ್ದರು. ಆ ಬಳಿಕ ಅವರನ್ನು ಕಂಡರೆ ಅವನು ಅವರ ಇದಿರಾಗಿ ಹೋದದ್ದಿಲ್ಲ ಅವರು ಹೋದ ದಾರಿಯನ್ನೇ ಬಿಟ್ಟು ಬಿಡುವ.

ಊರಿನ ಜನರೇನೋ ತಮ್ಮೊಳಗೆ ಆಡಿಕೊಳ್ಳುತಿದ್ದರು. ಅದನ್ನು ಬಾಬುವೂ ಕೇಳಿದ್ದ: ಇಷ್ಟು ಸಣ್ಣ ಹುಡುಗನಿಗೆ ಎಷ್ಟು ಕೆಲಸ— ಅದೂ ಎಷ್ಟು ಕಠಿಣ ಕೆಲಸ! ಅವನ ತಂದೆಯಿರುತಿದ್ದ ಪಕ್ಷ ಸಾಲೆಗೆ ಹೋಗಿ ಎಷ್ಟು ಒಳ್ಳೆಯ ಹುಡುಗನಾಗುತಿದ್ದ! ನಾಳೆ ಸೆಟ್ಟರು ಸತ್ತರೂ ಅವನಿಗೇ ಅಧಿಕಾರ ಬರುವುದಲ್ಲ!

ಮೊದಮೊದಲು ಬಾಬುವಿಗೆ ಈ 'ಅಧಿಕಾರ' 'ಕಠಿಣ' ಮೊದಲಾದ ಶಬ್ದಗಳ ಅರ್ಥ ತಿಳಿಯುತಿದ್ದಿಲ್ಲ. ಒಂದು ವೇಳೆ ಅವನು ಅವುಗಳನ್ನು ಯೋಚಿಸತೊಡಗಿದರೂ ಹೊಟ್ಟೆಗೆ ಬೇಕಾದಷ್ಟು ಅನ್ನ ಬಿದ್ದೊಡನೆ ಅವುಗಳು ಮಾಯವಾಗುತಿದ್ದುವು. ಮತ್ತೆ ಕ್ರಮೇಣ ಗಾಡಿಗಾಡಿಗಳಲ್ಲಿ ಮನೆಯಿಂದ ಅಕ್ಕಿ ಮುಡಿ ಸಾಗುವಾಗ ಅವೆಲ್ಲ ಹೋಗುತ್ತವೆಂದು ಪ್ರಶ್ನಿಸಿಕೊಂಡಿದ್ದ ಅವನೊಳಗೇ.

ಅವನಿಗೆ ಈ ಕುರಿತು ಸಂಪೂರ್ಣ ತಿಳಿದುದು ಕಟೀಲು ಮೇಳದವರ ' ಕೃಷ್ಣಲೀಲ—ಕಂಸ ವಧೆ ' ಯಕ್ಷಗಾನ ದಶಾವತಾರ ಆಟವನ್ನು ನೋಡಿದ ಬಳಿಕವೇ. ಸೆಟ್ಟರೇ ಆ ವರುಷ ಊಟದ ಪಡಿ ಮತ್ತು ಮೂವತ್ತು ರೂಪಾಯಿಗಳನ್ನು ಕೊಟ್ಟು ತಮ್ಮ ಗದ್ದೆಯಲ್ಲೇ ಆಟ ಆಡಿಸಿದ್ದರು. ಅಲ್ಲಿಯೂ ರಂಗಸ್ಥಳಕ್ಕೆ ಚಪ್ಪರ ಹಾಕುವ ಕೆಲಸ ಬಾಬುವಿಗೇ ಸಿಕ್ಕಿತ್ತು. ಅದೆಲ್ಲ ಮುಗಿದ ಬಳಿಕ ಆಟ ನೋಡಲು ಹೋಗಿದ್ದ. ಸೆಟ್ಟರು, ಅವರ ಹೆಂಡತಿ ಮತ್ತು ಮಕ್ಕಳು ಕುರ್ಚಿಗಳಲ್ಲಿ ರಂಗಸ್ಥಳದ ಸಮೀಪ ಕುಳಿತುಕೊಂಡಿದ್ದರು. ನೆರೆದ ಜನರಲ್ಲಿ ಹೆಚ್ಚಿನವರು ಗದ್ದೆಯಲ್ಲೇ ಕುಳಿತುಕೊಂಡಿದ್ದರು. ಕೆಲವರು ನಿಂತುಕೊಂಡೂ ಇದ್ದರು. ಮತ್ತೆ ಕುರ್ಚಿಗಳಲ್ಲಿ ಕುಳಿತುಕೊಂಡವರೆಂದರೆ ಗ್ರಾಮದ ಪಟೇಲರು, ಶ್ಯಾನುಭಾಗರು ಮತ್ತೆ ಅವರಿಬ್ಬರ ಕುಟುಂಬದವರು. ಅವರಿಗೆ ಎರಡೆರಡು ಎಳನೀರುಗಳನ್ನು ಸೆಟ್ಟರು ಬಾಬುವಿನಿಂದ ಕೊಡಿಸಿದರು.

ಬಾಬುವಿಗೆ ಮೊದಮೊದಲು ತೂಕಡಿಕೆ ಹತ್ತಿತು. ಏನೋ ಮಾವಿನ ಎಲೆಯ ವೇಷದ ಹುಡುಗರು ಡೊಂಬರಾಟದವರಂತೆ ಕುಣಿಯುತ್ತಿದ್ದರು. ಮತ್ತೆ ಸೂತ್ರಧಾರಿಗಳ ವೇಷ ಬರುವಾಗ ಅವನು ಚನ್ನಾಗಿ ನಿದ್ದೆಹೋಗಿದ್ದ. ಅವನು ಎಚ್ಚರಾಗುವಾಗ ಸ್ತ್ರೀ ವೇಷ ಕುಣಿಯುತಿತ್ತು. ಹಾಸ್ಯಗಾರ ಲಾಗ ತೆಗೆಯುತಿದ್ದ. ಭಾಗವತರು " ಚಿಕ್ಕ ಪ್ರಾಯದ ಬಾಲೆ ಚದುರೇ " ಎಂದು ಜೋರಾಗಿ ಜಾಗಟೆ ಬಡೆಯುತಿದ್ದರು.

ಸ್ತ್ರೀ ವೇಷದ ಕುಣಿತ ಸುರುವಾಯಿತು. " ತಕಿಟ ತಕಿಟ, ಧಿಕಿಟ, ಧಿಕಿಟ. ಧೀಂ ತಕ್ಕಥೈ........ " ಹೀಗೆ ಭಾಗವತರು ಹೇಳುತಿದ್ದಾಗ ಬಾಬುವಿಗೂ ಕುಣಿಯೋಣವೆಂದು ತೋರಿತು. ಸ್ತ್ರೀ ವೇಷವೂ ಬಹಳ ಸುಂದರವಾಗಿ ಅಚ್ಚುಕಟ್ಟಾಗಿ ತೋರುತಿತ್ತು. ಸ್ವಲ್ಪ ಸಮಯ ವೇಷ ಹಾಕಿದುದ್ದು ಹೆಣ್ಣೇ ಆಗಿರಬೇಕೆಂದು ಬಾಬುವಿಗೆ ಭಾಸವಾಯಿತು.

" ತಕಿಟ ಥಕಥೈ. ಧಿಕಿಟ ಥಕಥೈ. ತರಿಕಿಟತ........ "

ಬಾಬುವಿನ ಕಾಲು ಇದ್ದಕಿದ್ದಂತೆಯೇ ಮೇಲೆ ಕೆಳಗೆ ಹಾರುತಿತ್ತು. ಭಾಗವತರ ತಾಳ ಮದ್ದಳೆಯ ಸ್ವರ, ವೇಷದ ಕುಣಿತ—ಇವುಗಳಲ್ಲಿ ಅಷ್ಟು ಸಾಮರಸ್ಯ ಅವನಿಗೆ ಕಂಡುಬಂತು.

ಮತ್ತೆ ಪ್ರಸಂಗದ ಪೀಠಿಕೆ. ಚೆಂಡೆಯನ್ನು ಗಂಭೀರವಾಗಿ ಅರ್ಧ ತಾಸಿನಂದಾಜು ಬಡಿದರು. ಅದರ ಶಬ್ದ ಮೈಲುಗಟ್ಟಲೆ ದೂರ ಕೇಳಿರಬೇಕು. ಚೆಂಡೆಯ ಪೆಟ್ಟಿನ ಆ ತಾಳಬದ್ಧತೆ, ಆ ಸುಳಿಗಳು, ಆ ಹುರುಪು, ಲವಲವಿಕೆ, ಚೇತನ ಇವು ಅವನನ್ನು ದಂಗುಬಡಿಸಿದುವು. ಕೋಣನ ಮುಂದೆ ಅದನ್ನು ಬಾರಿಸಿದರೂ ಅದು ಕೂಡ ನಲಿಯಬಹುದೆಂದು ಭಾವಿಸಿದ.

ವೇಷಗಳೊಂದೊಂದೇ ಬಂದು ಕುಣಿಯತೊಡಗಿದುವು. ಅರ್ಥ ಹೇಳ ತೊಡಗಿದವು. ಬಾಬುವಿನ ನಿದ್ದೆ ಎಲ್ಲೋ ಜಾರಿ ಹೋಗಿತ್ತು. ಕೃಷ್ಣನು ಜನಿಸುವಾಗ ಕಂಸನು ಮಾಡುವ ತಂತ್ರದ ದೃಶ್ಯ ಮುಗಿಯಿತು.

"ಪಾಪ, ಮಗು ಹುಟ್ಟುವುದಕ್ಕೆ ಮುಂಚೆಯೇ ತಾಯಿ ತಂದೆಗಳಿಗೆ ಕಾರಾಗ್ರಹವೇ? ಅದೂ ತಾಯಿ ಕಂಸನ ತಂಗಿ!........"

ಹೀಗೆಂದು ಬಾಬು ಅವನೊಳಗೆ ತರ್ಕಿಸುತ್ತಿದ್ದಾಗಲೇ ಸೆಟ್ಟರ ಜನ ವೊಬ್ಬ ಅಲ್ಲಿಗೆ ಬಂದು ಅವನನ್ನು ಸೆಟ್ಟರು ಕರೆಯುತ್ತಾರೆಂದ. ಬಾಬು ಸೆಟ್ಟರ ಬಳಿ ಹೋದೊಡನೆ ಸೆಟ್ಟರು ಅವನ ಕೈಯಲ್ಲಿ ಎಂಟಾಣೆಯ ಪಾವಲಿ ಯೊಂದನ್ನು ಕೊಟ್ಟು ತಮ್ಮ ಮಕ್ಕಳಿಗೆ ಕಾಫಿ ಕುಡಿಸಿ, ಅವನಿಗೂ ಸ್ವಲ್ಪ ಕುಡಿಯ ಹೇಳಿದರು. ಹಾಗೆಯೇ ಬಾಬು ಅವರಿಗೆ ಕಾಫಿ ಕುಡಿಸಿ ತಾನೂ ಒಂದಿಷ್ಟು ಕುಡಿದ. ಈಗ ಅವನ ನಿದ್ದೆ ಪೂರ್ಣ ಮಾಯವಾಯಿತು.

ಆಟ ನಡೆಯುತ್ತಲೇ ಇತ್ತು. ಕೃಷ್ಣನಿಗೆ ಮೊಲೆಯುಣಿಸಲು ಬಂದ ರಕ್ಕಸಿಯನ್ನು ಕೃಷ್ಣ ಕೊಂದ. ಕಾಳಿಂಗ ಸರ್ಪವನ್ನು ಮರ್ದಿಸಿದ.

ಮತ್ತೆ ಬೆಳಗಿನ ಜಾವದಲ್ಲಿ ಕೃಷ್ಣನ ಮತ್ತು ಕಂಸನ ಕಾಳಗ. ಭಾಗ ವತರ ಕಂಠ ತುತ್ತತುದಿಗೇರಿತ್ತು. ಚೆಂಡೆಯವನ ಕೈ ಇನ್ನೂ ಚುರುಕಾ ಗಿತ್ತು. ವೇಷಗಳು ಕುಣಿಯುವ ರಭಸದಲ್ಲಿ ರಂಗಸ್ಥಳದ ಧೂಳೆಲ್ಲ ಮೇಲಕ್ಕೆ ದ್ದಿತ್ತು. ಆ ವಾತಾವರಣದಲ್ಲೇ ವಿದ್ಯುತ್ ಸಂಚಾರವಾಗುವಂತೆ ಬಾಬುವಿಗೆ ತೋರಿತು. ಜನರೆಲ್ಲ ನಿಶ್ಶಬ್ದರಾಗಿ ಕುಳಿತುಕೊಂಡು ನೋಡುತಿದ್ದರು. ಅವರ ಮನಸ್ಸು ಆವೇಶದ ಸುಂಟರಗಾಳಿಯಲ್ಲಿ ಸಿಕ್ಕಿಹೋಗಿತ್ತು. ಅವರ ಮುಖದಲ್ಲಿ ನಗು ಕೂಡ ಬಾರದು. ಮೇಲಿಂದ ಬೀಳುತಿದ್ದ ಮಂಜಿನ ಗೊಡವೆ ಕೂಡ ಅವರಿಗಿಲ್ಲ.

ಕಂಸ ಬಂದು ನಾಲ್ಕು ನೆಗೆತ ನೆಗೆದ. ನಾರಾಯಣಭಟ್ಟರ ಕಂಸ ವೇಷವೆಂದರೆ ಊರಿನಲ್ಲೇ ಪ್ರಸಿದ್ಧವಾದುದು. ಏನು ಬಣ್ಣಗಳು, ಏನು ಮೀಸೆ, ಏನು ಅಬ್ಬರ! ಚಿಕ್ಕಮಕ್ಕಳು ವೇಷವನ್ನು ನೋಡಿಯೇ ಹೆದರಿ ಹೋಗಿರಬೇಕು.

ಕೃಷ್ಣನ ವೇಷ ಹಾಕಿದವ ಹುಡುಗ. ಅವನೂ ಸಾಧಾರಣ ಹೆಸರು ಹೋದವ. ನವಿಲುಗರಿಯ ಕಿರೀಟದ ಮಧ್ಯೆ ಆ ನೀಲ ಬಣ್ಣದ ಮುಖ ಛಾಯೆಯಲ್ಲಿ ಅವನು ರಮಣೀಯವಾಗಿ ಕಾಣುತಿದ್ದ.

ಬಾಬು: "ಅಷ್ಟು ಸಣ್ಣ ಹುಡುಗ........!" ಎಂದು ಮೂಗಿನ ಮೇಲೆ ಕೈಯಿಟ್ಟ.

ಕ್ಷಣಕ್ಷಣಕ್ಕೂ ಆಟದ ಆವೇಶ ಮಹೋನ್ನತಿಯನ್ನೇರುತಿತ್ತು. ಭಾಗವತರ ಇಂಪಾದ ಮೋಹನರಾಗ ಆ ಬೆಳಗ್ಗಿನ ಜಾವದಲ್ಲಿ ಕರ್ಣಾನಂದವನ್ನುಂಟು ಮಾಡುತಿತ್ತು. ಕಂಸನ ಅರ್ಥವೆಂದರೆ: ಅವನ ಸ್ವರಕ್ಕೇ ರಂಗಸ್ಥಳದಮೇಲೆ ಹಾಕಿದ ತೆಂಗಿನ ಎಲೆಗಳು ಹಾರಿ ಹೋಗುವುವೋ ಎಂದು ಹೆದರಿಕೆಯಾಗುತಿತ್ತು.

ಕೊನೆಗೆ ಕಾಳಗ ಪ್ರಾರಂಭವಾಯಿತು. ಎಲ್ಲರೂ ನಿಶ್ಶಬ್ದ. ಕೆಲವರು ಕೂಗಿರಲೂ ಬಹುದು.

ಕೃಷ್ಣ ಕಂಸನ ಎದೆಯ ಮೇಲೆ ಕುಳಿತ.

ಮೂಡಲ ದಿಕ್ಕು ಕೆಂಪಾಗುತ್ತ ಬರುತಿತ್ತು.

ಬಾಬುವಿಗೆ ಎಲ್ಲಕ್ಕಿಂತಲೂ ಕೊನೆಯ ದೃಶ್ಯ ಮನಸ್ಸಿನಲ್ಲಿ ಅಚ್ಚಾಗಿ ಹೋಯಿತು. ಕಂಸನ ಪರಾಕ್ರಮವನ್ನು ಮರೆಯದಾದ. ಅದರೊಡನೆ ಕೃಷ್ಣನ ಬಲವೂ ಅವನಿಗೆ ಬೆರಗನ್ನುಂಟು ಮಾಡಿದ್ದಿತು.

ಕೃಷ್ಣನ ಪಾತ್ರ ವಹಿಸಲು ಅವನು ಸಿದ್ಧನಾಗಿದ್ದ. ಕೃಷ್ಣನೂ ಅವನಂತೆಯೇ ದನ ಮೇಯಿಸುತಿದ್ದವ. ಆದರೆ ಕಂಸ? ತನ್ನ ಮಾವನೇ?

ಈ ವಿವರಗಳನ್ನೆಲ್ಲ ಬಹುಬೇಗ ಮರೆತು ಬಿಟ್ಟ. ರಂಗಸ್ಥಳ, ಕಂಸನನ್ನು ಕೃಷ್ಣ ಕೊಂದ ಜಾಗ, ಎರಡು ತಿಂಗಳಲ್ಲೇ ಪುನಃ ಪೈರು ಬೆಳೆಸುವ ಗದ್ದೆಯಾಯಿತು.

ಅಂತೂ ಅಂದಿನಿಂದ ಬಾಬುವಿಗೆ ಸೆಟ್ಟರ ಮೇಲಿದ್ದ ವಿಶ್ವಾಸ ಪೂರ್ಣ ಹಾರಿ ಹೋಯಿತು. ಮಮತೆಯಂತೂ ಮೊದಲೇ ಇದ್ದಿಲ್ಲ. ಸೆಟ್ಟರು ಒಮ್ಮೊಮ್ಮೆ ಕೋಪಗೊಂಡಾಗ ಅವರ ದೇಹದಲ್ಲಿ ಆವನು ಅಧಮ ಕಂಸನ ವೇಷವನ್ನು ಕಾಣುತಿದ್ದ. ಕಂಸನಂತೆ ತನ್ನನ್ನು ಒಂದು ದಿನ ಕೊಲ್ಲಲು ಅವರು ಹವಣಿಸದಿರಲಿಕ್ಕಿಲ್ಲವೆಂದು ಹಲವು ಸಲ ನೆನೆಸಿದ್ದ.

ಇಷ್ಟಾಗುವಾಗ ಪಾರ್ವತಿಯ ಇಬ್ಬರು ಅಕ್ಕಂದಿರು ಮೊದಲೇ ಸತ್ತಿದ್ದರು. ಪಾರ್ವತಿ ಬಾಬುವಿಗೆ ಒಂದೆರಡು ವರುಷಕ್ಕೆ ಕಿರಿಯವಳು. ಆದರೆ ಬಾಬು ಅವಳೊಡನೆಯಾಗಲೀ, ಅವಳ ತಾಯಿಯೊಡನಾಗಲೀ ಮಾತನಾಡುತಿದ್ದಿಲ್ಲ. ಅವಳ ತಮ್ಮ ಕಿಟ್ಟುವಿನೊಡನೆಯೂ ಅಷ್ಟಕಷ್ಟೆ ಮಾತುಕತೆ.

ಸೆಟ್ಟರೊಮ್ಮೆ ಯಾರೊಡನೆಯೋ ಪಾರ್ವತಿಯನ್ನು ಬಾಬುವಿಗೇ ಮದುವೆ ಮಾಡುವುದೆಂದು ಹೇಳಿಬಿಟ್ಟಿದ್ದರು. ಆ ಸುದ್ದಿ ಮನೆಯೊಳಗೆ ಹರಡಿತು. ಅಂದಿನಿಂದ ಲಿಂಗಮ್ಮ ಬಾಬುವನ್ನು ಸ್ವಲ್ಪ ಆದರಪೂರ್ವಕ ಕಾಣತೊಡಗಿದಳು. ಆದರೆ ಬಾಬುವಿನ ವರ್ತನೆಯಲ್ಲಿ ಬದಲಾವಣೆಯಾಗಲಿಲ್ಲ. ಸಂಕುವಿಗೆ ಇದು ಮೊದಲು ಸ್ವಲ್ಪ ಸಂತೋಷವನ್ನುಂಟು ಮಾಡಿದ್ದರೂ, ಬಾಬುವಿನ ಅಸಡ್ಡೆಯನ್ನು ನೋಡುವಾಗ ಆವಳ ಮನಸ್ಸು ತಣ್ಣಗಾಯಿತು.

ಪಾರ್ವತಿಗೆ ಪ್ರಾಯ ಬಂದ ಬಳಿಕವೂ ಅವಳೊಡನೆ ಬಾಬು ಮಾತನಾಡಿದ್ದಿಲ್ಲ. ಅವಳೆಲ್ಲಾದರೂ ಒಂಟಿಗಳಾಗಿ ನಿಂತುದನ್ನು ಕಂಡರೆ ಬಾಬು ಆವಳಿದ್ದ ಜಾಗೆಯನ್ನು ಬಿಟ್ಟು ದೂರದಿಂದ ಹೋಗುವ. ಆವನನ್ನು ನೋಡಿ ಅವಳು ನಸುನಕ್ಕರೆ ಅವನು ಬೇರೊಂದು ಕಡೆ ನೋಡುವ.

ಪಾರ್ವತಿಯನ್ನು ಆವನೆಡೆಗೆ ಸೆಳೆಯುವಷ್ಟರ ಮಟ್ಟಿನ ಮಾಟವೂ ಆವನಲ್ಲಿತ್ತು. ಒಳ್ಳೆಯ ಅಚ್ಚುಕಟ್ಟಾದ ಶರೀರದಲ್ಲಿ ಗಟ್ಟಿಯಾದ ಮಾಂಸಖಂಡಗಳು ಅಲೆಯಲೆಯಾಗಿ ನಿಂತಿದ್ದುವು. ಅಗಲವಾದ ಎದೆ, ಆಕೃತಿಯ ಮುಖ, ತಿಳುವಾಗಿ ಒತ್ತಿದ ತುಟಿಗಳ ಮೇಲಿದ್ದ ಎಳೆ ಮೀಸೆ, ಅಗಲವಾದ ಹಣೆ ಇವೆಲ್ಲ ಪಾರ್ವತಿಯ ಮನಸ್ಸನ್ನು ಎಂದೋ ಎಚ್ಚರಿಸಿದ್ದುವು.

ಮತ್ತೆ ಪಾರ್ವತಿಗೆ ಸಂಜೀವನೊಡನೆ ಮದುವೆಯ ತಂತ್ರ ಹೇಗೆ ಹೂಡಲ್ಪಟ್ಟಿತೋ ಯಾರಿಗೂ ತಿಳಿಯದು. ಒಂದು ದಿನ ಬೆಳಿಗ್ಗೆ ಸೆಟ್ಟರು, ಈ

ಕುರಿತು ಲಿಂಗಮ್ಮನೊಡನೆ ಹೇಳಿದನು. ಕೆಲವರಿಗಾದರೂ ಇದರಿಂದ ಆಶ್ಚರ್ಯ ವಾಗದಿರಲಿಲ್ಲ.

ಅವರಲ್ಲಿ ಪಾರ್ವತಿ ಒಬ್ಬಳು.

ಕೆಲವರು ಬಾಬುವಿಗೆ ಗೇಲಿ ಮಾಡತೊಡಗಿದರು. ಅವನು ಕಪ್ಪೆಂದು ಪಾರ್ವತಿ ಸೆಟ್ಟರೊಡನೆ ಹೇಳಿದಳಂತೆ; ಅವನಿಗೆ ಓದು ಬರಹ ಬಾರದೆಂದು ಲಿಂಗಮ್ಮ ಹೇಳಿದಳಂತೆ. ಇನ್ನೂ ಹೀಗೆಯೇ ಹಲವಾರು ಊಹಾಪೋಹದ ವರದಿಗಳನ್ನು ಬಾಬು ಕೇಳತೊಡಗಿದ.

ಮದುವೆಗೆ ಎಲ್ಲ ಸಿದ್ಧವಾಗುತಿತ್ತು. ಸ್ವತಃ ಬಾಬುವೇ ಮದುವೆಗೆ ಬೇಕಾದ ತೆಂಗಿನಕಾಯಿ, ಅಡಿಕೆಗಳನ್ನೆಲ್ಲ ಸೇಖರಿಸಿದ. ಮತ್ತೆ ಬಾಳೆಗೊನೆ, ಕಾಯಿಪಲ್ಯಗಳನ್ನು ಊರೆಲ್ಲ ಸುತ್ತಾಡಿ ತಂದು ಹಾಕಿದ. ಆದರೆ ಮಾತನಾಡುವುದನ್ನು ಮಾತ್ರ ಪೂರ್ಣ ಕಡಿಮೆ ಮಾಡಿದ್ದ.

ಮತ್ತೆ ನಾಲ್ಕು ದಿನಗಳುಳಿದಿದ್ದುವಷ್ಟೆ, ಮದುವೆಗೆ. ರಾತ್ರಿ ಬಾಬು ಬಚ್ಚಲು ಕೊಟ್ಟಗೆಗೆ ಹೋಗುವಾಗ ಪಾರ್ವತಿ ಒಳಗಿನಿಂದ ಹೊರಡುತಿದ್ದಳು. ಬಾಬು ಅವಳನ್ನು ದುರದುರನೆ ನೋಡಿದ. ಎಂದೂ ನೋಡದ ಅವನು ಇಂದು ತನ್ನನ್ನು ಹೀಗೆ ನೋಡುತ್ತಿರುವುದನ್ನು ಕಂಡು ಅವಳಿಗೆ ಆಶ್ಚರ್ಯ ವಾಯಿತು.

“ ನನ್ನ ಕುರಿತು ಅಲ್ಲಸಲ್ಲದ ಮಾತುಗಳನ್ನೆಲ್ಲ ಹೇಳಿದಿ. ನಿನಗೆ ಎಂಥ ಗಂಡ ಬರುತ್ತಾನೆ ನೋಡುವ. ” ಬಾಬು ಸಾಧಾರಣ ಗಟ್ಟಿಯಾಗಿಯೇ ಹೇಳಿದ.

ಪಾರ್ವತಿ ಒಮ್ಮೆಯೇ ಅತ್ತಳು. ಜೋರಾಗಿ ಬಿಕ್ಕಿ ಬಿಕ್ಕಿ.

“ ನಾನೇನೂ ನಿಮ್ಮ ಕುರಿತು ಹೇಳಿಲ್ಲ ” ಅಳುತ್ತ ಅವಳು ಹೇಳತೊಡಗಿದಳು. “ ನಿಮ್ಮ ಕುರಿತು ನನ್ನೊಡನೆ ಯಾರೂ ಪ್ರಸ್ತಾಪವೆತ್ತಿಲ್ಲ; ನಾನು ಕೂಡ ಏನೂ ಆಡಿಲ್ಲ. ಸುಮ್ಮನೆ ನನ್ನ ಮೇಲೆ ಕೋಪಗೊಳ್ಳಬೇಡಿ. ”

“ ಆಯಿತು, ನಾನು ಕಪ್ಪಗೆ. ನಿನಗೆ ದೇವೇಂದ್ರನ ಐರಾವತವೇ ಸಿಗಲಿ. ” ಬಾಬುವಿನ ಧ್ವನಿ ಇನ್ನೂ ಕಠಿಣವಾಗಿತ್ತು.

“ ಅಯ್ಯೋ ನನ್ನ ಮೇಲೆ ಏಕೆ ಈ ಅಪವಾದ ಹೊರಿಸುತ್ತೀರಿ ? ನಿಮ್ಮ ಕುರಿತು ನಾನೇನೂ ಹೇಳಿಲ್ಲವೆಂದು ಆಣೆಯಿಡಬಲ್ಲೆ ” ಎನ್ನುತ್ತ ಪಾರ್ವತಿ

ಬಾಬುವಿನ ಹತ್ತಿರ ಬಂದಳು.

ಬಾಬು ಅವಳ ಕಣ್ಣುಗಳನ್ನೇ ನೋಡುತಿದ್ದ. ಅವಳ ಕಣ್ಣುಗಳಲ್ಲಿ ದೈನ್ಯತೆ ನಲಿದಾಡುತಿತ್ತು. ಧಾರೆಯಾಗಿ ಇಳಿಯುತಿದ್ದ ಅವಳ ಕಣ್ಣೀರು ಅವನ ಎದೆಯೊಳಗೆ ಬೊಟ್ಟಿಟ್ಟಂತಾಯಿತು.

"ನನಗೆ ಹಾಗೆಂದು ಎಲ್ಲರೂ ಹೇಳಿದರು. ಹೊಸಮನೆ ಲಕ್ಕಣ್ಣ ನೀನು ಹೇಳುವುದನ್ನು ಕೂಡ ಕೇಳಿದ್ದಾನಂತೆ!" ಬಾಬು ತುಸು ನಿಧಾನ ವಾಗಿ ಹೇಳಿದ.

"ನಾನು ಆಣೆ ಇಡುತ್ತೇನೆಂದೆ. ಬೇರೇನೂ ಹೇಳಲು ನನಗೆ ಸಾಧ್ಯ ವಿಲ್ಲ."

ಇಬ್ಬರೂ ಮತ್ತೆ ನಿಶ್ಶಬ್ದರಾದರು.

ಅಂದು ತಾನೇ ಸೆಟ್ಟರು ಹೊಸತಾಗಿ ಮಾಡಿಸಿದ ವಜ್ರದ ಲೋಲಾಕು ಗಳು ಪಾರ್ವತಿಯ ಕಿವಿಯಲ್ಲಿ ತೂಗಾಡುತಿದ್ದುವು. ಬಾಬುವಿಗೆ ಅವು ಇನ್ನೂ ಸುಂದರವಾಗಿ ಕಂಡುವು.

"ಚಿಂತಿಲ್ಲ. ನಿನ್ನ ಲೋಲಾಕು ಬಹಳ ಚೆನ್ನಾಗಿದೆ." ಬಾಬು ನಸು ನಗುತ್ತ ಹೇಳಿದ. ಅವನ ಮುಖದಲ್ಲಿಯ ಕೋಪ ಮಾಯವಾಗಿತ್ತು.

"ಇವತ್ತು ತಾನೇ ಅಪ್ಪ ಮಾಡಿಸಿದರು" ಪಾರ್ವತಿ ನುಡಿದಳು. ಅವಳು ಅಲ್ಲಿಂದ ಫಕ್ಕನೆ ಸರಿದು ಹೋಗುವಂತಿರಲಿಲ್ಲ. ಒಳಗಿನ ಬಾಗಿಲಿಗೆ ಒರಗಿ ನಿಂತಿದ್ದಳು. ಸೆಟ್ಟರು ಮತ್ತು ಲಿಂಗಮ್ಮ ದೇವಸ್ಥಾನಕ್ಕೆ ಹೋಗಿ ದ್ದುದು ಇಬ್ಬರಿಗೂ ಗೊತ್ತಿತ್ತು.

"ಆ ಮೂಗುತಿ?" ಕೆಂಪು ಕಲ್ಲಿನ ಹೊಳೆಯುವ ಮೂಗತಿಯ ಕಡೆ ಬೆರಳು ತೋರಿಸುತ್ತ ಬಾಬು ಕೇಳಿದ.

"ಹ್ಹೊ!" ನಗುತ್ತ ಪಾರ್ವತಿ ಹೇಳಿದಳು "ಅದಕ್ಕೆ ಎಷ್ಟು ವರುಷ ಗಳಾದುವು?"

ಬಾಬುವಿಗೆ ಅವಳ ನಗುವಿನ ಮಬ್ಬಿನಲ್ಲಿ ಮೂಗುತಿಯ ಮೇಲಿನಿಂದ ಕಣ್ಣು ತೆಗೆಯದಾಯಿತು—ಅವನು ಇನ್ನೂ ಸ್ವಲ್ಪ ಹತ್ತಿರ ಹೋದ.

"ಅಬ್ಬಾ, ನೀವು ನನ್ನನ್ನು ಈತನಕ ನೋಡಿಲ್ಲವೆ?" ಪುನಃ ಪಾರ್ವತಿ ಕೇಳಿದಳು.

"ಉಹೂಂ. ಇಲ್ಲ. ನೀನಾರು? ನಾನಾರು?"

"ಒಂದೇ ಪಾತ್ರದ ಅನ್ನವನ್ನು ಇಷ್ಟು ಸಮಯ ತಿನ್ನುತಿದ್ದರೂ!" ಬಾಬುವಿಗೆ ಕಣ್ಣು ಕತ್ತಲೆಯಾದಂತಾಯಿತು. ಏನು ಚೆಲುವು ಪಾರ್ವತಿಯದು! ಅವನಂದಂತೆ ಅವಳನ್ನು ಅವನು ಆತನಕ ಎಂದೂ ನೋಡಿದ್ದಿಲ್ಲ. ಏನೋ ಚಿಕ್ಕವಳಾಗಿರುವಾಗ ಅವನು ಅವಳನ್ನು ಆಡಿಸುತಿದ್ದಿರಬಹುದು. ಅತ್ತಿತ್ತ ಎತ್ತಿಕೊಂಡು ಹೋಗಿರಬಹುದು.

"ಹೌದು ನೋಡಿದ್ದೆ.........ಆದರೆ ಆಗ........"

"ಆಗ ಮೂಗುತಿ ಇರಲಿಲ್ಲವೆ?"

"ಊಹೂಂ........"

ಬಾಬುವಿನ ಮನಸ್ಸು ಸೋತಿತು. ಪಾರ್ವತಿ ಯಾವುದೋ ಬೇರೆ ಲೋಕಕ್ಕೆ ಸೇರಿದ್ದವಳೆಂದು ಅವನು ಈತನಕ ಯೋಚಿಸಿದ್ದ (ಬಹುಶಃ ಅವಳ ಕುರಿತು ಏನೂ ಯೋಚಿಸಿರಲೇ ಇಲ್ಲ.) ಸೆಟ್ಟರ ಮನೆಯಲ್ಲೆಷ್ಟೋ ಜಾನುವಾರುಗಳು, ಬೆಕ್ಕುಗಳು, ನಾಯಿಗಳು, ಒಕ್ಕಲಿಗರ ಆಳುಗಳು ಇದ್ದರು. ಪಾರ್ವತಿಯೂ ಅವುಗಳಲ್ಲಿ ಒಬ್ಬಳಾಗಿದ್ದಳು ಬಾಬುವಿನ ಮನಸಿನಲ್ಲಿ.

"ಅದೇಕೆ ಮಾತನಾಡುವುದನ್ನೇ ನಿಲ್ಲಿಸಿಬಿಟ್ಟಿರಿ? ಇನ್ನು ನಾನು ಎರಡು ಮೂರು ದಿನ ಮಾತ್ರ ಇದ್ದೇನಷ್ಟೆ."

"ಅದಕ್ಕಾಗಿಯೇ ಮಾತನಾಡಲಾರೆ. ಮಾತನಾಡಿ ಏನು ಪ್ರಯೋಜನ? ಏನೋ ಹೀಗೆಲ್ಲ ನೀನು ಹೇಳಿದಿ ಎಂದು ಕೇಳಿ ಮಾತ್ರ ಈಗ ಕೇಳಿದೆ ಅಷ್ಟೆ. ಇಲ್ಲವಾದರೆ ಈಗಲೂ ನಿನ್ನೊಡನೆ ಮಾತನಾಡುತಿದ್ದಿಲ್ಲ."

"ಅದು ನನಗೆ ಚನ್ನಾಗಿ ಗೊತ್ತಿದ್ದುದೇ."

ಬಾಬು ಅವಳ ಕೈಗಳನ್ನು ಹಿಡಿದುಕೊಂಡ. ಅವುಗಳಲ್ಲಿ ಮಾಂಸ ತುಂಬಿ ನರಗಳ ಇಲ್ಲವೇ ಎಲುಬುಗಳ ಛಾಯೆ ಕೂಡ ಕಾಣುತಿದ್ದಿಲ್ಲ. ಅವನು ಅವುಗಳನ್ನು ಹಿಡಿದುಕೊಂಡಿದ್ದಂತೆಯೇ ಅವು ಅವನ ಬೆನ್ನಹಿಂದೆ ಹೋದುವು.

ಮತ್ತೆ ಅವರು ಮಾತನಾಡಿಕೊಂಡಿದ್ದಿಲ್ಲ. ಅವರಿಬ್ಬರ ತುಟಿಗಳು, ಕಣ್ಣುಗಳು, ಮೂಗುಗಳು, ಕೈಗಳು ಮತ್ತು ಎದೆಗಳೇ ಮೂಕವಾಗಿ ಸಂಭಾಷಿಸತೊಡಗಿದುವು. ಪ್ರತಿಯೊಂದು ಸ್ಪರ್ಶದಲ್ಲೂ ಅಪ್ರತಿಮ ಶಕ್ತಿ, ಚೇತನಗಳಿದ್ದುವು. ಅವರಿಗೆ ಇಬ್ಬರೂ ಅಂಥ ಮಾನವ್ಯತೆಯ, ಜೀವನದ ಸುಖ

ವನ್ನು ಅನುಭವಿಸಿದುದಿಲ್ಲ. ಆ ಅನುಭವವೇನೆಂಬುದೂ ಅವರಿಬ್ಬರಿಗೂ ಗೊತ್ತಿರಲೂ ಇಲ್ಲ.

ಗಳಿಗೆಗಳು ಒಂದರ ಹಿಂದೆ ಒಂದಾಗಿ ಅನಂತದೊಡನೆ ಲೀನವಾಗುತಿದ್ದುವು. ಸುತ್ತಲಿನ ಹುಣಸೆಯ, ಮಾವಿನ, ಪಾರಿಜಾತದ, ಸಂಜೆಮಲ್ಲಿಗೆಯ ಮರ–ಗಿಡಗಳಿಂದ ಒಂದೇ ಸವನೆ ಅತಿಶಯವಾದ ಸೌರಭ್ಯ ಹರಡುತ್ತಲಿತ್ತು. ಪಾರ್ವತಿಗೆ ಬಾಬುವಿನ ಮೈಯ್ಯ ಬೆವರ ವಾಸನೆ ಅಮಲೇರಿಸಿತ್ತು. ಅವನ ಉಪ್ಪುಪ್ಪಾದ ಮುಖ–ಎದೆಗಳನ್ನೆಲ್ಲ ಮುದ್ದಿಸಿದಳು. ಅವನು ಮೃದುವಾಗಿ ಅವಳ ತೆರೆತೆರೆಯಾಗಿ ಹಾರುತಿದ್ದ ಮುಂಗುರುಳನ್ನು ಸವರುತಿದ್ದ.

ತಾವು ಎಲ್ಲಿರುವೆವೆಂದು ಇಬ್ಬರಿಗೂ ತುಸು ಹೊತ್ತಿನ ತನಕ ಗೊಡವೆಯಿಲ್ಲ. ಪಾರ್ವತಿಯ ಸೀರೆಯ ಸೆರಗು ತನ್ನಿಂದ ತಾನಾಗಿಯೇ ಕೆಳಗೆ ಜಾರಿತು. ಒಳಗಿನ ಕುಪ್ಪಸದ ಗುಬ್ಬಿ ಸಿಡಿದು ಬೀಳುವಂತಿತ್ತು. ಅದರ ಸೀಳಿನ ನಡುವೆ ಅವಳ ತಾರುಣ್ಯ ತುಂಬಿದ ಮೊಲೆಗಳ ಗೋದಿ ಬಣ್ಣದ ಛಾಯೆ ಬಾಬುವಿನ ಕಣ್ಣುಗಳನ್ನು ಕುಕ್ಕಿತು.

ತುಂಟ ಗಾಳಿಯೊಂದು ಬದಿಯಲ್ಲಿದ್ದ ಚಿಮಣಿ ದೀಪವನ್ನು ನಂದಿಸಿತು. ಆದರೂ ಪಾರ್ವತಿಗೆ ಬಾಬು, ಬಾಬುವಿಗೆ ಪಾರ್ವತಿ ಸ್ಪಷ್ಟವಾಗಿ, ರೂಪರೇಷೆಗಳ ಸಹಿತ ಒಬ್ಬರಿಗೊಬ್ಬರು ಕಾಣುತಿದ್ದಾರೆ. ಇಬ್ಬರ ಎದೆಗಳೂ ಕೆಳಗೆ ಮೇಲಾಗುತ್ತಿವೆ. ಭುಜಗಳು, ಹೊಟ್ಟೆ ತೊಡೆಗಳು, ಮೊಣಕಾಲುಗಳು, ಪಾದಗಳು—ಎಲ್ಲ ಸಜೀವವಾಗಿ ಸಾಮರ್ಥ್ಯವುಯವಾಗಿ, ಕಿಡಿ ಕಾರುವಂತಿದ್ದುವು. ಆ ಕತ್ತಲಿನ ಅನಂತದಲ್ಲಿ, ಆ ಕ್ರಿಮಿ ಕೀಟಗಳ 'ಗೊಂಯ್' ಎನ್ನುವ ಸ್ವರದಲ್ಲಿ, ಆ ಉನ್ಮಾದವನ್ನುಂಟು ಮಾಡುವ ಪರಿಮಳದ ತಂಗಾಳಿಯ ಬಲೆಯಲ್ಲಿ ಅವರಿಬ್ಬರೂ ಉಸಿರು ಬಿಡಲು, ಒಬ್ಬರಿಗೊಬ್ಬರು ಸಿಡಿದು ಬೀಳಲು ಹೆಣಗಾಡುತಿದ್ದರು.

ಆ ಗಾಢವಾದ ಸುಖಾನುಭವ ಇಬ್ಬರನ್ನೂ ಕನಸಿನಲ್ಲಿರುವವರಂತೆ ಮಾಡಿತ್ತು.

ನಾಲ್ಕು ದಿನಗಳ ಬಳಿಕ ಮದುವೆ ತೀರಿತು.

ಬಾಬು ಒಂದು ಗೇಣು ತಗ್ಗಿ ಹೋದಂತಾಗಿದ್ದ. ಅವನ ಮುಖ ಜೋಲು ಬಿದ್ದಿತ್ತು. ಕಣ್ಣುಗಳು ನಿರ್ಜೀವವಾಗಿದ್ದುವು.

ಸಮಾರಂಭದ ದಿನವೂ ಅವನನ್ನು ಯಾರೂ ಏನೆಂದು ವಿಚಾರಿಸಲಿಲ್ಲ. ಅವನಾಗಿ ಯಾರೊಡನೆಯೂ ಏನೂ ಹೇಳಲಿಲ್ಲ.

ಅಂದು ವಿಶೇಷ ಚುರುಕಾಗಿದ್ದವರೆಂದರೆ ಸೆಟ್ಟರೊಬ್ಬರೇ.

# ಅಧ್ಯಾಯ ಮೂರು.

ಸಂಜೀವನು ಪಾರ್ವತಿಯನ್ನು ಮನೆಗೆ ಕರೆದು ತಂದುದಾಯಿತು. ಪಾರ್ವತಿಗೆ ಅವಳ ಮನೆಗೂ ಈ ಹೊಸ ಮನೆಗೂ ಏನೂ ಒಂದು ವಿಶಿಷ್ಟ ಅಭ್ಯಂತರ ಕಾಣದಾಯಿತು.

ಎರಡು ಮನೆಗಳೂ ಹಳ್ಳಿಯಲ್ಲೇ. ಸುತ್ತುಮುತ್ತಲಿನ ಮರ–ಗಿಡಗಳು, ಬಯಲುಗಳು, ಗುಡ್ಡೆ ಕಾಡುಗಳು ಎಲ್ಲ ಒಂದೇ ತರಹದವು. ಪಾರ್ವತಿಯ ತಂದೆಯ ಮನೆ ಒಂದು ಗದ್ದೆಯ ಮೇಲಾಗಿದ್ದರೆ, ಸಂಜೀವನ ಮನೆ ಗುಡ್ಡೆಯ ಅಂಚಿನಲ್ಲಿತ್ತು. ಮನೆಯ ಕೆಳಗೆ ಒಂದು ದೊಡ್ಡ ತೋಡು, ಅದರಾಚೆ ಹಸರು ಗದ್ದೆಗಳು. ಮನೆಯ ಹಿಂಬದಿ ಕರಾಲು ಬೋಗಿ ಮರಗಳ ಕಾಡು.

ಮನೆ ಸಾಧಾರಣ ದೊಡ್ಡ ಮನೆ. ಮಹಡಿಯಿದ್ದಿಲ್ಲ. ಮನೆ ಮತ್ತು ಚಾವಡಿಗೆ ಹಂಚು ಹಾಕಿದ್ದರು. ಉಳಿದ ಕಡೆ ಮುಳಿಹುಲ್ಲೇ. ವಿಶಾಲವಾದ ಅಂಗಳ, ಆಳವಾದ ಬಾವಿ, ದೊಡ್ಡ ಹಟ್ಟಿ. ಹಟ್ಟಿಯಲ್ಲಿ ತುಂಬ ದನಕರುಗಳು. ಕೊಟ್ಟಿಗೆ ತುಂಬ ನೇಗಿಲುಗಳು, ನೊಗಗಳು.

ಪಾರ್ವತಿಗೆ ಬಂದ ದಿನವೇ ಇವೆಲ್ಲವುಗಳ ಸಂಪೂರ್ಣ ಪರಿಚಯವಾಗಿತ್ತು. ಅವಳು ಒಂದನ್ನೂ ಮುಟ್ಟಿರಲಿಲ್ಲ. ಒಂದು ಕಡೆಗೂ ಹೋಗಿರಲಿಲ್ಲ; ಆದರೆ ಕಣ್ಣಿನಲ್ಲಿ ಕಂಡುದೇ ಸಾಕಾಗಿತ್ತು.

ಸಂಜೀವನ ಮಲಗುವ ಕೋಣೆ ಚಾವಡಿಯ ಬದಿಯಲ್ಲಿ. ಅವನ ಅಜ್ಜ ಸುವಪ್ಪಸೆಟ್ಟರ ಕಾಲದಲ್ಲಿ ಅದು ಅಕ್ಕಿ ದಾಸ್ತಾನು ಮಾಡುವ ಜಮೆ ಉಗ್ರಾಣವಾಗಿತ್ತು. ಅವರು ಸತ್ತ ನಂತರ ಸಂಜೀವನ ತಾಯಿ ಪೂವಕ್ಕೆ ಅದಕ್ಕೆ ಸುಣ್ಣ ಸಾರಿಸಿ ಮಲಗುವ ಕೋಣೆಯನ್ನಾಗಿ ಮಾಡಿದಳು. ಅವಳ

ಗಂಡ ಮಂಜಣ್ಣರೈಗಳೂ ಅವಳೊಡನೆ ಅಲ್ಲಿ ವಾಸಿಸಿದ್ದರು. ಮತ್ತೆ ಹಳ್ಳಿಯ ಮನೆಗಳಲ್ಲೇನಾದರೂ ಇಂಥಿಂಥವರಿಗೆ ಇಂಥಿಂಥ ಕೋಣೆಗಳೆಂದು ನಿರ್ದಿಷ್ಟ ವಿತರಣೆಯ ಪದ್ಧತಿಯಿಲ್ಲವಾದರೂ ಮದುವೆಯಾದವರಿಗೆ ಸಾಮಾನ್ಯ ಗೋಪ್ಯ ಜೀವನವನ್ನು ನಡೆಸಲಿಕ್ಕಾಗಿ ಒಂದೊಂದು ಕೋಣೆಯನ್ನು ಹಂಚಿ ಬಿಡುವುದಿತ್ತು.

ಸಂಜೀವ ಇಂದು ಆ ಕೋಣೆಯೊಳಗೆ ಹೊಕ್ಕಿದ. ಒಳಗೆ ಹೊಸ ತಾಗಿ ಸಾರಿಸಿದ ಸುಣ್ಣದ ಪರಿಮಳ ಬರುತಿತ್ತು. ಅಲ್ಲೇ ದೊಡ್ಡದಾದ ಆ ಮಂಚ. ಅದರ ಕಾಲುಗಳೆಲ್ಲ ಉರುಟುರುಟಾಗಿವೆ. ಉದ್ದದ ಎರಡು ಬದಿಗಳಿಗೂ ಮರದ ತುಂಡುಗಳನ್ನು ಜೋಡಿಸಿದ ಆವರಣಗಳು. ಎಲ್ಲವು ಕರಿದಾದ ಬೀಟೆಯ ಮರದಿಂದಲೇ ಮಾಡಲ್ಪಟ್ಟವುಗಳು.

ಸಂಜೀವನಿಗೆ ಆ ಮಂಚದ ಬಳಿ ಸಾರುವಾಗ ಮೈ ಜುಮ್ಮೆಂದಿತು. ಅದಕ್ಕೆ ಎಷ್ಟು ಕಾಲವಾಗಿತ್ತೋ ಅವನಿಗೆ ತಿಳಿಯದು. ಅವನ ಅಜ್ಜಿ ಕೂಡ ಅವನು ಚಿಕ್ಕವನಿರುವಾಗ, ಅವಳ ಅಜ್ಜ ಅದರಲ್ಲಿ ಮಲಗುತಿದ್ದನೆಂದು ಹೇಳು ತಿದ್ದಳು. ಆ ಕುಟುಂಬದ ಪೀಳಿಗೆಯ ಉದ್ಭವಸ್ಥಾನ ಅದು. ಮುಂದುವರಿ ಯುತಿದ್ದ, ನಿರಂತರವಾದ ಜೀವನ ಪ್ರವಾಹದ ಸಂಕೇತ ಅದು. ಹಾಗೆಂದು ಸಂಜೀವನಿಗೆ ತೋರುತಿತ್ತು. ಆ ಮಂಚಕ್ಕೆ ನಾಲಿಗೆಯಿರುತಿದ್ದರೆ, ಎಷ್ಟು ಜನ ದಂಪತಿಗಳ ರಹಸ್ಯ ಜೀವನವನ್ನು ಅದು ಹೇಳಬಹುದಿತ್ತು! ಇನ್ನೂ ಅದು ನಶಿಸಿ ಹೋಗುವಂತೆ ತೋರುತಿದ್ದಿಲ್ಲ. ತಲತಲಾಂತರಗಳ ಬಾಳಿಕೆ ಅದಕ್ಕೆ. ಇನ್ನು ಸಂಜೀವನ ಮಕ್ಕಳು, ಅವರ ಮಕ್ಕಳು—ಹೀಗೆ ಯಾರ ತಲೆಯವರೆಗೆ ಅದು ಬಾಳುವುದೋ!

ದೀಪ ಹಚ್ಚಿದ ಬಳಿಕ ಕುಟುಂಬವಿಡೀ ಊಟಕ್ಕೆ ಕುಳಿತುಕೊಂಡಿತು ನೆಲದ ಮೇಲೆ. ದೊಡ್ಡ ದೊಡ್ಡ ಕಂಚಿನ ಬಟ್ಟಲುಗಳಲ್ಲಿ ಅನ್ನ ಪದಾರ್ಥ ಗಳನ್ನು ಬಡಿಸಿಯಾಯಿತು. ಅಂದು ಔತಣಕ್ಕೆಂದು ಎರಡು ಕೋಳಿಗಳನ್ನು ಕಡಿದಿದ್ದರು. ಪದಾರ್ಥಗಳ ಪರಿಮಳ ಇಡೀ ಮನೆಯನ್ನೇ ತುಂಬಿತ್ತು.

ಪಾರ್ವತಿಯ ಒಟ್ಟಿಗೆ ಅವಳ ತಮ್ಮ ಕಿಟ್ಟುವೂ ಬಂದಿದ್ದ. ಅವನಿನ್ನೂ ಹದಿಮೂರು–ಹದಿನಾಲ್ಕರ ಹುಡುಗ. ಭಾವ ಸಂಜೀವ ಮತ್ತು ಅವನಣ್ಣ ದೇವಪ್ಪ ಆಗಲೇ ಅವನಿಗೆ ಸಾಕಷ್ಟು ಕೀಟಲೆಗಳನ್ನು ಕೊಟ್ಟಿದ್ದರು. ಈಗ

ಊಟ ಮಾಡುವಾಗ ಅವನ ಬಟ್ಟಲಿಗೆ ಬಿದ್ದುದು ಕೋಳಿಯ ಎಲುಬು ಮತ್ತು ಗರಿಗಳು ಮಾತ್ರ. ಮನುಷ್ಯನಾದವ ಅವೆರಡನ್ನೂ ತಿನ್ನಲಾರ. ಕಿಟ್ಟು ಕಣ್ಣನ್ನು ಪಿಳಿಪಿಳಿ ಮಾಡುತ್ತ ಅತ್ತಿತ್ತ ನೋಡತೊಡಗಿದ. ಹಾಗೂ ಹೀಗೂ ಅನ್ನ ಬಾಯಿಯೊಳಗೆ ಸೇರುತಿತ್ತು. ಆದರೆ ಪದಾರ್ಥ !

" ಏನು ಭಾವಯ್ಯ, ಪದಾರ್ಥಕ್ಕೆ ಉಪ್ಪು ಸ್ವಲ್ಪ ಕಡಿಮೆಯಾಗಿದೆಯೆ ? ಶಂಕರಿ, ಸ್ವಲ್ಪ ಉಪ್ಪು ಹಾಕು ಭಾವನಿಗೆ. "

ದೇವಪ್ಪನೆಂದ:

ಶಂಕರಿ ( ಸಂಜೀವನ ತಂಗಿ ) ಒಂದಷ್ಟು ಉಪ್ಪನ್ನು ತಂದು ಕಿಟ್ಟುವಿನ ಬಟ್ಟಲಿಗೆ ಹಾಕಿದಳು.

ಕಿಟ್ಟುವಿಗೆ ಮತ್ತೆ ಅನ್ನ ಮುಟ್ಟಲಾಗಲಿಲ್ಲ. ಶಂಕರಿ ದೂರದಲ್ಲಿ ನಿಂತು ಕೊಂಡು ದೀಪದ ಮರೆಯಲ್ಲಿ ನಗುತಿದ್ದಳು. ಉಳಿದವರು ಗಂಭೀರವಾಗಿ ನಟಿಸುತಿದ್ದರೂ ನಗು ಅವರ ದವಡೆಗಳ ಮೂಲಕ ಇಲ್ಲವೇ ಗಲ್ಲದ ಮೂಲಕ ಹೊರಸೂಸದಿರುತಿದ್ದಿಲ್ಲ.

" ಭಾವ ಎದ್ದ. ಸ್ವಲ್ಪ ನೀರು ಕೊಡಿ. "

ಎನ್ನುವಾಗ ಶಂಕರಿ ಒಂದು ತಂಬಿಗೆಯನ್ನು ಹಿಡಿದು ಸಿದ್ಧವಾಗಿದ್ದಳು. ಕಿಟ್ಟು ನಾಚಿಕೆಯಿಂದ ಅದನ್ನು ಹಿಡಿದುಕೊಂಡು ಹೊರಗೆ ಓಡಿ ನೀರನ್ನು ಮುಖಕ್ಕೆ ಹಾಕಿಕೊಂಡ. ಒಮ್ಮೆಯೇ ಅವನ ಕಣ್ಣುಗಳನ್ನು ತೆರೆಯದಂತಾ ಯಿತು. ಬಾಯಿಯಿಡೀ ಬೊಕ್ಕೆಗಳೇಳುವವೋ ಎಂದು ಅವನಿಗೆ ಹೆದರಿಕೆ ಯಾಯಿತು. ಶುದ್ಧ ಮೆಣಸಿನ ನೀರು !

" ಚಾವಡಿಗೆ ಹೋಗಿ ಭಾವಯ್ಯ ! ಹಾಸಿಗೆ ಹಾಸಿದೆ " ಎನ್ನುತ್ತ ದೇವಪ್ಪ ಕೈಯ್ಯಲ್ಲಿದ್ದ ದೀಪ ನಂದಿಸಿದ. ಸಂಜೀವನ ಕೈಯ್ಯಲ್ಲಿದ್ದ ಅನ್ನದ ಮುದ್ದೆಯನ್ನು ಕಿಟ್ಟುವಿನ ತಲೆಗೆ ಸವರಿಯಾಯಿತು.

ಕಿಟ್ಟು "ಅಯ್ಯೋ ಅಯ್ಯೋ" ಎಂದು ಅಳಲು ಆರಂಭಿಸಿದ್ದ. "ಅಯ್ಯೋ ನನ್ನನ್ನು ಕೊಂದರಪ್ಪಾ ಕೊಂದರು ! " ಎನ್ನುವ ಅವನ ಬೊಬ್ಬೆ ಬಯಲು ಬಯಲುಗಳಲ್ಲಿ ಪ್ರತಿಧ್ವನಿಗೊಂಡಿರಬೇಕು.

ಪೂವಕ್ಕ ಹೊರಗೆ ಬಂದು " ಅಯ್ಯೋ ಪಾಪ ! ಹುಡುಗನಿಗೆ ಹೀಗೆಲ್ಲ ನೀವು ಉಪದ್ರ ಕೊಡುತ್ತೀರಲ್ಲ ! ಅವನು ನಿಮ್ಮಂತೆಯೇ ಕೋಣನ ಹಾಗೆ

ಬೆಳೆದಿದ್ದರೆ ಪ್ರತಿಯಾಗಿ ನಿಮಗೂ ಹಾಗೆ ಮಾಡದೆ ಬಿಡುತ್ತಿದ್ದನೆ? ಬಿಡಿ ಅವನನ್ನು" ಎಂದು ಅವರಿಗೆ ಗದರಿಸುತ್ತ ಕಿಟ್ಟುವನ್ನು ಹಿಡಿದೆಳೆದು ಒಳಗೆ ಕರೆದುಕೊಂಡು ಹೋಗಿ ಮುಖಕ್ಕೆಲ್ಲ ತುಪ್ಪವನ್ನು ಸವರಿದಳು. ಶಂಕರಿಯ ನಗು ಇನ್ನೂ ನಿಂತಿರಲಿಲ್ಲ.

"ಹಂ, ಮುಂಡೆ! ನೀನು ಇದರಲ್ಲಿ ಸೇರಿ ಬಿಟ್ಟಿದ್ದಿಯಲ್ಲ! ಇನು ನೋಡಿದರೆ ನಿನ್ನ ಹಲ್ಲನ್ನೆಲ್ಲ ಉದುರಿಸುತ್ತೇನೆ."

ಪೂವಕ್ಕ ಹೀಗೆನ್ನುವಾಗ ಶಂಕರಿ ಓಡಿಹೋಗಿಯಾಗಿತ್ತು.

ಸಂಜೀವ ಮತ್ತು ದೇವಪ್ಪ ಹೊರಗಿನಿಂದಲೇ ನಗುತ್ತ, "ಛೆ! ಭಾವಯ್ಯ! ನಮ್ಮ ತಾಯಿ ಬೇಕೆಂದೇ ನಮ್ಮ ಮೇಲೆ ಆರೋಪ ಹೊರಿಸು ತಿದ್ದಾಳೆ. ಬನ್ನಿ ಮಲಗೋಣ" ಎನ್ನುತಿದ್ದರು.

"ನೀವು ಇಲ್ಲಿಂದ ನಡಿಯುತ್ತೀರೋ ಇಲ್ಲವೋ?" ಎನ್ನುತ್ತ ಅಲ್ಲಿದ್ದ ಕಸಬರಿಗೆಗೆ ಪೂವಕ್ಕ ಕೈಹಾಕಿದಳು. ಅವರಿಬ್ಬರೂ ಓಡಿದರು.

ಶಂಕರಿ ಪಾರ್ವತಿಯ ಹತ್ತಿರ ಇಳಿ ದನಿಯಲ್ಲಿ ಮಾತನಾಡುತಿದ್ದಳು. ಶಂಕರಿಗೆ ಹತ್ತು ವರುಷವಾಗಬಹುದು. ಆದರೆ ನೋಡುವಾಗ ಹನ್ನೆರಡು–ಹದಿಮೂರು ವರುಷದ ಹುಡುಗಿಯಂತೆ ಕಾಣುತಿದ್ದಳು. ಅಂಥ ದೇಹದ, ಅಚ್ಚುಕಟ್ಟು, ಅಂಥ ಲವಲವಿಕೆ. ರೂಪವೂ ಬೇಡವಾದುದಲ್ಲ. ಅವಳು ಆ ಒಳಗೇ ಪಾರ್ವತಿಯೊಡನೆ ತುಂಬ ಸಲುಗೆ ಬೆಳೆಸಿದ್ದಳು. "ಅಣ್ಣನ ಹತ್ತಿರ ಹೇಳುತ್ತೇನೆ" "ಅಣ್ಣ ನಿಮಗೆ ಹೊಡೆದಾನು" "ಅಣ್ಣ ನಿಮಗೆ ಬೈದಾನು" ಎಂದು ಅನೇಕ ಸಲ ಪಾರ್ವತಿಗೆ ಹೇಳಿಯಾಗಿತ್ತು.

ಪಾರ್ವತಿ ಮಾತ್ರ ಬಹಳ ಮಿತವಾಗಿ ಮಾತನಾಡುತಿದ್ದಳು. ನಗು ಬಹಳ ಕಡಿಮೆ. "ಹೂಂ–ಉಹೂಂ" ಇಂಥ ಸಂಕೇತಮಯ ಉತ್ತರಗಳೇ ಹೆಚ್ಚು. ಈಗ ಏನಿಲ್ಲದಿದ್ದರೂ ಹೊಟ್ಟೆ ತುಂಬ ಉಂಡಾಗಿತ್ತು. ಕೋಳಿಯ ಎದೆಗುಂಡಿಗೆಯನ್ನು ಅವಳ ಅತ್ತೆ ಬಹಳೇ ಬಡಿಸಿದ್ದಳು. ಪಾರ್ವತಿಗೆ ತುಂಬ ರುಚಿಯಾಗಿ ಕಂಡಿತ್ತದು.

ಅಪ್ಪರೊಳಗೆ ಹೊರಗೆ ಬೈದುಕೊಳ್ಳುವುದು ಕೇಳಬಂತು. ಪೂವಕ್ಕ, ಶಂಕರಿ, ಪಾರ್ವತಿ ಎಲ್ಲ ಹೋದರು. ದೇವಪ್ಪ ಒಂದು ಕತ್ತಿಯನ್ನು ಹಿಡಿದು ಕೊಂಡಿದ್ದಾನೆ. ಸಂಜೀವ ಒಂದು ದೊಣ್ಣೆಯನ್ನು ತಿರುಗಿಸುತಿದ್ದಾನೆ.

"ಬೋಳೀಮಗನೇ, ನನ್ನ ಹಣ ಕದ್ದೂ ಇಲ್ಲವೆನ್ನುತ್ತೀಯಾ?"

"ನಿನ್ನಪ್ಪ ನಿನ್ನ ಹಣ ಕದ್ದಿದ್ದಾನೆ."

"ಯಾರೆಂದು ನಿನಗೆ ತೋರಿಸುತ್ತೇನೆ ನಾಯಿಮಗನೆ. ನಿನಗೆ ಮದುವೆ ಮಾಡಿದ್ದಲ್ಲ, ನಿನ್ನನ್ನು ಸುಟ್ಟದ್ದು. ನಿನ್ನ ನಾಲಿಗೆಯನ್ನು........"

"ಮುಚ್ಚು ಬಾಯಿ ರಂಡೇಮಗನೇ. ನಿನ್ನ ನೆತ್ತಿಗೇರಿದ ಪಿತ್ಥವನ್ನೆಲ್ಲ ಇಳಿಸಿ ಬಿಡುತ್ತೇನೆ."

ಹೀಗೆಂದು ಮುಂದುವರಿಯುತಿದ್ದ ಸಂಜೀವನನ್ನು ಕಂಡು ಪೂವಕ್ಕ ಓಡಿ ಹೋಗಿ ಅವರ ಮಧ್ಯೆ ನಿಂತುಕೊಂಡು,

"ಅಯ್ಯೋ ನನ್ನನ್ನು ಮೊದಲು ಕೊಂದು ಬಿಡಿರಪ್ಪ! ಆಮೇಲೆ ನೀವು ಬೇಕಾದ್ದನ್ನು ಮಾಡಿಕೊಳ್ಳಿ. ಇದನ್ನೆಲ್ಲ ನೋಡಲಿಕ್ಕಿದ್ದರಲ್ಲವೆ ನನಗೆ ದುಃಖ?" ಎಂದು ಗೋಳಿಟ್ಟಳು.

ಸಂಜೀವನ ದೊಣ್ಣೆ ಹಿಂದೆ ಹೋಯಿತು. ದೊಡ್ಡ ದೊಣ್ಣೆ ಅದು. ಕಳ್ಳಕಾಕರಿಗೆ ಹೆದರಿಸಲಿಕ್ಕೆ ಮನೆಯಲ್ಲಿ ಪರಂಪರೆಯಾಗಿ ಮಾಡಿನಲ್ಲಿಟ್ಟಿದ್ದ ತಾಳೆ ಮರದ ದೊಣ್ಣೆ. ಕೆಲವು ವೇಳೆ ಹೊಗೆಸೊಪ್ಪಿನ ನಸ್ಯವನ್ನು ತಯಾರಿಸಲೂ ಉಪಯೋಗಿಸುತಿದ್ದರು.

ದೇವಪ್ಪನ ಕತ್ತಿಯೂ ಕೆಳಗಾಯಿತು. ಅದು ಪ್ರಸಿದ್ಧ ಕತ್ತಿ. ದೇವಪ್ಪನ ಅಜ್ಜ ಮೈಲಣ್ಣ ಅದರಿಂದ ಇಬ್ಬರ ಕುತ್ತಿಗೆಗಳನ್ನು ಒಂದೇ ಕಡಿತದಲ್ಲಿ ಹಾರಿಸಿದ್ದರಂತೆ. ಅವರ ತಮ್ಮ ದೇಜುಸೆಟ್ಟರು ಆ ಕತ್ತಿಯ ಬಲದಿಂದಲೇ ತಮ್ಮ ಮನೆತನದ ಆಸ್ತಿಯನ್ನು ಹತ್ತು ಪಾಲು ಬೆಳೆಸಿದ್ದರಂತೆ.

ಇದು ಹೆಚ್ಚುಕಡಿಮೆ ಅನುದಿನದ ದೃಶ್ಯ. ಪೂವಕ್ಕೆಯ ಪ್ರತ್ಯಕ್ಷವೇ ಅದಕ್ಕೆ ಪರಿಹಾರ.

ಪಾರ್ವತಿಗೆ ದಂಗು ಬಡೆದಂತಾಗಿತ್ತು. ಕಿಟ್ಟು ಇನ್ನೂ ಅಡಿಗೆಯ ಮನೆಯಲ್ಲೇ ಕಣ್ಣೀರನ್ನೊರಸುತ್ತ ನಿಂತಿದ್ದ.

ಪೂವಕ್ಕೆಯೂ ಒಳಗೆ ಬಂದು ಅಳತೊಡಗಿದಳು: ."ಅಯ್ಯೋ ನನ್ನ ಜೀವನ ಹಾಳಾಯಿತು..........ಇವರಿಗೆ ಒಂದಿಷ್ಟು ಬುದ್ಧಿ ಬರುವುದಿಲ್ಲವಲ್ಲ.

ಇಷ್ಟಿಷ್ಟು ದೊಡ್ಡ ಕೋಣಗಳಂತಾದರೂ !........ನೋಡಿದವರು ಏನೆಂದಾರು!
........ಅಯ್ಯೋ ನನ್ನ ಹಣೆಬರಹವೇ ! "

ಮತ್ತೆ ಅರ್ಧ ತಾಸಿನಲ್ಲಿ ಚಾವಡಿಯ ಚಿಮಣಿಯೊಂದಲ್ಲದೆ ಬೇರೆಲ್ಲ ಕಡೆ ಕತ್ತಲಾಗಿತ್ತು. ಪೂವಕ್ಕ ಪಾರ್ವತಿಯನ್ನು ಕರೆದುಕೊಂಡು ಸಂಜೀವ ನಿದ್ದ ಕೋಣೆಗೆ ಹೋಗಿ ಅವಳನ್ನು ಒಳಗೆ ಬಿಟ್ಟು ಹಿಂತಿರುಗಿದಳು. ಕಿಟ್ಟು ವಿಗೆ ಅಡುಗೆ ಕೋಣೆಯಲ್ಲೇ ನಿದ್ದೆ ಬಂದಿತ್ತು. ಅವನನ್ನು ಎಬ್ಬಿಸಲು ಪೂವಕ್ಕೆಯಿಂದಾಗಲಿಲ್ಲ. ಕೊನೆಗೆ ಚಾವಡಿಗೆ ಹೇಗೋ ಅವನನ್ನು ಎಳೆದು ಕೊಂಡು ಹೋದಂತೆ ಕೊಂಡುಹೋಗಿ ಅಲ್ಲಿ ಒಂದು ಚಾಪೆಯಲ್ಲಿ ಮಲಗಿಸಿ ದಳು.

ಅವನನ್ನು ಕೊಂಡು ಹೋಗುವ ಶಬ್ದಕ್ಕೆ ಶಂಕರಿ ಎಚ್ಚತ್ತು ತಾಯಿಯ ಬಳಿಗೆ ಬಂದಳು. ಕಿಟ್ಟುವಿನ ಜೋಲು ಮುಖವನ್ನು ನೋಡಿ ಅವಳಿಗೆ ನಗು ಕಡಿಮೆಯಾಗಲಿಲ್ಲ. ಅವನ ವಸ್ತ್ರ ಸೊಂಟದಿಂದ ಬಿಚ್ಚಿ ಕೆಳಗೆ ಬೀಳುತ್ತಲಿತ್ತು. ಪೂವಕ್ಕ ಅದನ್ನು ಎತ್ತಿ ಕಟ್ಟಿದಳು. ಶಂಕರಿ ಇದನ್ನು ಕಂಡು " ಏ ಭಾವ, ಏ ಭಾವ " ಎಂದು ಗೊಳ್ಳೆಂದು ನಕ್ಕಳು.

ಹಿಂದೆ ಬಂದಾಗ ಶಂಕರಿಗೆ ಪಾರ್ವತಿಯಿಲ್ಲದುದು ಗೋಚರಿಸಿತು. ತಾಯಿಯೊಡನೆ ಕೇಳಿದಳು:

" ಅತ್ತಿಗೆಮ್ಮ ಎಲ್ಲಿ ತಾಯಿ ? "

" ಅವಳು ಇದ್ದಾಳೆ, ನೀನೊಮ್ಮೆ ಮಲಗು. "

ಶಂಕರಿಗೆ ತಾಯಿಯ ಹೆದರಿಕೆ ತುಂಬ. ಪೂವಕ್ಕ ಕೋಪ ಬಂದರೆ ಅವಳು ಸಿಕ್ಕ ಹಾಗೆ ಹೊಡೆಯುವಳು. ಅನ್ನ ಹಾಕದೆ ಉಪವಾಸ ಹಾಕು ವಳು. ಆದರೆ ಸಂತೋಷದಲ್ಲಿದ್ದರೆ ಮಗಳ ಮೇಲೆ ತುಂಬ ಮಮತೆ. ಅವಳು ಕೇಳಿದ್ದನ್ನು ಕೊಡುವಳು.

ಈಗ ತಾಯಿಗೆ ಕೋಪ ಬಂದಿದೆಯೆಂದು ಶಂಕರಿಗೆ ಗೊತ್ತಿತ್ತು. ಅದು ದರಿಂದ ಅವಳು ಮರುಮಾತನಾಡಲಿಲ್ಲ.

ದೇವಪ್ಪ ಮುಸುಕು ಹಾಕಿ ಮಲಗಿದ್ದ. ಹಗಲಲ್ಲಿ ಮಾಡಿದ ಕೆಲಸ ದಿಂದಾಗಿ ಅವನ ದೇಹವೆಲ್ಲ ದಣಿದಿತ್ತು. ನಿದ್ದೆ ಹತ್ತುವಾಗ ಒಮ್ಮೆ ಅವನಿಗೆ ಹೆಂಡತಿಯ ನೆನಪಾಯಿತು. ಅವಳ ಹೆಸರು ಪಕುಮಿ. ಎಂಟು ತಿಂಗಳ

ಗರ್ಭಕ್ಕೆ ಕಳೆಯುತಿತ್ತು. ಅವಳು ಸುಖವಾಗಿ ಹೆರಲೆಂದು ಮಲಗಿದಲ್ಲಿಂದಲೇ ಭೂತಗಳಿಗೊಮ್ಮೆ ನಮಸ್ಕರಿಸಿದ.

ಸಂಜೀವ ಇನ್ನೂ ಮಲಗಿರಲಿಲ್ಲ. ಅವನು ಪಾರ್ವತಿಯನ್ನು ಮಾತ ಾಡಿಸುತಿದ್ದ.

"ಉಪ್ಪಿಗೊಂದು ಮೆಣಸಿಗೊಂದು ನೀನು ಮಾತನಾಡುವುದಿಲ್ಲವಲ್ಲ? ನಿನಗೇನು ಬಾಯಿ ಬಾರದೆ?"

ಪಾರ್ವತಿ ಮಾತನಾಡುತಿದ್ದಿಲ್ಲ.

* * *

"ಏನೇ, ಆ ಹಲ್ಲಿ ಅಲ್ಲಿ ಚಟ್ ಚಟ್ ಎನ್ನುತ್ತದಲ್ಲ?"

"ಹೂಂ", ಲಿಂಗಮ್ಮ ನಾರಾಯಣಸೆಟ್ಟರು ಮಲಗಿದ್ದ ಮಂಚಕ್ಕೆ ಕಾಲಿಡುತ್ತ ಹೇಳಿದಳು: "ನೀವೊಮ್ಮೆ ಸುಮ್ಮನೆ ಮಲಗಿ ನೋಡೋಣ."

"ಇಷ್ಟು ಮಕ್ಕಳಾದುದು ನಿನಗೆ ಸಾಲದೆ? ಇನ್ನೂ........"

ಸೆಟ್ಟರು ಹೀಗೆನ್ನುವಾಗ ಲಿಂಗಮ್ಮ ಅವರ ಮೀಸೆ ತುಂಬಿದ ತುಟಿಯನ್ನು ತನ್ನ ಕೈಗಳಿಂದ ಒತ್ತಿ ಹಿಡಿದು ಅವರ ಬದಿಗೆ ನೆಗೆದಳು.

"ಮೀಸೆ ಹಣ್ಣಾಯಿತು. ಹಲ್ಲುಗಳು ಒಂದೊಂದೇ ಹೋಗತೊಡ ಗಿವೆ. ನಾನು ಮುದುಕ. ನಿನಗೆ ಇನ್ನೂ ವಯಸ್ಸಾಗಿಲ್ಲ."

"ಸುಮ್ಮನೆ ನಿದ್ದೆಯ ಭರದಲ್ಲಿ ಏನೇನೂ ಮಾತನಾಡಬೇಡಿ...."

ಸೆಟ್ಟರ ಬೆವರು ನಾರುತ್ತಿತ್ತು. ಒಂದು ಬಾಟ್ಲಿ ಶರಾಬ ಅವರ ದಿನ ನಿತ್ಯದ ಪಾನೀಯ. ಅದನ್ನು ಮೂರು ನಾಲ್ಕು ಪಾಲು ಮಾಡಿ ಕುಡಿಯು ವುದೂ ಇತ್ತು. ಒಮ್ಮೊಮ್ಮೆ ಒಮ್ಮೆಲೇ ಕುಡಿಯುವುದೂ ಇತ್ತು. ಆದರೆ ಒಮ್ಮೆಯೇ ಕುಡಿದಾಗ ಅವರ ಕಣ್ಣುಗಳು ಮಿತಿಮೀರಿ ಕೆಂಪಾಗುವುವು. ನಡೆ ಯುವಾಗ ದೇಹ ಅತ್ತಿತ್ತ ವಾಲುವುದು. ಮುಖವೆಲ್ಲ ರಕ್ತಚೆಲ್ಲಿದಂತಾಗು ವುದು. ಅವರು ಒಮ್ಮೆಯೇ ಕುಡಿದ ದಿನ ಲಿಂಗಮ್ಮನಿಗೆ ತುಂಬ ಹೆದರಿಕೆ. ಆಗ ಅವರು ಹರುಷದಿಂದಿದ್ದರೆ ಅವಳ ಕಾಲನ್ನು ಕೂಡಾ ಹಿಡಿಯಬಹುದು. ಆದರೆ ಕೋಪ ಬಂದರೆ ಅವಳ ಬೆನ್ನು ಹುಡಿಯಾಗಬಹುದು.

" ಈ ಶರಾಬಿನಿಂದಾಗಿ ನಾನು ಬದುಕಿಸ್ದೇನೆ " ಎನ್ನುವುದಿತ್ತು ಅವರು ಗೆಳೆಯರೊಡನೆ.

ಸೆಟ್ಟರು ಲಿಂಗಮ್ಮನನ್ನೊಮ್ಮೆ ಮುದ್ದಿಟ್ಟರು. ಅವರ ಬಾಯಿ ಅವಳ ತುಟಿಯನ್ನೆಷ್ಟೋ ಸಲ ಅಮುಕಿತ್ತು. ಅಷ್ಟು ಮೈಮರುಳು ಮಾಡುವ ತುಟಿಗಳವು.

ಅವಳೊಮ್ಮೆ ಸೆಟ್ಟರ ಮುಖವನ್ನು ಅರೆಗಣ್ಣಿನಲ್ಲಿ ನೋಡಿದಳು: ಮುಖ ದಲ್ಲೆಲ್ಲ ನೆರಿಗೆ ಬಿದ್ದಿದೆ. ದವಡೆಗಳಲ್ಲಿ ಕೊಬ್ಬು ಎದ್ದು ಕಾಣುತ್ತಿದೆ. ಮೂಗಿನ ಕೆಳಗಿನ ಮೀಸೆ ಬೆಣ್ಣೆಯನ್ನು ತಿಕ್ಕಿದ ಆಧಾರದಿಂದ ಹುರಿಗಟ್ಟಿ ನಿಂತಿದೆ. ಕಿವಿ ಯಲ್ಲಿ ಕೆಂಪು ಕಲ್ಲಿನ ಭಂಗಾರದ ' ಒಂಟಿ ' ನೇತಾಡುತ್ತಿದೆ.

" ಹ್ಹ ವಯಸ್ಸೇ ! " ಎಂದು ಅವಳೊಳಗೇ ಒಮ್ಮೆ ಗೊಣಗುಟ್ಟಿದಳು.

ಹಿಂದೆ ಅವರ ತೋಳುಗಳು ಎಷ್ಟು ಬಿಗಿಯಾಗಿ ಅಪ್ಪುತಿದ್ದುವು ! ಅವರ ಎದೆ ಅವಳನ್ನು ತಾಗುವಾಗ ಕಲ್ಲಿನಂತಾಗುತಿತ್ತು. ಈಗ ಬರೇ ಎಲುಬಿನ ಗೂಡು. ರೋಮಗಳು ಹಂದಿಯಂತೆ ಮೈಯಿಡೀ ಇವೆ. ಅವರ ಕಣ್ಣಿನ ಹೊಳಸನ್ನು ನೋಡಿ ಅವಳು ಹಿಂದೆ ಬೆಚ್ಚಿಬಿದ್ದು ಅವರ ಕಂಕುಳೊಳಗೆ ತನ್ನ ತಲೆಯನ್ನು ಹೊಗಿಸಿದ್ದಳು. ಏನು ಲವಲವಿಕೆ ಅವರದು ಆಗ ! ಏನು ಚೇತನ !

ಮದುವೆಯಾಗುವಾಗ ಅವರ ವಯಸ್ಸಿನ ಅಂತರ ಹನ್ನೆರಡು ವರುಷ. ಲಿಂಗಮ್ಮ ಆಮೇಲೆ ನಾಲ್ಕು ಸಲ ಹೆತ್ತಿದ್ದಳು. ಆದರೂ ಅವಳ ದೇಹದ ಮಾಟ ಇನ್ನೂ ಕುಗ್ಗಿರಲಿಲ್ಲ.

" ಹುಡುಗ ಹೇಗೆ, ನಿಮಗೆ ಮೆಚ್ಚುಗೆಯಾಯಿತೇ ? " ಸೆಟ್ಟರು ಮತ್ತೆ ಕೇಳಿದರು.

" ಹ್ಹಂ, ಚೆಂತಿಲ್ಲ. " ಎಂದಳು ಲಿಂಗಮ್ಮ ಸಂಕೋಚದೊಡನೆ.

" ಚೆಂತಿಲ್ಲ ! ಹೆಂಗಸರು ಯಾವಾಗಲೂ ಹಾಗೆಯೇ ! ನಾನು ಸಣ್ಣವ ನಿರುವಾಗ ಅವನ ಹಾಗೆಯೇ ಇದ್ದೆ. "

" ಆಗಿರಬಹುದು "-

ಪುನಃ ಸೆಟ್ಟರು ಲಿಂಗಮ್ಮನ ಕೈಗಳನ್ನು ಹಿಡಿದು ಜಗ್ಗಿದರು. ಅವಳ

ಉತ್ತರ ಅವರಿಗೆ ತೃಪ್ತಿಯಾಗಲಿಲ್ಲ.

"ಹೆಂಗಸರಿಗೆ ಯಾವಾಗಲೂ ಹಾಗೆಯೇ. ನಿಮಗೆ ಬೇಕಾದ ಗಂಡಸರು ಈ ಲೋಕದಲ್ಲಿರಲಿಕ್ಕಿಲ್ಲ!"

"ಸಾಕು ಮಾಡಿ. ದೀಪದಲ್ಲಿ ಎಣ್ಣೆ ಆರುತ್ತಿದೆ."

"ಬೇರೆ ಹಾಕಬಹುದು; ಡಬ್ಬಿಯಲ್ಲಿದೆಯಲ್ಲ!"

"ಇವತ್ತಿನ ಮಟ್ಟಿಗೆ ಈಗ ನೀವು ಮಾತನಾಡಿದ್ದು ಸಾಲದೆ? ಎಷ್ಟು ಹೆಗ್ಗಳಿಕೆ!"

"ನನಗೆ ನಿದ್ದೆ ಬರುವುದಿಲ್ಲ. ಒಂದು ಕಥೆ ಹೇಳು" ಎನ್ನುತ್ತ ಲಿಂಗಮ್ಮನ ಕಡೆ ಸೆಟ್ಟರು ಹೊರಳಿದರು.

"ಆಯಿತಪ್ಪ ಕೇಳಿ" ಎಂದು ಲಿಂಗಮ್ಮ ಕತೆ ಪ್ರಾರಂಭಿಸಿದಳು. ಅದು ಹಿಂದಿನಿಂದಲೂ ನಡೆದು ಬಂದ ವಾಡಿಕೆ. ಸೆಟ್ಟರಿಗೆ ತಿಂಗಳಿಗೊಮ್ಮೆಯಾದರೂ ಲಿಂಗಮ್ಮನ ಅಜ್ಜಿ ಕತೆ ಕೇಳಲೇ ಬೇಕು. ಕೆಲವೊಮ್ಮೆ ಅವರು ಬೇಸರದಲ್ಲಿದ್ದಾಗ ದಿನಾಲು ಅವಳಿಂದ ಕತೆ ಹೇಳಿಸಿಕೊಳ್ಳುತಿದ್ದರು. ಅವಳಲ್ಲಿಯೂ ಕತೆಗಳಿಗೇನೂ ಕಡಿಮೆಯಿದ್ದಿಲ್ಲ. ಅವಳ ತಾಯಿ, ಚಿಕ್ಕ ತಾಯಿ, ಅಜ್ಜಿ—ಇವರೆಲ್ಲ ಕತೆಯಲ್ಲಿ ನಿಪುಣರು. ಅವರಿಂದ ಚಿಕ್ಕಂದಿನಲ್ಲಿ ಎಷ್ಟೋ ಕತೆ ಕೇಳಿದ್ದಳು. ಈಗ ಅವಳೇ ಕತೆ ಹೆಣೆದು ಸೆಟ್ಟರಿಗೆ ಹೇಳುತಿದ್ದಳು. ಸೆಟ್ಟರು ಕತೆ ಮುಗಿಯುವವರೆಗೂ "ಹೂಂ ಹೂಂ" ಎನ್ನುತ್ತ ಹೂಂಗುಟ್ಟುತಿದ್ದರು. ಕೆಲವೊಮ್ಮೆ ಕಥೆ ಬೆಳೆದು ಬೆಳೆದು ಬೆಳಗಾಗುವವರೆಗೂ ಸಾಗುವುದಿತ್ತು. ಮತ್ತೆ ಕೆಲವು ಬಾರಿ ಕತೆ ಹೇಳುವ ಮಧ್ಯದಲ್ಲಿ ಸೆಟ್ಟರಿಗೆ ನಿದ್ದೆ ಹತ್ತುವುದೂ ಇತ್ತು. ಉಳಿದ ಭಾಗವನ್ನು ಅವಳು ಇನ್ನೊಂದು ದಿನ ಮುಂದುವರಿಸಬೇಕಷ್ಟೆ. ಆದರೆ ಕೆಲವು ಬಹಳ ದೊಡ್ಡ ಕತೆಗಳು. ಅವುಗಳು ಎರಡು ಮೂರು ರಾತ್ರೆ ಹೇಳಿದರೂ ಮುಗಿಯುವಂತಿರಲಿಲ್ಲ.

## ಅಧ್ಯಾಯ ನಾಲ್ಕು.

"ಹೂಂಗುಟ್ರಿ, ಹೇಳುತ್ತೇನೆ" ಎಂದಳು ಲಿಂಗಮ್ಮ.

“ ಹಾಂ, ಒಳ್ಳೆಯ ಕತೆಯಾಗಬೇಕು ಜೋಕೆ! ಇಲ್ಲವಾದರೆ ನಿನ್ನ ಕಿವಿ ಹಿಡಿಯುತ್ತೇನೆ ” ಸೆಟ್ಟರು ನಗುತ್ತ ಹೇಳಿದರು.

ಬಾಬು ಚಾವಡಿಯ ಜಗುಲಿಯಲ್ಲಿ ನಿದ್ರಿಸುತಿದ್ದ. ಸಂಕು ಒಳಗೆ ಗೊರಕೆ ಹೊಡೆಯುತಿದ್ದಳು.

“ ಒಂದು ಊರಿನಲ್ಲಿ ಒಬ್ಬ ಅರಸ. ಅವನಿಗೆ ಎರಡು ಜನ ಮಕ್ಕಳು. ಮಂತ್ರಿಯ ಮಗ ಮತ್ತು ಅರಸನ ಚಿಕ್ಕ ಮಗನಿಗೆ ಒಂದೇ ಪ್ರಾಯ. ಇಬ್ಬರೂ ಒಟ್ಟಿಗೇ ಬೆಳೆದರು. ಅವರು ದಿನಾಲೂ ಕುದುರೆ ಸವಾರಿ ಮಾಡುತಿದ್ದಾಗ ಒಬ್ಬ ಸೂಳೆಗೆ ಅವರ ಚೆಲುವನ್ನು ಕಂಡು ತುಂಬ ಹೊಟ್ಟೆಕಿಚ್ಚಾಯಿತು.

“ ಒಂದು ದಿನ ಅವಳು ಮಂತ್ರಿಯ ಮಗನನ್ನು ಅವಳೆಡೆಗೆ ಕರೆದು ‘ ಒಂದು ಭತ್ತಕ್ಕೆ ಎಷ್ಟು ಅಕ್ಕಿ ? ’ ಎಂದು ಕೇಳಿದಳು. ಅವನು ‘ ಒಂದು ಭತ್ತಕ್ಕೆ ಒಂದು ಅಕ್ಕಿ. ಅಷ್ಟು ತಾನೆ ? ’ ಎನ್ನುತ್ತ ಪುನಃ ರಾಜಕುಮಾರನ ಜೊತೆ ಸೇರಿದ. ರಾಜಕುಮಾರನಿಗೆ ಆಗ ಸೂಳೆ ಏನೆಂದಳೆಂಬುದನ್ನು ಕೇಳ ಬೇಕೆಂದು ತುಂಬ ಮನಸ್ಸಾಗಿ ಮಂತ್ರಿಕುಮಾರನೊಡನೆ ಕೇಳಿದ. ಅವನೆಂದ: ‘ ಒಂದು ಭತ್ತಕ್ಕೆ ಎಷ್ಟು ಅಕ್ಕಿ ಎಂದು ಕೇಳಿದಳವಳು. ನಾನು ಉತ್ತರವಾಗಿ ಒಂದು ಭತ್ತಕ್ಕೆ ಒಂದೇ ಅಕ್ಕಿ ಎಂದೆ ’ ಎಂದ. ರಾಜಕುಮಾರ ಇದನ್ನು ನಂಬಲಿಲ್ಲ. ಅಷ್ಟು ಸುಲಭದ ಸಮಸ್ಯೆಗೆ ಆ ಸೂಳೆ ಮಂತ್ರಿಯ ಮಗನನ್ನು ಕೇಳಬೇಕೆ? ಎಂದು ತನ್ನೊಳಗೇ ಪ್ರಶ್ನಿಸಿ, ಕೊನೆಗೆ ಮಂತ್ರಿಕುಮಾರನನ್ನು ಅವಳು ಬೇರೇನು ಹೇಳಿದಳೆಂದು ಒತ್ತಾಯಪಡಿಸಿದ. ಮಂತ್ರಿಕುಮಾರ ಎಷ್ಟು ಆಣೆ ಹಾಕಿದರೂ ರಾಜಕುಮಾರ ಕೇಳಲಿಲ್ಲ. ಕೊನೆಗೆ ಮಂತ್ರಿ ಕುಮಾರನನ್ನು ಕೂಡಲೇ ಕೊಲ್ಲಬೇಕೆಂದು ತಂದೆಯೊಡನೆ ಹಠ ಹಿಡಿದ. ತಂದೆಗೂ ತಡೆಯಲಿಕ್ಕಾಗಲಿಲ್ಲ. ಮಂತ್ರಿ ಪರಿಪರಿಯಾಗಿ ರಾಜನೊಡನೆ ಮತ್ತು ರಾಜಕುಮಾರನೊಡನೆ ಕ್ಷಮೆ ಕೇಳಿದ. ಆದರೆ ವಿಮೋಚನೆ ದೊರಕಲಿಲ್ಲ. ಅಂತೆಯೇ ಅರಸನು ಚಾಂಡಾಲರನ್ನು ಕರೆದು, ‘ ಈ ಮಂತ್ರಿಮಗನನ್ನು ಕೊಂದು ಬನ್ನಿ ’ ಎಂದಃ ಆಜ್ಞಾಪಿಸಿದ. ಚಾಂಡಾಲರು ಅವನನ್ನು ಕರೆದು ಕೊಂಡು ಹೋಗಿ ತಲೆ ಕಡಿಯಲು ಅಣಿ ಮಾಡುವಾಗ ಅವನು ಅವರಿಗೆ ಮುಷ್ಟಿ ತುಂಬ ಭಂಗಾರದ ನಾಣ್ಯ ಕೊಟ್ಟು ತನ್ನ ಪ್ರಾಣವನ್ನುಳಿಸಬೇಕೆಂದು ಬೇಡಿಕೊಂಡ. ಅವರು ಅವನನ್ನು ಕಾಡಿನಲ್ಲಿ ಬಿಟ್ಟು ಗುಟ್ಟಾಗಿ ಒಂದು

ನರಿಯನ್ನು ಕೊಂದು ರಕ್ತವನ್ನು ತೋರಿಸಿದರು.

ಅರಸುಕುಮಾರ ದೊಡ್ಡವನಾಗುತ್ತ ಬರುತಿದ್ದ. ಅವನ ವಿದ್ಯಾಭ್ಯಾಸ ಮುಗಿಯಿತು. ಇನ್ನು ವ್ಯಾಪಾರಕ್ಕೆ ಹೋಗಬೇಕೆಂದು ಹಡಗಗಳನ್ನು ಕಟ್ಟಿಸಿ ಪ್ರಯಾಣ ಬೆಳಸಿದ. ತಂದೆಯೆಷ್ಟೋ ಅಡ್ಡಿ ಮಾಡಿದರು, ತಾಯಿ ಹೋಗುವುದು ಬೇಡವೆಂದು ಬೇಡಿದಳು—ಆದರೆ ನಾನು ಈ ಜವ್ವನದಲ್ಲಿ ಕಷ್ಟ ಪಡದಿದ್ದರೆ ಇನ್ನು ಯಾವಾಗ ಕಷ್ಟಪಡುವುದು ಎನ್ನುತ್ತ ಹೊರಟೇ ಹೊರಟ.

" ಸಮುದ್ರದಲ್ಲಿ ದೊಡ್ಡದೊಂದು ತುಫಾನು ಎದ್ದಿತು. ರಾಜಕುಮಾರ ನಿದ್ದ ಹಡಗು ಬಿರುಗಾಳಿಗೆ ಸಿಕ್ಕು ಒಂದು ಬಂಡೆಗಲ್ಲಿಗೆ ಹೊಡೆದು ಒಡೆದು ಚೂರಾಯಿತು. ಅವನು ಒಂದು ಮರದ ತುಂಡನ್ನು ಅಮುಕಿಕೊಂಡ. ಹೀಗೆಯೇ ತೇಲಾಡುತ್ತ ತೇಲಾಡುತ್ತ ಏಳು ರಾತ್ರೆ ಏಳು ಹಗಲುಗಳು ಕಳೆದುವು. ಕೊನೆಗೆ ಒಂದು ಕಡೆ ಸಮುದ್ರ ತೀರಕ್ಕೆ ಅವನನ್ನು ದೊಡ್ಡದೊಂದು ಅಲೆ ಅಪ್ಪಳಿಸಿತು. ಅವನಲ್ಲೇ ಸ್ಮೃತಿ ತಪ್ಪಿ ಬಿದ್ದ. ಹೀಗೆ ಬಿದ್ದಿರುವಾಗ ಊರಿನ ಅಜ್ಜಿಯೊಬ್ಬಳು ಅವನನ್ನು ಕಂಡು ಕಷ್ಟಪಟ್ಟು ಎಬ್ಬಿಸಿ ತನ್ನ ಮನೆಗೆ ಕರೆದುಕೊಂಡು ಹೋದಳು. ಅಲ್ಲಿ ಅವನನ್ನು ಮೀಯಿಸಿ ಊಟ ಮಾಡಿಸಿದ ನಂತರ ' ನೀನು ಸ್ವಲ್ಪ ಮಲಗು ಮಗೂ, ನಿನ್ನ ಆಯಾಸ ಕಳೆಯಲಿ ' ಎಂದಳು.

ರಾಜಕುಮಾರನು ' ನನಗೇನೂ ಆಯಾಸವಿಲ್ಲ ಅಜ್ಜಿ. ನನ್ನ ಹಡಗ ಸಮುದ್ರದಲ್ಲಿ ಮುಳುಗಿತು. ಹಾಗಾಗಿ ಈ ಊರಿಗೆ ಬಂದೆ ' ಎಂದ.

ಮುದುಕಿಗೆ ಅವನ ರೂಪವನ್ನು ಕಂಡು ಇವನಾರೋ ದೊಡ್ಡ ಮನುಷ್ಯನೆಂದು ತಿಳಿದಿತ್ತು.

ಪುನಃ ರಾಜಕುಮಾರ ಕೇಳಿದ: " ಈ ಊರಿನ ಸ್ಥಿತಿಗತಿ ಏನು ಅಜ್ಜಿ? ಇಲ್ಲಿಗೆ ಅರಸನಾರು ? ನಿನಗೇನು ಕೆಲಸ ? " ಎಂದು.

ಅಜ್ಜಿ ಹೇಳಿದಳು: " ಈ ರಾಜ್ಯದ ಹೆಸರು ಚಂಪಾಪಟ್ಣ. ಇದಕ್ಕೆ ಕಳಿಂಗಸೇನ ಅರಸು. ಅವನ ಮಗಳು ರತ್ನಪ್ರಭೆ. ಅವಳಿಗಿನ್ನೂ ಮದುವೆಯಾಗಿಲ್ಲ. ಈಗ ಊರಿನಲ್ಲಿ ಒಂದು ದೊಡ್ಡ ಸಿಂಹ ಉಪದ್ರವ ಕೊಡುತ್ತದೆ. ಬಹಳ ಭಯಂಕರ ಮೃಗ. ಅದನ್ನು ಯಾರು ಕೊಂದು ಚಹರೆಯನು

ತೋರಿಸುತ್ತಾರೋ ಅವನಿಗೆ ತನ್ನ ಮಗಳನ್ನು ಅರ್ಧ ರಾಜ್ಯದೊಡನೆ ಧಾರೆ ಯೆರೆದು ಕೊಡುತ್ತೇನೆಂದು ಡಂಗುರ ಹಾಕಿ ಸಾರಿದ್ದಾನೆ. ಎಷ್ಟೋ ಜನ ಪ್ರಯತ್ನಿಸಿದರು. ಆದರೆ ಅವರೆಲ್ಲರೂ ಸಿಂಹದ ಬಾಯಿಗೆ ತುತ್ತಾದರು. ಅದು ದಿನಕ್ಕೆ ನಾಲ್ಕೈದು ಜನರನ್ನು ಕೊಲ್ಲುತ್ತಲೇ ಇದೆ. ನಮಗೇನು ಮಗೂ? ನನಗೆ ರಾಜನ ಮಗಳಿಗೆ ಹೂ ನೇಯ್ದು ಕೊಟ್ಟರೆ ಎರಡು ಸೇರು ಅಕ್ಕಿ ಸಿಗುತ್ತದೆ" ಎಂದಳು.

"ನಮಗೇನಜ್ಜೀ ಯಾರು ಏನಾದರೆ? ಸಿಂಹ ಬರಲಿ, ರಕ್ಕಸ ಬರಲಿ" ಎಂದು ಅವನು ನಿದ್ರಿಸಿದ.

ಮತ್ತೆ ಅಜ್ಜಿ ಹೂ ನೇಯುವಾಗ 'ನನಗೆ ಒಳ್ಳೆಯದಾಗಿ ನೇಯಲು ಬರುತ್ತದೆ ಅಜ್ಜಿ, ನಾನು ನೇಯಲೇ?' ಎಂದು ಕೇಳಿದ. ಅಜ್ಜಿ ಅದಕ್ಕೆ 'ಹಾಗೆಲ್ಲ ಹಾಳು ಮಾಡಿ ನೆಯ್ದರೆ ತನ್ನ ತಲೆ ಕಡಿದಾರು ಮಗೂ' ಎಂದಳು. 'ನೀನು ಹೆದರಬೇಡ ಅಜ್ಜೀ; ನನ್ನ ನೆಯಿಗೆಯನ್ನು ನೋಡಿ ರಾಜಕುಮಾರಿ ಮೆಚ್ಚದಿರಲಿಕ್ಕಿಲ್ಲ ನೋಡು' ಎನ್ನುತ್ತ ಅರಸನ ಮಗ ಹೂಗಳನ್ನು ನೂತನ ವಿಧಾನದಲ್ಲಿ ನೇಯತೊಡಗಿದ. ಅಜ್ಜಿ ಅದನ್ನು ಅರಸನ ಮಗಳಿಗೆ ಕೊಂಡು ಹೋಗಿ ಕೊಡಲು, ಅವಳು ತುಂಬ ಸಂತೋಷಪಟ್ಟು 'ಏ ಮುದುಕೀ! ಇದು ಯಾರು ಕಟ್ಟಿದ್ದು' ಎಂದು ಕೇಳಿದಳು. ಮುದುಕಿ ಹೆದರಿಕೆಯಲ್ಲಿ ತಾನೇ ಕಟ್ಟಿದ್ದೆಂದಳು. 'ಛೆ, ಇಲ್ಲ ಇಲ್ಲ' ರಾಜನ ಮಗಳು ಹೇಳಿದಳು. 'ನೀನಲ್ಲ, ಇದು ಯಾರೋ ಬೇರೆ. ಎಷ್ಟು ಒಳ್ಳೆಯದಾಗಿದೆ' ಎಂದಾಗ ಮುದುಕಿಯು ತನ್ನೊಬ್ಬ ದೂರ ದೇಶಕ್ಕೆ ಹೋದ ಮೊಮ್ಮಗ ಹಿಂತಿರುಗಿ ಬಂದಿದ್ದಾನೆಂದೂ, ಹೂವಿನ ಮಾಲೆಯನ್ನು ಅವನು ಕಟ್ಟಿದ್ದೆಂದೂ ಹೆದರಿಕೆ ಯಲ್ಲಿ ಕಣ್ಣೀರೆಸೆದಳು. ರಾಜನ ಮಗಳು ಸಂತೋಷದಿಂದ ನಲಿದಳು. ಮತ್ತೆ ಅಜ್ಜಿಗೆ ನಾಲ್ಕು ಸೇರು ಅಕ್ಕಿ, ತೆಂಗಿನಕಾಯಿ ಎಲ್ಲ ಕೊಟ್ಟು ಅವಳ ಮೊಮ್ಮಗನ ವರ್ಣನೆಯನ್ನು ಕೇಳಿದಳು.

"ಅವನನ್ನು ಸಣ್ಣವನಿರುವಾಗ ನಾನು ಕಂಡದ್ದು ಮಗೂ. ಈಗ ಹಿಂದೆ ಬಂದಾಗ ನನ್ನ ಗುರುತು ಸಿಗಬೇಕೆ! ಎಷ್ಟು ಎತ್ತರ ಬೆಳೆದಿದ್ದಾನೆ. ಎಷ್ಟು ಚೆಲುವಾಗಿದ್ದಾನೆ! ಯಾರೋ ಒಂದು ದೇವತೆ ಅವನನ್ನು ಹಾಗೆ ಸಿಂಗರಿಸಿದುದಂತೆ! ಮುಖದಲ್ಲಿ ಕುಡಿಮೀಸೆ ಮೂಡುತ್ತಿದೆಯಷ್ಟೆ. ಈ

ಊರಿನಲ್ಲಿ ನಿಮ್ಮ ತಂದೆಯನ್ನು ಬಿಟ್ಟು ಯಾರೂ ಅಂಥ ಸುಂದರ ಪುರುಷರಿಲ್ಲ' ಎಂದು ಅಜ್ಜಿ ತನ್ನ ಹಲ್ಲಿಲ್ಲದ ಬಾಯಿಯನ್ನು ನಾಲಿಗೆಯಲ್ಲಿ ಚಪ್ಪರಿಸುತ್ತ ಹೇಳಿದಳು. ಅರಸನ ಮಗಳು ಆ ದಿನ ಶೋಕವನ್ನು ಬಿಟ್ಟು ಊಟ ಮಾಡಿದಳು.

ಮನೆಗೆ ಬಂದೊಡನೆ ಅಜ್ಜಿಗೆ ಆದ ಸಂತೋಷವನ್ನು ಹಿಡಿಸಲಾಗಲಿಲ್ಲ. ರಾಜನ ಮಗಳಲ್ಲುಂಟಾದ ಪ್ರತಿಕ್ರಿಯೆಗಳನ್ನು ಅರಸುಮಗನಿಗೆ ವರ್ಣಿಸಿದಳು. ಮರುದಿನವೂ ತಾನೇ ಹೂವನ್ನು ಕಟ್ಟಿಕೊಡುತ್ತೇನೆಂದ. ಅವಳು ಒಪ್ಪಿದಳು. ಮರುದಿನ ಹೂವಿನ ಚೆಂಡಿನ ಒಳಗೆ ಒಂದು ಸಣ್ಣ ಕಾಗದವನ್ನಿಟ್ಟ. ಆದಿನವೂ ಅರಸುಮಗಳು ಮುದುಕಿಗೆ ತುಂಬ ಅಕ್ಕಿ–ತೆಂಗಿನಕಾಯಿಗಳನ್ನು ಕೊಟ್ಟು ಅಕ್ಕಿಯ ರಾಶಿಯಲ್ಲಿ ಒಂದು ಚೀಟನ್ನಿಟ್ಟಳು. ಮುದುಕಿ ಅರಸುಮಗನಿಗೆ ಎಲ್ಲವನ್ನೂ ಹೇಳಿ ಅಕ್ಕಿಯನ್ನು ಒಳಗಿಟ್ಟಳು. ಅವನು ಅದರಲ್ಲಿದ್ದ ಕಾಗದವನ್ನು ತೆಗೆದು ನೋಡಿದ.

" ಆ ಪ್ರಕಾರ ರಾತ್ರಿಯಾದೊಡನೆ ಹೊರಗೆ ಹೊರಟ. ಅರಸನ ಅರಮನೆಗೆ ಆಗಲೇ ಬಾಗಿಲು ಹಾಕಿತ್ತು. ಅರಸನ ಮಗಳು ಮಲಗುವ ಮಾಳಿಗೆಯ ಹಿಂದಿನ ಬದಿಯಲ್ಲಿ ಹೋಗಿ ಕಾದು ನಿಂತ. ಸ್ವಲ್ಪ ಹೊತ್ತಿನಲ್ಲೇ ನೂಲಿನ ಏಣಿ ಕೆಳಗೆ ಬಂತು. ಆದರಲ್ಲಿ ಮೇಲೆ ಹತ್ತಿ ಹೋದೊಡನೆ ರಾಜಕುಮಾರಿ ಗಂಧ ಪನ್ನೀರುಗಳೊಡನೆ ಅವನನ್ನು ಸ್ವಾಗತಿಸಿದಳು. ಅವನು ಅವಳು ಕೊಟ್ಟ ರುಚಿಕರವಾದ ಭಕ್ಷ್ಯ ಭೋಜ್ಯಗಳನ್ನೆಲ್ಲ ತಿಂದು ಅವಳೊಟ್ಟಿಗೆ ರಾತ್ರಿಯನ್ನು ಕಳೆದ. "

ಇಷ್ಟೆನ್ನುವಾಗ ಸೆಟ್ಟರು ಸ್ವಲ್ಪ ತೂಕಡಿಕೆ ಹತ್ತಿದವರಂತೆ ವರ್ತಿಸಿದರು. ಲಿಂಗಮ್ಮ ಅವರ ಹೆಗಲಿಗೆ ಕೈಹಾಕಿ ಜಗ್ಗಿದಳು. " ಏನೇ, ನನಗೆ ನಿದ್ದೆ ಬಂದಿದೆಯೆಂದು ಎಣಿಸಿದೆಯಾ ? " ಎನ್ನುತ್ತ ಅವಳ ತೋಳನ್ನು ಅವಳ ಬೆನ್ನ ಹಿಂದೆ ಹಾಕಿ ಅವಳನ್ನೊಮ್ಮೆ ಬರಸೆಳೆದರು. ಲಿಂಗಮ್ಮ ಅವರ ಹಿಡಿತವನ್ನು ತಪ್ಪಿಸುತ್ತ ಮುಂದುವರೆದಳು.

" ಮರುದಿನ ಅರಸುಕುಮಾರ ಒಂದು ಚಂದ್ರಾಯುಧವನ್ನು ಹಿಡಿದುಕೊಂಡು ಸಿಂಹ ಬರುವ ಸ್ಥಳಕ್ಕೆ ಹೋಗಿ ಅಡಗಿ ನಿಂತ. ಮಧ್ಯರಾತ್ರಿ ಕಳೆಯುವಾಗ ಸಿಂಹದ ಆರ್ಭಟೆ ಕೇಳಿತು. ಒಮ್ಮೆಲೇ ಅಲ್ಲಿದ್ದ ಮರಕ್ಕೆ ಅವನು

ಹತ್ತಿದ. ಸಿಂಹ ಕೆಳಗಿನಿಂದ ಹೋಗುತ್ತಿದ್ದಂತೆಯೇ ಅವನು ಅದರ ಮೇಲೆ ಹಾರಿ ಅದರ ಬೆನ್ನಿನಲ್ಲಿ ಕುಳಿತು ಕುತ್ತಿಗೆಯನ್ನು ಕಡಿದುಬಿಟ್ಟ. ಸಿಂಹ ಆರ್ಭಟಿಸುತ್ತ ಸತ್ತುಹೋಯಿತು. ಆಮೇಲೆ ಅದರ ಕೋರೆಹಲ್ಲು, ಮೀಸೆ ಮುಂತಾದ ಚಹರೆಗಳನ್ನು ಕೊಯ್ದು ವಸ್ತ್ರದಲ್ಲಿ ಕಟ್ಟಿಕೊಂಡು ಹಿಂದೆ ಹೊರಟು ಅಜ್ಜಿಯ ಮನೆ ಸೇರಿ ಸ್ವಸ್ಥ ನಿದ್ರಿಸಿದ.

"ಬೆಳಗ್ಗೆ ಊರ ಅಗಸನು ಬಟ್ಟೆಬರೆಗಳನ್ನು ಕೊಂಡು ಹೋಗುತ್ತಿದ್ದಾಗ ಬಿದ್ದುಕೊಂಡಿದ್ದ ಸಿಂಹವನ್ನು ಕಂಡು ಓಡಿಹೋಗಿ ದೂರದಲ್ಲಿ ನಿಂತು ಪರೀಕ್ಷಿಸಿದ. - ಸಿಂಹ ಏಳಲೇ ಇಲ್ಲ. ಎರಡು ಕಲ್ಲು ಬಿಸುಟ; ಆದರೂ ಸುದ್ದಿಯಿಲ್ಲ. ಮತ್ತೆ ಅದು ಸತ್ತುಹೋಗಿರಬೇಕೆಂದು ತಿಳಿದು ಹತ್ತಿರ ಹೋಗಿ ಅದರ ಹಲ್ಲು ಮೀಸೆ ಮುಂತಾದ ಗುರುತುಗಳನ್ನು ತೆಗೆದುಕೊಂಡು ಅರಸನ ಬಳಿಗೆ ಹೋಗಿ ಅದನ್ನು ತೋರಿಸಿ "ಏ ಅರಸೇ! ನೀನು ತೋರಿಸಿದ ಸಿಂಹವನ್ನು ಕೊಂದಿದ್ದೇನೆ. ಇಗೋ ಅದರ ಚಹರೆಗಳು. ನಿನ್ನ ಮಾತೆಲ್ಲಿ? ನಿನ್ನ ಮಗಳನ್ನು ಮತ್ತು ನಿನ್ನ ಅರ್ಧ ರಾಜ್ಯವನ್ನು ನನಗೆ ಕೊಡುವೆಯೋ ಇಲ್ಲವೋ?" ಎಂದು ಗರ್ಜಿಸಿದ.

"ಅರಸನಿಗೆ ದಂಗು ಬಡೆದಂತಾಯಿತು. ಅವನು ಚಹರೆಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಲಿಲ್ಲ. ಶೋಕದಿಂದ ತನ್ನ ಮಂತ್ರಿ ಪರಿವಾರದವರನ್ನು ವಿಚಾರಿಸಿದ. ಯಾರಿಂದಲೂ ಅಗಸನಿಗೆ ಹೇಳಿದ ಮಾತನ್ನು ನಡೆಸಿಕೊಡದ ಹಾಗೆ ಬೇರೆ ಉಪಾಯವನ್ನು ಸೂಚಿಸಲಾಗಲಿಲ್ಲ. ಮತ್ತೇನು? ಅರಸ ಒಪ್ಪಿದ. ಮುಹೂರ್ತ ನೋಡಿ, ದೂರಕ್ಕೆ ಓಲೆ-ತಾಳಿ, ಹತ್ತಿರಕ್ಕೆ ಡಂಗುರ ಹೊಡೆಸಲಾಯಿತು.

"ಮದುವೆಯ ದಿನ ಮಡಿವಾಳರೆಲ್ಲ ಒಂದುಗೂಡಿದರು. ಅವರ ಜರತಾರಿ ವಸ್ತ್ರಗಳೇನು, ಠೀವಿಯೇನು, ಠೇಂಕಾರವೇನು! ಅರಸನ ಮಗಳನ್ನು ಅಗಸನಿಗೆ ಧಾರೆಯೆರೆದು ಕೊಡುವ ಸಮಾರಂಭವಲ್ಲ! ಅರಸು ಶೋಕದಿಂದ ಬತ್ತಿ ಹೋಗಿದ್ದ. ರಾಣಿಗಂತೂ ಮಾತನಾಡಲು ಸ್ವರ ಬಾರದು. ಪುರೋಹಿತರೆಲ್ಲ ಬಂದು ಜಮೆಯಾದರು. ಇನ್ನೇನು ಘಳಿಗೆ ಸಮೀಪಿಸುತಿತ್ತು. ರಾಜಕುಮಾರಿಯನ್ನು ಮಂಟಪದಲ್ಲಿ ಕೂತುಕೊಳ್ಳಿರಿಸಿಯಾಗಿತ್ತು. ಮಡಿವಾಳನೂ ಬಹಳ ವೈಭವದಿಂದ ಮಂಟಪದ ಕಡೆ ಹೊರಡುತ್ತಲಿದ್ದ.

ಅವನ ಕೋರೆಹಲ್ಲುಗಳು, ವಿಕಾರವಾದ ಮೈಕಟ್ಟು, ಕೊಳಕು ರೂಪ—ಇವೆಲ್ಲ ಆ ಪವಿತ್ರ ವಾತಾವರಣದಲ್ಲಿ ಬೆರೆತು ಹೋಗಿದ್ದುವು.

"ಅವನು ಮಂಟಪಕ್ಕೆ ಕಾಲಿಡುವಾಗ ರಾಜಕುಮಾರ ಅಲ್ಲಿಗೆ ಬೈರಾಗಿ ವೇಷದಲ್ಲಿ ಬಂದು ಅರಸನನ್ನು ಕರೆದ. ಅರಸುಮಗಳ ಮುಖ ಆಗಲೇ ಅರಳಿತು. ನೆರೆದವರೆಲ್ಲ ಆಶ್ಚರ್ಯಪಟ್ಟರು. ರಾಜನೂ ಮನಸಿಲ್ಲದೆ ಅವನ ಕಡೆ ನೋಡಿದ. ಅವನೆಂದ:

"ಮಹಾಪ್ರಭೋ! ನನ್ನೆರಡು ಮಾತುಗಳನ್ನು ಕೇಳಬೇಕು: ಆ ಮಡಿವಾಳನು ತಂದ ಚೆಹರೆಯನ್ನು ಚನ್ನಾಗಿ ಪರೀಕ್ಷಿಸಿದ್ದೀರೇ? ಇಲ್ಲಿ ನೋಡಿ. ಸಹಜವಾದ ಚಹರೆಗಳು ನನ್ನೊಡನಿವೆ. ಮತ್ತೆ ಧಾರೆಯೆರೆಯಿರಿ" ಎಂದು. ಒಮ್ಮೆಯೇ ಸಭೆ ನಿಶ್ಶಬ್ದವಾಯಿತು. ಮದುಮಗನಾದ ಮಡಿವಾಳನ ಕಾಲು ನಡುಗತೊಡಗಿತು. ಆದರೂ ಅವನು "ಎಲೈ ರಾಜನೇ, ನಿನ್ನ ಭಾಷೆ ಎಲ್ಲಿ, ನೀನೆಲ್ಲಿ? ಆಡಿದ ಮಾತಿಗೆ ತಪ್ಪಿದ ನೀನು ಈ ಬಡ ಹುಚ್ಚ ಬೈರಾಗಿಯ ಕಡೆ ಮನಸ್ಸೇಕೆ ತಿರುಗಿಸಿದೆ? ಬಾ, ಧಾರೆಯೆರೆ" ಎಂದು ಆರ್ಭಟಿಸಿದ. ಆಗ ರಾಜಕುಮಾರನು 'ಪ್ರಭೋ, ಚಿಂತಿಲ್ಲ; ಇವನನ್ನು ಪರಾಂಬರಿಸಿ. ಮತ್ತೆ ಅವನು ಆ ಸಿಂಹವನ್ನು ಹೇಗೆ, ಎಲ್ಲಿ, ಯಾವುದರಿಂದ ಕೊಂದದ್ದೆಂದು ಕೇಳಿ. ಆಮೇಲೆ ನನ್ನ ಕತೆ ಹೇಳುತ್ತೇನೆ' ಎಂದ. ಮಡಿವಾಳ ನಡುಗುತ್ತಿರುವುದು ಈಗ ಸಭಿಕರೆಲ್ಲರಿಗೂ ಕಾಣುತಿತ್ತು. ಅವನು ಕೊನೆಯ ಯತ್ನ ಮಾಡಿದ. 'ಸಭಿಕರೇ, ಈ ಅರಸ ಮಾತಿಗೆ ತಪ್ಪುತ್ತಾನೆ. ಅರ್ಧ ರಾಜ್ಯ ತಪ್ಪುತ್ತದೆಂದು ಈಗ ಈ ಹುಚ್ಚನ ಮಾತಿಗೆ ಕಿವಿಗೊಡುತಿದ್ದಾನೆ. ಈ ವಿವರಗಳನ್ನು ನನ್ನೊಡನೆ ಕೇಳಲು ಮೊದಲು ಇವನು ಜೀವಿಸಿರಲಿಲ್ಲವೆ? ಇವನೇನು ಅರಸೋ ಪುಡಸೋ!' ಎಂದು ಅಭಿನಯಪೂರ್ವಕ ಭಾಷಣವಿತ್ತ. ಅವನ ಕಣ್ಣುಗಳಲ್ಲಿ ಆಗ ನೀರು ತುಂಬಿದ್ದನ್ನು ಸಂಕೋಚದಿಂದ ಅವನಿಗೆ ಒರಸಲಾಗಲಿಲ್ಲ. ಅದು ಧಾರಾಕಾರವಾಗಿ ಕೆಳಗೆ ಇಳಿಯತೊಡಗಿತು.

"ಆಗ ಮಂತ್ರಿ ಎದ್ದು ಮದುವಣಿಗ ಅಗಸನ ಬಳಿಗೆ ಹೋಗಿ 'ಅದಿರಲಿ ಸ್ವಾಮಿ, ಅರಸು ಅವರ ಮಾತನ್ನು ಎಂದಿಗೂ ತಪ್ಪಲಾರರು. ಆದರೂ ನಿಮ್ಮ ಚಹರೆಯನ್ನೂ ಈ ಬೈರಾಗಿಯ ಚಹರೆಯನ್ನೂ ತುಲನೆ ಮಾಡಲಡ್ಡಿಯಿಲ್ಲವಷ್ಟೆ? ಸಾಧ್ಯವಿದ್ದರೆ ನೀವು ಸಿಂಹವನ್ನು ಎಲ್ಲಿ ಕೊಂದುದು, ಹೇಗೆ

ಮತ್ತು ಯಾವುದರಿಂದ ಎಂಬುದನ್ನು ವಿವರಿಸಿದರೆ ಚೆನ್ನ. ಕೋಪಿಸಬೇಡಿ' ಎನ್ನುತ್ತ ಅರಸನ ಕೋಣೆಯಿಂದ ಅಗಸನು ಕೊಟ್ಟ ಚಹರೆಗಳನ್ನು ತಂದು ಪರೀಕ್ಷಿಸಿದ.

ಅಗಸನ ಜೀವ ಹೋದಂತಾಯಿತು. ಒಮ್ಮೆಯೇ ಸ್ಮೃತಿ ತಪ್ಪಿ ಅಲ್ಲಿಯೇ ಬಿದ್ದ. ಉಳಿದ ಅಗಸರೆಲ್ಲರೂ ಪಲಾಯನ ಮಾಡಲು ಹವಣಿಸಿದರು. ಅಷ್ಟರಲ್ಲಿ ಮಂತ್ರಿಯು ಸೇನಾಪತಿಯನ್ನು ಕರೆದು ಬಾಗಿಲುಗಳನ್ನೆಲ್ಲ ಭದ್ರಪಡಿಸ ಹೇಳಿ, ಬೈರಾಗಿಯ ವೇಷದಲ್ಲಿದ್ದ ರಾಜಕುಮಾರನನ್ನು ಸನ್ಮಾನಿಸಿ ಒಳಗೆ ಕರೆದ. ರಾಜಕುಮಾರನು ಮೇಲಿನ ವೇಷವನ್ನು ತೆಗೆಯುವಾಗ ಅವನ ನಿಜರೂಪವನ್ನು ಸಭಿಕರು ಕಂಡು ಆನಂದದಿಂದ ಘೋಷಮಾಡಿದರು. ಅರಸನ ಸಂತೋಷಕ್ಕಂತೂ ಪಾರವೇ ಇಲ್ಲ. ಅಲ್ಲಿ ನೆರೆದ ಎಲ್ಲ ಮಡಿವಾಳರ ಒಂದೊಂದು ಕಿವಿಯನ್ನು ಕಡಿದು ಒಂದೊಂದು ಕಣ್ಣನ್ನು ಕುಕ್ಕಿ ಹಾಕಬೇಕೆಂದು ಅವನು ಸೇನಾಪತಿಗೆ ಅಪ್ಪಣೆ ಕೊಟ್ಟ. ಮಡಿವಾಳರೆಲ್ಲ ಹೆದರಿ ಅಂಗಲಾಚಿದ್ದರು. ಕೂಡಲೇ ಸೇನಾಪತಿ ತನ್ನ ದಳನಾಯಿಗಳಿಗೆ ಕಣ್ಸೊತ್ತಿದ. ಕಿವಿಗಳನ್ನು ಕೊಯ್ಯುವಾಗ ಮತ್ತು ಕಣ್ಣುಗಳನ್ನು ಕುಕ್ಕುವಾಗ ಮಡಿವಾಳರೆಲ್ಲರ ಬೊಬ್ಬೆಯನ್ನು ಸಹಿಸಲಾಗಲಿಲ್ಲ. ಮದುವಣಿಗ ಮಡಿವಾಳನ ರುಂಡವನ್ನು ಮೂರು ದಾರಿ ಕೂಡುವಲ್ಲಿ ಕಡಿಯಬೇಕೆಂದು ಅರಸನ ಆಜ್ಞೆಯಾಯಿತು.

"ಹಾಗೆಯೇ ರತ್ನಪ್ರಭೆಯ ವಿವಾಹ ಬಹಳ ವಿಜೃಂಭಣೆಯಲ್ಲಿ ನಡೆಯಿತು. ಅರಸುಕುಮಾರ ಸಂತೋಷದಲ್ಲಿ ಕೆಲವು ಸಮಯ ಕಳೆದು ಪುನಃ ಹಡಗುಗಳನ್ನು ಕಟ್ಟಿಸಿದ. ವ್ಯಾಪಾರದ ಸರಕುಗಳನ್ನು ತುಂಬಿಸಿ ಕೊಂಕಣ ದೇಶಕ್ಕೆ ಹೊರಟ. ಹೆಂಡತಿಯನ್ನು ಮರಳುವಾಗ ಕರೆದುಕೊಂಡು ಹೋಗುವೆನೆಂದ.

"ಹಾಗೆ ಹೋದ ಹಡಗ ಕೊಂಕಣ ದೇಶಕ್ಕೆ ಹೋಯಿತು. ಅಲ್ಲಿ ಸಾಮಾನನ್ನೆಲ್ಲ ಕೆಳಗೆ ಇಳಿಸಿ ರಾಜನ ಮಗ ಪಟ್ಟಣಕ್ಕೆ ಹೋದ. ಅಲ್ಲಿಯ ಜನರು ಅವನನ್ನು ತುಂಬ ಮರ್ಯಾದೆಯಿಂದ ಬರಮಾಡಿಕೊಂಡು ಸಾಮಾನುಗಳ ವಿವರ ತಿಳಿದುಕೊಂಡರು. ಆಮೇಲೆ 'ಸ್ವಾಮಿ, ನಿಮ್ಮ ಸಾಮಾನುಗಳಿಗೆ ಅಪೇಕ್ಷೆ ಇಲ್ಲ. ನೀವು ತಂದಿರುವ ಗಂಧದ ಮರ ಇಲ್ಲಿ ಬೇಕಾದಷ್ಟಿದೆ.

ನಾವು ಅಡಿಗೆಮಾಡಲಿಕ್ಕೆ ಕೂಡಾ ಅದನ್ನೇ ಉಪಯೋಗಿಸುತಿದ್ದೇವೆ' ಎಂದು ಸಾಹುಕಾರರು ಹೇಳಿದರು.

"ಮತ್ತೆ ಒಬ್ಬ ಸಾಹುಕಾರನ ಮನೆಗೆ ರಾಜಕುಮಾರ ಹೋದ. ಅಲ್ಲಿ ಸ್ನಾನ ಊಟ ಇತ್ಯಾದಿಗಳಾದುವು. ಎಲ್ಲದ್ದಕ್ಕೂ ಒಲೆಗೆ ಗಂಧದ ಕಟ್ಟಿಗೆಯನ್ನೇ ರಾಜಕುಮಾರನ ಹಡಗಿನಿಂದ ಕದ್ದು ಆ ಸಾಹುಕಾರ ಉಪಯೋಗಿಸಿದ್ದ. ರಾಜಕುಮಾರನಿಗೆ ತುಂಬ ವ್ಯಥೆಯಾಯಿತು.

"ಆಮೇಲೆ ಸಂಜೆಗೆ ಪಟ್ಟಣ ತಿರುಗಾಡಲಿಕ್ಕೆಂದು ಹೋಗುವಾಗ ಒಬ್ಬ ಒಂದು ಕಣ್ಣುಳ್ಳವನು ರಾಜಕುಮಾರನಿಗೆ ಸಿಕ್ಕಿ 'ಓ, ಸ್ವಾಮಿ, ನೀವು ಯಾವಾಗ ಬಂದಿರಿ? ಎಲ್ಲರೂ ಕ್ಷೇಮವಷ್ಟೆ? ನಿಮ್ಮ ತಂದೆ ಹೇಗಿದ್ದಾರೆ? ಸುಮಾರು ವರುಷಗಳ ಹಿಂದೊಮ್ಮೆ ಅವರು ಇಲ್ಲಿಗೆ ಬಂದಿದ್ದರು. ಕಣ್ಣಿನ ಪರೀಕ್ಷೆಯಲ್ಲಿ ತುಂಬಾ ಪ್ರವೀಣರು. ನನ್ನ ಒಂದು ಕಣ್ಣನ್ನು ಪರೀಕ್ಷಿಸಿ ಸರಿಮಾಡಿ ತರುತ್ತೇನೆಂದು ಅದನ್ನು ಕೊಂಡು ಹೋದರು. ಈಗ ನೀವು ನಿಮ್ಮ ಕಣ್ಣನ್ನು ಕೊಡುವಿರೋ, ಅಲ್ಲ ನಾನೇ ತೆಗೆಯಬೇಕೋ?' ಎನ್ನುತ್ತ ಕಿಸೆಯಿಂದ ಚೂರಿ ತೆಗೆದ. ರಾಜಕುಮಾರ ಹೆದರಿಕೆಯಿಂದ 'ನಿಲ್ಲು ಮಹಾರಾಯಾ, ನಾನು ನಾಳೆ ಹೋಗುವುದು; ಆಗ ಹೇಳುತ್ತೇನೆ' ಎಂದು ಹೇಳಿ ಅವನನ್ನು ಸಮಾಧಾನ ಪಡಿಸಿ ಮುಂದುವರಿದ.

"ಆಗ ಒಬ್ಬ ಒಂದು ಕಾಲಿಲ್ಲದವನು ಅವನನ್ನು ಎದುರ್ಗೊಂಡು ಒಂದು ಕಣ್ಣಿನವನ ಹಾಗೆಯೇ ಉಪಚರಿಸಿ ತನ್ನೊಂದು ಕಾಲನ್ನು ಹಿಂದೆ ಅರಸುಮಗನ ತಂದೆ ಸರಿಮಾಡಲಿಕ್ಕೆಂದು ಕೊಂಡು ಹೋಗಿದ್ದನೆಂದೂ, ಈಗ ಅವನ ಕಾಲನ್ನು ಹಿಂತಿರುಗಿ ಕೊಡಬೇಕೆಂದೂ ಗದರಿಸಿದ. ರಾಜಕುಮಾರನಿಗೆ ಅವನನ್ನು ಸಮಾಧಾನ ಪಡಿಸಲು ತುಂಬ ಕಷ್ಟವಾಯಿತು.

"ಮತ್ತೆ ಒಬ್ಬ ಸೂಳೆ ಎದುರಿಗೆ ಬಂದು 'ಸ್ವಾಮಿ, ಎಷ್ಟು ಒಳ್ಳೆಯವರು ನೀವು! ನಿಮ್ಮ ತಂದೆ ನನ್ನ ಪರಿಚಯವುಳ್ಳವರು. ಅವರು ಈ ಊರಿಗೆ ಬಂದರೆ ನನ್ನಲ್ಲೇ ಉಳಕೊಳ್ಳುತಿದ್ದರು' ಎಂದು ನಗುತ್ತ ಹೇಳಿ ಕೊನೆಗೆ 'ಅವರು ಒಳ್ಳೆಯ ವೈದ್ಯರು. ನನ್ನ ಒಂದು ಮೊಲೆ ತನ್ನಿಂದ ತಾನೇ ಇಳಿದು ಹೋಗಿತ್ತು. ಅದನ್ನು ತಾನು ದುರಸ್ತಿ ಪಡಿಸಿಕೊಡುತ್ತೇನೆಂದು ಕೊಂಡು ಹೋದವರು ಹಿಂದೆ ಮರುಳಲೇ ಇಲ್ಲ. ನಿಮ್ಮೊಡನೆ ಅದನ್ನು

ಕೊಟ್ಟಿದ್ದಾರೆಯೆ ? ' ಎನ್ನುತ್ತ ಅವಳು ರವಕೆಯನ್ನು ತೆಗೆದು ಎದೆಯನ್ನು ತೋರಿಸಿದಳು. ”

ಹೀಗೆನ್ನುವಾಗ ಸೆಟ್ಟರಿಗೆ ತುಂಬ ನಗೆ ಬಂತು. “ ಅವಳು ನಿನ್ನಂಥವಳಾಗಿರಬೇಕು ” ಎನ್ನುತ್ತ ಲಿಂಗಮ್ಮನ ಗಲ್ಲಕ್ಕೊಂದು ಮುತ್ತನ್ನಿಟ್ಟರು.

“ ಸುಮ್ಮನಿರಿ, ಇಲ್ಲವಾದರೆ ಇಲ್ಲೇ ನಿಲ್ಲಿಸುತ್ತೇನೆ ” ಎಂದು ಲಿಂಗಮ್ಮ ಸುಳ್ಳು ಕೋಪದಿಂದ ಮುಖವನ್ನು ಹಿಂದೆ ದೂಡುತ್ತ ಗದರಿಸಿದಳು.

“ ಹಂ. ಹೇಗಾದರೂ ಮುಗಿಸಿಬಿಡು ” ಎನ್ನುತ್ತ ಸೆಟ್ಟರು ಆಲಿಸತೊಡಗಿದರು.

“ ರಾಜಕುಮಾರನಿಗೆ ಉಸುರೆತ್ತಲಾಗಲಿಲ್ಲ. ಕೊನೆಗೆ ಅವಳಿಗೂ ಮರುದಿನ ಬರುತ್ತೇನೆಂದು ಹೇಳಿ ದೂರ ಹೋಗಿ ಒಂದು ಮಾರ್ಗದ ಬಳಿಯಲ್ಲಿ ಕುಳಿತು ಯೋಚಿಸತೊಡಗಿದ. ಆಗ ಒಬ್ಬ ಸನ್ಯಾಸಿ ಅಲ್ಲಿಂದ ಹಾದು ಹೋಗುತಿದ್ದವ ಅವನನ್ನು ಮಾತನಾಡಿಸಿದ. ರಾಜಕುಮಾರ ತನ್ನ ಕತೆಯನ್ನೆಲ್ಲ ಹೇಳಿ ಕಣ್ಣೀರು ಸುರಿಸಿದ. ಸನ್ಯಾಸಿ ತಾನೂ ಅವನೊಡನೆ ಬರುವೆನೆಂದ. ಇಬ್ಬರೂ ಒಟ್ಟಿಗೆ ಹಡಗದ ಬಳಿಗೆ ಹೋಗುವಾಗ ಅಲ್ಲಿದ್ದ ಸಾಮಾನೆಲ್ಲ ಖಾಲಿಯಾಗಿತ್ತು. ಜನರೆಲ್ಲ ನಿದ್ರಿಸಿದ್ದರು. ಇದನ್ನು ಕಂಡು ಗೋಳಾಡುತಿದ್ದ ರಾಜಕುಮಾರನನ್ನು ಸನ್ಯಾಸಿಯು ಆ ಊರಿನ ಅರಸನಲ್ಲಿಗೆ ಕರೆದುಕೊಂಡು ಹೋದ.

“ ಅರಸನ ಹೆಸರು ಎಮ್ಮೆ ಕೋಣ ದೊರೆಯೆಂದು. ಅವನ ರಾಜ್ಯಾಡಳಿತೆ ಬಹಳ ಹೆಸರುವಾಸಿಯಾದುದು. ಆದುದರಿಂದಲೇ ಪ್ರಜೆಗಳಾದರೂ ಅವನ ಬಳಿಗೆ ಹೋಗುತಿದ್ದಿಲ್ಲ. ಅವನ ಕೆಲಸ ಊಟ ಮಾಡುವುದು ಮತ್ತು ನಿದ್ರಿಸುವುದು ಮಾತ್ರ. ರಾಜಕುಮಾರ ಮತ್ತು ಸನ್ಯಾಸಿ ಹೋದೊಡನೆ ಅವನು ಅವರನ್ನು ನೋಡಲೇ ಇಲ್ಲ. ಸನ್ಯಾಸಿ ಕೂಡಲೇ ಅಲ್ಲಿದ್ದ ಚಂದ್ರಾಯುಧವನ್ನೆತ್ತಿ ' ನಿನ್ನೀಗ ಕೊಲ್ಲುವೆನು ' ಎಂದು ಅರಸನ ಬಳಿ ಓಡುವಾಗ ಅರಸನು ಅವನ ಕಾಲಿಗೆ ಬಿದ್ದು ' ನಿನಗೆ ನನ್ನಿಂದೇನಾಗಬೇಕು ಮಹಾರಾಯ ? ಹೇಳಿಬಿಡು ' ಎಂದ. ರಾಜಕುಮಾರನು ಸಾವುಕಾರರು ತನಗೆ ಮಾಡಿದ ತಪ್ಪುಗಳ ಕುರಿತು ದೂರುಕೊಟ್ಟ. ಅರಸನು ತನ್ನ ಸೇನಾಪತಿಯನ್ನು ಕರೆದು ಸಾಹುಕಾರರ ಅಂಗಡಿಗಳನ್ನೆಲ್ಲ ಜಪ್ತಿಮಾಡಿ ಅವರನ್ನು ಗಲ್ಲಿ

ಗೇರಿಸಬೇಕೆಂದು ಅಪ್ಪಣೆ ಕೊಟ್ಟು ರಾಜಕುಮಾರನನ್ನೂ ಸನ್ಯಾಸಿಯನ್ನೂ ಸನ್ಮಾನಿಸಿದ. ರಾಜಕುಮಾರನ ಕಳವಾದ ಸ್ವತ್ತುಗಳೆಲ್ಲ ಅವನ ಹಡಗಗಳಿಗೆ ಹಿಂದೆ ಬಂದುವು. ಸಾಹುಕಾರರ ಬೊಬ್ಬೆ ಪಟ್ಟಣವಿಡೀ ತುಂಬಿಹೋಯಿತು.

"ಇತ್ತ ರಾಜಕುಮಾರನು ಹಿಂದೆ ಬರುವಾಗ ಸೂಳೆಯ ಮನೆಗೆ ಹೋದ. ಸನ್ಯಾಸಿ ಅವಳನ್ನು ಕರೆದು ರಾಜಕುಮಾರನಿಗೆ ಕಣ್ಣುಸನ್ನೆ ಮಾಡಿದ. ರಾಜಕುಮಾರನು ಚೂರಿಯನ್ನು ಹಿಡಿದುಕೊಂಡು 'ನನ್ನ ತಂದೆ ಅಷ್ಟು ನಿಷ್ಣಾತ ವೈದ್ಯರಾಗಿದ್ದುದರಿಂದ ಅವರು ನಿನ್ನಂತಹ ಅನೇಕ ಮಂದಿ ಹೆಂಗಸರ ಮೊಲೆಗಳನ್ನು ತಂದು ಮನೆಯಲ್ಲಿ ಹಾಕಿದ್ದಾರೆ. ಈಗ ಅವರು ಸತ್ತು ಹೋಗಿರುವುದರಿಂದ ಯಾರು ಯಾರದು ಯಾವುದು ಮೊಲೆ ಎಂದು ಗುರುತು ಹಚ್ಚಲು ಸಾಧ್ಯವಿಲ್ಲದಂತಾಗಿದೆ. ಆದುದರಿಂದ ನಿನ್ನ ಇದ್ದ ಮೊಲೆ ಯನ್ನು ಕೊಯ್ದುಕೊಂಡು ಹೋಗಿ ಅದರ ಜತೆಯನ್ನು ಹುಡುಕಬೇಕಷ್ಟೆ' ಎಂದು ಹೇಳುತ್ತ ಅವಳ ಹತ್ತಿರ ಬರಲು ಅವಳು ಹೆದರಿಕೆಯಿಂದ ಓಡಿ ಹೋದಳು. ಸನ್ಯಾಸಿ ಆಗ ಅವಳನ್ನು ಒಳಗಿಂದ ಹೊರಗೆ ಎಳೆದು ತಂದ. ಅವಳು 'ದಮ್ಮಯ್ಯಾ, ನನಗೆ ಮಾಫಿ ಬಿಡಿ. ನನ್ನದು ತಪ್ಪಿತಪ್ಪಾ' ಎನ್ನುತ್ತ ಅರಸುಮಗನ ಕಾಲಮೇಲೆ ಬಿದ್ದು ಅತ್ತಳು. ಆಮೇಲೆ ಕಾಲು ತುಂಡಾದವನು ಸಿಕ್ಕಿದ. ಅವನದೂ ಇನ್ನೊಂದು ಕಾಲನ್ನು ಕಡಿದುಕೊಂಡು ಹೋಗುತ್ತೇನೆಂದು ರಾಜಕುಮಾರನು ಹೋಗಲು ಅವನೂ ಹಾಗೆಯೇ ತನ್ನ ಸುಳ್ಳನ್ನು ಒಪ್ಪಿಕೊಂಡ. ಕಣ್ಣಿನವನೂ ಆಗ ಹೆದರಿ, ತಾನು ಹುಟ್ಟು ವಾಗಲೇ ಒಕ್ಕಣ್ಣನೆಂದು ಅತ್ತ.

"ಅಲ್ಲಿಂದ ರಾಜಕುಮಾರನು ಬೇರೊಂದು ದೇಶಕ್ಕೆ ಹೋಗಿ ತನ್ನ ಸರಕುಗಳನ್ನೆಲ್ಲ ಮಾರಿ, ಅಲ್ಲಿಂದ ಬೇರೆ ಸರಕುಗಳನ್ನು ಪಡಕೊಂಡು ಸನ್ಯಾಸಿ ಯೊಡನೆ ತನ್ನ ಹೆಂಡತಿಯಿದ್ದ ಚಂಪಾಪಟ್ಟಣಕ್ಕೆ ಹೋದ: ಅಲ್ಲಿ ಕೆಲವುದಿನ ಉಪಚಾರ ಪಡೆದು ತನ್ನ ದೇಶಕ್ಕೆ ಹೊರಟ.

"ಹಡಗಿನ ಜನರೆಲ್ಲ ಅವನ ಐಶ್ವರ್ಯವನ್ನೂ ಅವನ ರೂಪವತಿ ಹೆಂಡ ತಿಯನ್ನೂ ನೋಡಿ ಹೊಟ್ಟೆಕಿಚ್ಚಿನಿಂದ ಅವನು ನಿದ್ರಿಸುತಿದ್ದ ವೇಳೆ ಅವನನ್ನೆ ಮೆಲ್ಲನೆ ಸಮುದ್ರಕ್ಕೆ ದೂಡಿಹಾಕಿದರು. ಸನ್ಯಾಸಿ ಆಗ ನಿದ್ರಿಸಿದ್ದರ ಗಲಭೆ ಕೇಳಿ ಫಕ್ಕನೆ ಎದ್ದು ನೋಡಿದ. ರಾಜಕುಮಾರ ನೀರಿನಲ್ಲಿ ಮುಳುಗೇಳುತಿದ್ದ.

ಅವನಿಗೆ ಈಜಲಿಕ್ಕೆ ಒಂದು ಮರದ ಹಲಿಗೆಯನ್ನು ಕೆಳಗೆ ಬಿಸುಟು ಸನ್ಯಾಸಿಯು ಉಳಿದವರೊಡನೆ ಜಗಳಕ್ಕೆ ನಿಂತ. ಮೊದಲು ಮೊದಲು 'ಈ ಸನ್ಯಾಸಿಗೂ ಏನು ದರ್ಪ!' ಎನ್ನುತ್ತ ಅವನನ್ನೆಲ್ಲ ಮುತ್ತಿದರು. ಆದರೆ ಅವನು ಕೊಟ್ಟ ಒಂದೇ ಏಟಿಗೆ ಏಳೆಂಟು ಜನ ಕೆಳಗೆ ಬಿದ್ದರು. ಉಳಿದವರಲ್ಲಿ ಹೆಚ್ಚಿನವರು ಅತ್ತಿತ್ತ ಓಡತೊಡಗಿದರು. ರಾಜಕುಮಾರಿಯು ಹೆದರಿ ಚೀರುತಿದ್ದಳು. ಸನ್ಯಾಸಿ ಎಲ್ಲರನ್ನೂ ಸಂಹರಿಸಿ ಅವಳಿಗೆ ಧೈರ್ಯ ಹೇಳಿ, ತೇಲುತಿದ್ದ ರಾಜಕುಮಾರನನ್ನು ಮೇಲಕ್ಕೆಳೆಯಲು ಒಂದು ಹಗ್ಗವನ್ನು ಕೆಳಗೆ ಬಿಟ್ಟು 'ಮೇಲೆ ಬಾ' ಎಂದು ಕೂಗಿದ. ರಾಜಕುಮಾರನಿಗೆ ಆಗ ತಾನೇ ಅವನ ಧ್ವನಿಯ ಗುರುತು ಸಿಕ್ಕಿದುದು. ಆ ಗಲಭೆಯಲ್ಲಿ ಸನ್ಯಾಸಿ ತನ್ನ ವೇಷವನ್ನೇ ಮರೆತುಬಿಟ್ಟಿದ್ದ.

"ಅರಸನ ಮಗ ಮೆಲ್ಲನೆ ಹಗ್ಗದಲ್ಲಿ ಹತ್ತಿ ಹಡಗಿನೊಳಗೆ ಬಂದು ಸನ್ಯಾಸಿಯನ್ನು ಅಪ್ಪಿಕೊಂಡ. ರತ್ನಪ್ರಭೆಗೆ ಆಶ್ಚರ್ಯವಾಯಿತು. 'ನಿನ್ನ ಪ್ರಾಣ ತೆಗೆಸಲು ಬಗೆದದ್ದಕ್ಕೆ ನನ್ನ ಪ್ರಾಣವನ್ನು ಉಳಿಸಿದಿ' ಎನ್ನುತ್ತ ರಾಜಕುಮಾರ ತನ್ನ ಹೆಂಡತಿಯನ್ನು ಕರೆದು 'ಇಗೋ, ಇವನು ನನ್ನ ಬಾಲ್ಯದ ಗೆಳೆಯ, ನನ್ನ ತಂದೆಯ ಮಂತ್ರಿಯ ಮಗ. ಇವನನ್ನು ನಾನು ವಿನಾಕಾರಣ ಕೊಲ್ಲಬೇಕೆಂದು ಆಜ್ಞಾಪಿಸಿದ್ದೆ. ಈಗ ಇವನು ಇಲ್ಲಿ ನನ್ನನ್ನು ರಕ್ಷಿಸಿದ. ಅನೇಕ ಸಲ ಪ್ರಾಣದಾನ ಮಾಡಿದ' ಎಂದು ಗಟ್ಟಿಯಾಗಿ ಅಳತೊಡಗಿದ. ಮಂತ್ರಿಯ ಮಗ ತನ್ನ ಸನ್ಯಾಸಿಯ ವೇಷವನ್ನು ಕಳಚಿದ. ರತ್ನಪ್ರಭೆಗೆ ಅವನ ದೇಹ ಕಾಂತಿಯನ್ನು, ಮತ್ತು ಬದಲಾದ ಸ್ವರೂಪವನ್ನು ಕಂಡು ಸಂತೋಷವೂ ಆಶ್ಚರ್ಯವೂ ಆಯಿತು.

"ರಾಜಕುಮಾರ ಮತ್ತೆ ಊರನ್ನು ಸೇರಿದ. ಅವನ ತಂದೆ ತಾಯಿಗಳು ಅವನನ್ನೂ ರತ್ನಪ್ರಭೆಯನ್ನೂ ಬಹಳ ಸಂಭ್ರಮದಿಂದ ಬರಮಾಡಿಕೊಂಡರು. ಮಂತ್ರಿಯೂ ತನ್ನ ಮಗನು ಜೀವಂತನಾಗಿ ಬಂದುದಕ್ಕೆ ಬಹಳ ಆನಂದಪಟ್ಟ. ಅರಸನು ರಾಜ್ಯದಲ್ಲೆಲ್ಲ ದೊಡ್ಡ ದೊಡ್ಡ ಔತಣಗಳನ್ನೇರ್ಪಡಿಸಿ, ತಾನು ಮುದುಕನಾದುದರಿಂದ ತನ್ನ ಮಗನಿಗೆ ಪಟ್ಟಗಟ್ಟಿ ರತ್ನಪ್ರಭೆಯನ್ನು ಪಟ್ಟದ ರಾಣಿಯನ್ನಾಗಿ ನೇಮಿಸಿದ. ಮಂತ್ರಿಯ ಮಗ ಮಂತ್ರಿಯಾದ. ಆಮೇಲೆ ಸುಖಸಂತೋಷದಿಂದ ಇದ್ದಾರೆ. ನಾನೂ ನಿನ್ನೆ ಅಲ್ಲಿಗೆ

ಹೋಗಿ ಬಂದೆ. ”

“ ಒಳ್ಳೆಯ ಕಥೆ, ಒಳ್ಳೆಯ ಕಥೆ ! ” ಸೆಟ್ಟರು ಹೀಗೆಂದು ಮುಖಕ್ಕೆ ಮುಸುಕು ಹಾಕಿಕೊಂಡರು.

“ ರಾತ್ರಿ ಸುಮಾರು ಕಳೆಯಿತು. ನಿನ್ನೆಯೂ ನನಗೆ ನಿದ್ದೆಯಿಲ್ಲ. ” ಎನ್ನುತ್ತ ಲಿಂಗಮ್ಮನೂ ಗೊಣಗುಟ್ಟಿ ಹೊರಳಾಡಿದಳು.

“ ಅದೇ ಹೇಳಿದೆನಲ್ಲ, ನಿನಗೆ ನಿದ್ದೆ ಬಾರದು. ಬಹಳ ಕಡಿಮೆ........” ಎಂದು ಸೆಟ್ಟರು ಅವಳ ಮೇಲೆ ಕೈಯಾಡಿಸುತ್ತ ಹೇಳಿದರು.

“ ಹೌದು ನಾನು ನರಮನುಷ್ಯಳಲ್ಲ ” ಎಂದು ಲಿಂಗಮ್ಮ ಹೇಳುವಾಗ ಸೆಟ್ಟರು ಅವಳ ಬಾಯಿಗೆ ತನ್ನ ಅಂಗೈಯನ್ನು ಒತ್ತಿ “ ನನಗೊಮ್ಮೆ ವೀಳ್ಯ ಜಗಿಯಬೇಕು ” ಎಂದು ಎದ್ದು ದೀಪಹತ್ತಿಸಿದರು.

ಲಿಂಗಮ್ಮನು “ ನನಗೂ ತಿನ್ನಬೇಕು. ಬಾಯಿ ಸಪ್ಪೆಯಾಗಿ ಹೋಗಿದೆ” ಎನ್ನುತ್ತ ಎದ್ದು ಅವರ ಬದಿಯಲ್ಲೇ ಕುಳಿತು ಎಲೆಯಡಕೆಯ ಹರಿವಾಣ ದಿಂದ ಒಂದೊಂದೇ ವೀಳ್ಯದೆಲೆಯನ್ನು ವಸ್ತ್ರದಲ್ಲಿ ಒರಸಿ ಸುಣ್ಣ ಸವರತೊಡ ಗಿದಳು.

“ ಹಾಂ, ” ಸೆಟ್ಟರು ಬಾಯಿ ತೆರೆಯುತ್ತ ಹೇಳಿದರು. “ ಹಾಂ. ವೀಳ್ಯ ದೆಲೆ ಮಡಚಿ ನನ್ನ ಬಾಯಿಗೆ ಕೊಡು. ”

“ ಇನ್ನೂ ಸಣ್ಣ ಮಗು ” ಲಿಂಗಮ್ಮ ಕಣ್ಣರಳಿಸುತ್ತ ನುಡಿದಳು: “ ನಿಮ್ಮ ಕೈಯನ್ನು ಹರಕೆ ಹೇಳಿದ್ದಿರಾ ? ”

“ ಆಗಲಿ ಕೊಡಪ್ಪ ಕೊಡು. ನೀನು ನನಗೆ ವೀಳ್ಯ ತಿನ್ನಿಸಿ ಯುಗಗಳು ಕಳೆದುವು ” ಸೆಟ್ಟರು ಅವಳ ಭುಜವನ್ನು ಮೆಲ್ಲನೆ ಸವರುತ್ತ ಹೇಳಿದರು.

ಲಿಂಗಮ್ಮ ಒಂದೊಂದೇ ಎಲೆಯನ್ನು ಮಡಚಿ ಅವರ ಬಾಯಿಗೆ ಕೊಟ್ಟಳು.

“ ಓ್ಹ ! ಬಾಯಿ ಉರಿಯುತ್ತಿದೆ. ಸುಣ್ಣ ಹೆಚ್ಚು ಹಾಕಿ ಬಿಟ್ಟೆಯೋ ಮಹಾರಾಯತಿ ! ” ಎನ್ನುತ್ತ ಸೆಟ್ಟರು ಮುಖವನ್ನು ಹಿಚುಕಿದರು.

ಲಿಂಗಮ್ಮ ದೀಪವನ್ನು ಬಾಯಿಯಲ್ಲಿ ಊದಿ ನಂದಿಸಿದಳು.

“ ಮದುವೆಗೆ ತಂದ ಹೊಗೆಸೊಪ್ಪು ಒಂದಿಷ್ಟೂ ಖಾರವಿಲ್ಲ. ಬರೇ ಸೊಪ್ಪು ” ಲಿಂಗಮ್ಮ ಮಲಗುವಾಗ ಹೇಳಿದಳು.

"ಅಕ್ಕ! ನಿನಗೆ ಖಾರ ಸಾಕಾಗಲಿಲ್ಲವೆ?" ಎಂದು ಮತ್ತೆ ಸೆಟ್ಟರು ಅವಳ ಉತ್ತರವನ್ನು ನಿರೀಕ್ಷಿಸದೆ ಕೇಳಿದರು.

## ಅಧ್ಯಾಯ ಐದು.

ಸಂಜೀವನ ಮನೆಯಲ್ಲಿ ಏನೊಂದೂ ಸರಿಯಾಗಿ ಸಾಗುತಿದ್ದಿಲ್ಲ. ಅವನ ತಾಯಿ ಪೂವಕ್ಕ ಅಲ್ಲಿ ಯಜಮಾನತಿ. ಸಂಜೀವನ ಅಣ್ಣ ದೇವಪ್ಪನಿಗೂ ಅಲ್ಲಿ ಸಾಕಷ್ಟು ಸ್ವಾತಂತ್ರ್ಯವಿಲ್ಲ. ಇಬ್ಬರಿಗೂ ದುಡಿತ ಸಾಕಷ್ಟು ಇತ್ತು. ಮನೆಯ ಆರೇಳು ಮುಡಿ ಗದ್ದೆಗಳನ್ನು ಅವರೇ ಸಾಗುವಳಿ ಮಾಡಬೇಕು. ಪೂವಕ್ಕ ಮತ್ತು ಅವರೊಳಗೆ ಅಷ್ಟೊಂದು ವಾತ್ಸಲ್ಯವೂ ಇರಲಿಲ್ಲ. ಅವಳ ಗಂಡ ಮಂಜಣ್ಣ ರೈಗಳು ಮೃತಪಡುವಾಗ ದೇವಪ್ಪನಿಗೆ ಹನ್ನೆರಡು ವರುಷ, ಸಂಜೀವನಿಗೆ ಒಂಬತ್ತು ವರುಷ. ಆ ಮೇಲೆ ಇಡೀ ಆಡಳಿತೆಯ ಭಾರ ಅವಳ ಮೇಲೇ ಬಿದ್ದಿತ್ತು. ದೇವಪ್ಪನನ್ನು ಹಳ್ಳಿಯ ಸಾಲೆಯಲ್ಲಿ ಐದನೆಯ ತರಗತಿಯ ವರೆಗೆ ಓದಿಸಿದ್ದಳು. ಸಂಜೀವನನ್ನು ಮಂಗಳೂರಿಗೆ ಕಳಿಸಿ ಎಳೆಂಟು ವರುಷ ಕಲಿಸಿದ್ದಳು. ಆದರೂ ಸಂಜೀವ ದಡ್ಡ. ಮಂಗಳೂರಲ್ಲಿ ಕಳೆದ ಎಂಟು ವರ್ಷಗಳಲ್ಲಿ ಅವನು ಮ್ಯಾಟ್ರಿಕ್ ಸಮೇತ ಪಾಸಾದುದಿಲ್ಲ. ಏನೋ ಮೊದಮೊದಲು ಅವನು ಚುರುಕಾಗಿದ್ದನಂತೆ. ಆ ಬಳಿಕ ಗಣಿತದ ವಿಷಯ ಅವನಿಗೆ ಕಷ್ಟವಾಯಿತು. ಇಂಗ್ಲಿಷ್ ಪೂರ್ಣ ಕೈಬಿಟ್ಟಿತು. ತತ್ಪರಿಣಾಮವಾಗಿ ಅವನಿಗೆ ಸಾಲೆ ದೊಡ್ಡದೊಂದು ರಣರಂಗವಾಯಿತು. ಅವನು ಕೂಡಲೇ ಹೇಡಿಯಾಗಿ ಅದರಿಂದೋಡಿದ. ತಾಯಿ ಎಷ್ಟು ಹಣ ಕಳಿಸಿದರೂ ಅವನ ಅಂಗಿ ವಸ್ತ್ರಗಳೇನು, ಠೀವಿಯೇನು! ಅವನ ಸ್ನೇಹಿತರೂ ಚಿಲ್ಲರೆಯವರಲ್ಲ. ಜಡ್ಜರ ಮಗನಂತೆ, ವಕೀಲರ ಭಾವನಂತೆ, ಸಾಹುಕಾರರ ಮಗಳಂತೆ. ಒಂದು ಲಕ್ಷದಷ್ಟು ಮಂದಿ ವಾಸಿಸುತ್ತಿರುವ ಮಂಗಳೂರು ಪೇಟೆಯ ಪ್ರತಿಯೊಂದು ಬೀದಿಗಳೂ, ಗಲ್ಲಿಗಳೂ ಅವನ ತಿಳುವಳಿಕೆಗೆ ಬಂದುವು. ಅದರೊಟ್ಟಿಗೆ ಕ್ರಿಕೆಟ್, ಬ್ಯಾಡ್‌ಮಿಂಟನ್ ಪಂದ್ಯಾಟಗಳಲ್ಲೂ ಭಾಗ ವಹಿಸಿ ಸಾಧಾರಣ ಯಶಸ್ಸು ಗಳಿಸಿದ. ಊರಿಗೆ ಬಂದಾಗ ತನ್ನ

ಕಾರ್ಯ ಕಲಾಪಗಳ ಕುರಿತಾಗಿ ದೊಡ್ಡ ದೊಡ್ಡ ವರದಿಗಳನ್ನು ಕೊಡುತಿದ್ದ. ಪೂವಕ್ಕಗೆ ಏನೂ ತಿಳಿಯದು. ಮಗನೇನೋ ಕಲಿಯುತಿದ್ದಾನೆ ! ಎಂದು ಆವಳು ಇತರರೊಡನೆ ಅಭಿಮಾನದಿಂದ ಹೇಳಿಕೊಂಡಿದ್ದಳು.

ಆದರೆ ಸಂಜೀವನ ಕುರಿತಾದ ಯಥಾರ್ಥ ಸುದ್ದಿ ಪೂವಕ್ಕಗೆ ದೊರಕಿದುದು ಮತ್ತೆ. ಅದು ಅವಳೊಬ್ಬ ದೂರದ ಭಾವನೆಂಟ ಕೋಚಣ್ಣ ರೈಗಳ ಮೂಲಕ. ಕೋಚಣ್ಣರೈ ಮಂಗಳೂರು, ಪುತ್ತೂರು, ಕಾರ್ಕಳ ಮುಂತಾದ ಪಟ್ಟಣಗಳಲ್ಲೂ ಹಳ್ಳಿಗಳಲ್ಲೂ ಬಹಳ ಪ್ರಸಿದ್ಧ ಹೆಸರುವಾಸಿ ಜನ. ಸಂಜೀವನೊಡನೆ ಮೊದಮೊದಲು ಆವರಿಗೆ ಬಹಳ ಒಳ್ಳೆಯದಿತ್ತು. ಆದರೆ ಕ್ರಮೇಣ ಸಂಜೀವ ಅವರಿಗೆ ಎದುರು ಮಾತನಾಡತೊಡಗಿದ. ಹಾಗಾಗಿ ಅವರ ಮನಸ್ಸು ನೊಂದು, ಪೂವಕ್ಕಗೆ ನಿಜ ಸಂಗತಿಯನ್ನು ಹೇಳಿಬಿಟ್ಟರು. ಕೂಡಲೇ ಸಂಜೀವನಿಗೆ ಪೇಟೆಯಿಂದ ಮನೆಗೆ ವರ್ಗವಾಯಿತು.

ಕೋಚಣ್ಣರೈಗಳದು ತುಂಬ ಸಾಹಸಮಯ ಜೀವನ. ಅವರು ಹುಟ್ಟಿದ್ದು ಒಂದು ನಿರ್ಗಣ್ಣ ಕುಟುಂಬದಲ್ಲಿ. ಕುಟುಂಬದವರೆಲ್ಲ ಬೇಸಾಯಗಾರರು. ವಿಶೇಷ ತಿಳಿವು ಇಲ್ಲದವರು. ಕೋಚಣ್ಣ ರೈಗಳಿಗೆ ಸಣ್ಣದಿರುವಾಗ ಸ್ವಲ್ಪ ಹಳ್ಳಿಯ ವಿದ್ಯಾಭ್ಯಾಸವಾಗಿತ್ತು. ಅದಕ್ಕೂ ಅವರಿಗೆ ಆಸ್ಪದ ಕಡಿಮೆ. ಸಾಲೆಗೆ ಹೋಗುವ ಮುಂಚೆ ದನಕರುಗಳನ್ನು ಗುಡ್ಡೆಗೆ ಅಟ್ಟಬೇಕು. ಆಮೇಲೆ ತಂಗಳನ್ನು ಉಂಡು ಸಾಲೆಗೆ ಹೋಗುವುದು. ಮಧ್ಯಾಹ್ನ ಊಟವಿಲ್ಲ. ಸಂಜೆಗೆ ಮನೆಗೆ ಬಂದಮೇಲೆ ಒಂದು ಕಟ್ಟು ಹುಲ್ಲು ಕೊಯ್ದು ತರಬೇಕು. ಹೀಗಿದ್ದರೂ ಕೋಚಣ್ಣರೈಗಳಿಗೆ ಬರಹ ಒಳ್ಳೆಯದಾಗಿ ಬಂತು. ಓದುಬರಹದಲ್ಲಿ ನಿಪುಣರಾದರು. ಸಾಲೆ ಬಿಟ್ಟಮೇಲೆ ಊರಿನ ಯಕ್ಷಗಾನ ಕೂಟದೊಡನೆ ಬೆರೆತರು. ಕೆಲವು ಹಳ್ಳಿಯ ಆಢ್ಯಜನರ ಪರಿಚಯವಾಯಿತು. ಆಗ ಹಳ್ಳಿಗಳಲ್ಲಿ ಒಬ್ಬಿಬ್ಬರು ಮಾತ್ರ ಚೆನ್ನಾಗಿ ಬರಹ ಬಲ್ಲವರು. ಊರಿನಲ್ಲಿ ಆಗ ತಕ್ಕ ಗೇಣಿ ಚೀಟು, ಪಾಗ್ದಾನ ಪತ್ರ, ಕೈಕಾಗದ, ರಶೀದಿ ಮುಂತಾದ ದಾಖಲೆಗಳನ್ನು ಅಂಥವರೇ ಬರೆಯಬೇಕಷ್ಟೆ ಹಾಗೆಯೇ ಕೋಚಣ್ಣ ರೈಗಳೂ ಅವರಿರುವ ಹಳ್ಳಿಯಲ್ಲಿ 'ಕಾನೂನಿನ ಜನ' ವಾದರು. ಅವರನ್ನು ಹಾರೈಸುತಿದ್ದ ಜನರಿಗೆ ಲೆಕ್ಕವೇ ಇಲ್ಲ. ಇಷ್ಟಾಗುವಾಗ ಅವರ ಕುಟುಂಬದ ಹೆಚ್ಚಿನವರು ಮಾರಿರೋಗಕ್ಕೀಡಾಗಿ ಸತ್ತರು. ಉಳಿದವರು ಊರು ಬಿಟ್ಟು

ಹೋದರು. ಆದುದರಿಂದ ಕೋಚಣ್ಣ ರೈಗಳಿಗೆ ತಿಮ್ಮಪ್ಪ ಪಕ್ಕಳರಲ್ಲಿ ಉಳ ಕೊಳ್ಳಬೇಕಾಯಿತು. ತಿಮ್ಮಪ್ಪ ಪಕ್ಕಳರು ತುಂಬ ಆಸ್ತಿಯಿದ್ದವರು. ಅವ ರಿಗೆ ಕೋರ್ಟಿನ ವ್ಯವಹರಣೆ ಮುಗಿಯುವುದೆಂದೇ ಇಲ್ಲ. ಕೋಚಣ್ಣರೈಗಳು ಪಕ್ಕಳರ ವ್ಯವಹಾರಗಳ ಜವಾಬುದಾರಿ ತೆಗೆದುಕೊಂಡು ವ್ಯವಹರಣೆ ನಡೆಸ ತೊಡಗಿದರು. ತಿಮ್ಮಪ್ಪ ಪಕ್ಕಳರೊಡನೆಯೇ ಅವರು ಹುಟ್ಟಿದಂದಿನಿಂದ ಮೊದಲ ಸಲ ಪಟ್ಟಣವನ್ನು ನೋಡಿದ್ದು. ವಕೀಲರೊಡನೆ ಮಾತನಾಡಿದ್ದು. ಕೋರ್ಟಿನ ಮೆಟ್ಟಲು ಹತ್ತಿದ್ದು. ಅಂದಿನಿಂದ ಅವರ ಜೀವನ ಕ್ರಮ ಬೇರಾ ಯಿತು. ಬರೇ ಒಂದು ಅಡ್ಡವಸ್ತ್ರ ಮತ್ತು ತುಂಡುಕೈಯ ಅಂಗಿ ಹಾಕುತಿದ್ದ ವರು, ಕಚ್ಚೆ ಹಾಕಿ ಕೋಟು ಹಾಕಿ, ತಲೆಗೆ ರುಮಾಲು ಕಟ್ಟತೊಡಗಿದರು. ಕೈಯಲ್ಲೊಂದು ಬೆಳ್ಳಿಕಟ್ಟಿದ ಬೆತ್ತ ಹಿಡಿದರು. ಹುಡಿ ಎಳೆಯುವದನ್ನು ಬಿಟ್ಟು ಬೀಡಿ ಸೇದಲು ಪ್ರಾರಂಭಿಸಿದರು.

ತಿಮ್ಮಪ್ಪ ಪಕ್ಕಳರಲ್ಲಿ ಒಂದೆರಡು ವರುಷ ಕಳೆಯುವಾಗ ಕೋಚಣ್ಣರೈ ಗಳ ವರ್ಚಸ್ಸು ಮತ್ತು ಪ್ರಭಾವ ತುಂಬ ಬೆಳೆಯಿತು. ಕೋಚಣ್ಣ ರೈಗಳು ಪಕ್ಕಳರ ಲೆಕ್ಕಪತ್ರಗಳನ್ನೆಲ್ಲ ನೋಡಿಕೊಳ್ಳುತಿದ್ದುದರಿಂದ ' ಅವರು ಇಟ್ಟದ್ದು ಅವರು ತೆಗೆದದ್ದು ' ಎಂಬಂತಾಯಿತು. ತಿಂಗಳಿಗೆ ಎರಡು ಸಲವಾದರೂ ಪಟ್ಟಣಕ್ಕೆ ಹೋಗದಿಲ್ಲ. ಅನೇಕ ವಕೀಲರುಗಳ ಪರಿಚಯ ಮಾಡಿಕೊಂಡು ' ತುಂಡು ವಕೀಲ ' ರಂತಾದರು. ಅಷ್ಟಾಗುವಾಗ ಪಕ್ಕಳರ ಮದುವೆಯಾಗದ ಮಗಳೊಬ್ಬಳು ಗರ್ಭಿಣಿ ಎಂದು ಸುದ್ದಿ ಹರಡಿತು. ಕೂಡಲೇ ಪಕ್ಕಳರು ಕೋಚಣ್ಣರೈಗಳನ್ನು ಮನೆಯಿಂದ ಹೊಡೆದು ಹೊರಗೆ ಹಾಕಿದರು. ಆದರೆ ಅಷ್ಟರಲ್ಲೇ ರೈಗಳ ಭಂಡವಲ ಎರಡು ಸಾವಿರ ರೂಪಾಯಿಗಳನ್ನು ಮಿಕ್ಕಿತ್ತು.

ಪಕ್ಕಳರಲ್ಲಿಂದ ಹೊರಬಿದ್ದ ರೈಗಳಿಗೆ ಮತ್ತೆ ನಡುಮನೆ ಕೋಟಿ ಭಂಡಾ ರಿಗಳಲ್ಲಿ ಆಶ್ರಯ ಸಿಕ್ಕಿತು. ಅವರೂ ತುಂಬ ಹಣಕಾಸಿನ ಕೋರ್ಟು ಕಚೇ ರಿಯ ವ್ಯವಹಾರವಿದ್ದವರು. ಭಂಡಾರಿಗಳಿಗೆ ರೈಗಳ ಮೇಲೆ ಅಲ್ಪಕಾಲದಲ್ಲೆ ತುಂಬ ವಿಶ್ವಾಸ ಬೆಳೆಯಿತು. ಅವರು ದೊಡ್ಡ ಕಾರುಭಾರಿನವರು. ಪುತ್ತೂ ರಲ್ಲಿ ಅವರಿಗೆ ಇಬ್ಬರು ಸೂಳೆಯರಿದ್ದರಂತೆ. ಆದುದರಿಂದ ತಿಂಗಳಲ್ಲಿ ಇಪ್ಪತ್ತು ದಿನವಾದರೂ ಅವರು ಪಟ್ಟಣದಲ್ಲೇ ಉಳಕೊಳ್ಳುತಿದ್ದರು. ರೈಗಳೂ ಆಗ ಅವರೊಟ್ಟಿಗೆನೇ ಇರುತಿದ್ದರು. ಖರ್ಚೆಲ್ಲ ಭಂಡಾರಿಗಳಿಂದಲೇ ಸಾಗುತಿತ್ತು.

ರೈಗಳಿಗೂ ಒಬ್ಬಳು ಗಂಟುಬಿದ್ದಳು. ಅವರಿಗೇನೋ ರೋಗವಾಗಿ ಎರಡು ತಿಂಗಳು ಆಸ್ಪತ್ರೆಯಲ್ಲಿರಬೇಕಾಯಿತು. ಭಂಡಾರಿಗಳೇ ಆರೈಕೆ ಮಾಡಿದರು. ಅವರಿಗೆ ಪೇಟೆಯಲ್ಲಿರಲು ಒಂದು ಒಳ್ಳೆಯ ಕಾರಣವೂ ಸಿಕ್ಕಿತು.

ನಡುಮನೆ ಭಂಡಾರಿಗಳಿಗೆ ಪೂವಕ್ಕೆಯ ಗಂಡ ಮಂಜಣ್ಣ ರೈಗಳು ದೊಡ್ಡ ವಿರೋಧಿ. ಕೋಚಣ್ಣ ರೈಗಳಿಗೂ ಇದು ಚೆನ್ನಾಗಿ ಗೊತ್ತಿತ್ತು. ಮಂಜಣ್ಣ ರೈಗಳು, ಅವರಿಗೂ ಭಂಡಾರಿಗಳಿಗೂ ದೊಡ್ಡದೊಂದು ವ್ಯಾಜ್ಯ ನಡೆಯುತಿದ್ದಾಗ, ಕೋಚಣ್ಣ ರೈಗಳಿಗೆ ಮೆಲ್ಲನೆ ಗುಪ್ತವಾಗಿ ಹೇಳಿಕಳಿಸಿದರು. ಕೋಚಣ್ಣ ರೈಗಳೂ ಹೋದರು. ಆ ವ್ಯಾಜ್ಯದಲ್ಲಿ ಅವರು ಮುಖ್ಯ ಸಾಕ್ಷಿ. ನಾಲ್ಕು ಸಾವಿರ ರೂಪಾಯಿ ಕೊಡುತ್ತೇನೆಂದರು. ಕೋಚಣ್ಣ ರೈ ಆರು ಸಾವಿರವೆಂದರು. ಮಂಜಣ್ಣ ರೈಗಳಿಗೆ ಆ ವ್ಯಾಜ್ಯ ಅವಗುಣವಾದರೆ ಕಡಿಮೆ ಪಕ್ಷದಲ್ಲಿ ಹನ್ನೆರಡು ಸಾವಿರ ರೂಪಾಯಿಗಳು ನಷ್ಟವಾಗುತಿದ್ದುವು. ಆದುದರಿಂದ ಕೋಚಣ್ಣ ರೈಗಳ ಮಾತಿಗೆ ಒಪ್ಪಿ ಒಂದು ಸಾವಿರ ನಗದಿ ಕೊಟ್ಟು ಐದು ಸಾವಿರಕ್ಕೆ ತನ್ನ ಆಸ್ತಿಯನ್ನು ಅಡವು ಹಾಕಿದರು. ವ್ಯಾಜ್ಯದ ದಿನ ಭಂಡಾರಿಗಳಿಗೆ ವಿರುದ್ಧವಾಗಿಯೇ ಕೋಚಣ್ಣ ರೈಗಳು ಸಾಕ್ಷಿ ನುಡಿದರು. ಮಂಜಣ್ಣ ರೈಗಳಿಗೆ ವ್ಯಾಜ್ಯ ಗುಣವಾಯಿತು.

ಭಂಡಾರಿಗಳು ಕೋಚಣ್ಣ ರೈಗಳ ಒಂದು ಕಾಲನ್ನಾದರೂ ಮುರಿಯದಿರಲಿಕ್ಕಿಲ್ಲವೆಂದು ಅಂದೇ ಶಪಥ ಹಾಕಿಕೊಂಡಿದ್ದರಂತೆ. ರೈಗಳೂ ಇದನ್ನು ತಿಳಿಯದಿದ್ದಿಲ್ಲ. ಆದರೆ ಭಂಡಾರಿಗಳ ಹೆಂಡತಿ ರೈಗಳೊಡನೆ ತುಂಬ ಅನ್ಯೋನ್ಯತೆಯಿಂದಿದ್ದರು. ರೈಗಳು ಭಂಡಾರಿಗಳಿಲ್ಲದ ವೇಳೆಯನ್ನು ಕಾದು ಒಂದು ದಿನ ಅವರ ಮನೆಗೆ ಹೋದರು. ಆದರೆ ಅದೇ ದಿನ ರಾತ್ರಿ ಭಂಡಾರಿಗಳು ಮನೆಗೆ ಮರಳಬೇಕೆ ? ಕೋಚಣ್ಣ ರೈಗಳು ಒಮ್ಮೆಯೇ ಓಡತೊಡಗಿದರು. ಆದರೆ ಭಂಡಾರಿಗಳು ಅವರನ್ನು ಹಿಡಿದು ಚೆನ್ನಾಗಿ ಹೊಡೆದರು. ರೈಗಳು ತನ್ನ ಇದ್ದ ಶಕ್ತಿಯನ್ನೆಲ್ಲ ಉಪಯೋಗಿಸಿ ಹೇಗಾದರೂ ಒಂದು ಗಾಡಿಯಲ್ಲಿ ಪಟ್ಟಣವನ್ನು ಸೇರಿದರು.

ಅಲ್ಲಿ ಅವರ ಮೈಯ ಗಾಯಗಳೆಲ್ಲ ವಾಸಿಯಾದವು. ಒಂದು ಸಣ್ಣ ಬಿಡಾರವನ್ನು ಅಲ್ಲೇ ಮಾಡಿದರು. ಅಷ್ಟರಲ್ಲಿ ಕೋಟೆ ಭಂಡಾರಿಗಳ ಹೆಂಡತಿ

ಗಂಡನನ್ನು ತೊರೆದು ರೈಗಳಲ್ಲಿ ವಾಸಿಸತೊಡಗಿದರು. ಭಂಡಾರಿಗಳಿಗೆ ಹೆಂಡತಿಯೊಬ್ಬಳೇ ನಷ್ಟವಲ್ಲದೆ, ರೈಗಳಿಂದ ಇನ್ನೂ ತುಂಬ ನಷ್ಟವಾಯಿತು. ಅವರು ರೈಗಳ ಮೂಲಕ ಮಾಡಿಸಿದ ಎರಡು ಸಾವಿರ ರೂಪಾಯಿಗಳ ಒಂದು ದಸ್ತಾವೇಜು ಅವರ ಹೆಸರಿನಲ್ಲಿರದೆ ರೈಗಳ ಹೆಸರಲ್ಲೇ ಇತ್ತು. ಇನ್ನೊಂದು ಆಸ್ತಿಯ ಕ್ರಯಚೀಟೂ ಹಾಗೆಯೇ ರೈಗಳ ಹೆಸರಲ್ಲೇ. ಇವೆಲ್ಲ ಭಂಡಾರಿಗಳಿಗೆ ಗೊತ್ತಾಗುವಾಗ ರೈಗಳು ಆ ಆಸ್ತಿ ಮತ್ತು ಹಣವನ್ನು ತಮ್ಮ ಸ್ವಾಧೀನಪಡಿಸಿಕೊಂಡಾಗಿತ್ತು. ಭಂಡಾರಿಗಳ ವಕೀಲರುಗಳು ಆ ಕುರಿತು ತಾವು ಏನನ್ನು ಮಾಡಲೂ ಸಾಧ್ಯವಿಲ್ಲವೆಂದು ಕೈಗಳನ್ನು ಕೆಳಗೆ ಮೇಲೆ ಮಾಡಿದರು.

ಪಟ್ಟಣದಲ್ಲಿ ಕೋಚಣ್ಣ ರೈಗಳು ಪ್ರಸಿದ್ಧಿಯನ್ನು ಹೊಂದಿದರು. ಅವರ ವ್ಯವಹಾರ ವಿಚಕ್ಷಣೆ ಈಗ ಪುತ್ತೂರಿನ ಮುನ್ಸಿಫ್ ಕೋರ್ಟಿನಿಂದ ಮಂಗಳೂರಿನ ಜಿಲ್ಲಾ ಜಡ್ಜರ ವರೆಗೆ ಬೆಳೆಯಿತು. ಕೆಲವು ಮದರಾಸು ಅಪೀಲುಗಳಲ್ಲಿಯೂ ಕೆಲಸ ಮಾಡಿದರು. ಇಂಥಿಂಥ ವ್ಯಾಜ್ಯಕ್ಕೆ ಇಂಥಿಂಥ ಕಾನೂನೇ ಆಗಬೇಕೆಂದು ಅವರೇ ವಕೀಲರುಗಳಿಗೆ ಹೇಳಿಕೊಡುವಷ್ಟರ ಮಟ್ಟಿನ ಅನುಭವ ಪಡೆದಿದ್ದರು. ಆದುದರಿಂದ ಹಳ್ಳಿಯವರೆಲ್ಲ ಅವರ ಮೂಲಕ ತಮ್ಮ ವ್ಯವಹರಣೆಗಳನ್ನು ನಡೆಸುತಿದ್ದರು. ಕೆಲವು ನಿರಕ್ಷರಿಗಳ ಆಸ್ತಿಗಳನ್ನು ಅವರ ಹೆಸರಲ್ಲೇ ಬರೆಸಿಕೊಂಡಾಯಿತು. ಒಬ್ಬ ಮುದುಕಿ ಸತ್ತ ಮೇಲೆ ಅವಳ ಹೆಣದ ಬೆರಳಿನಿಂದ ಹೆಬ್ಬೆಟ್ಟು ಪಡೆದು ದಸ್ತಾವೇಜು ಮಾಡಿ ಅವಳ ಇಡೀ ಆಸ್ತಿಯನ್ನೇ ಸ್ವಾಧೀನ ಮಾಡಿದರು.

ಇಷ್ಟೆಲ್ಲ ಅನುಕೂಲತೆಗಳು ಕೋಚಣ್ಣ ರೈಗಳಿಗೆ ಬಂದೊದಗಿದರೂ ಅವರಲ್ಲಿದ್ದ ಕಳ್ಳಬುದ್ಧಿ ಮಾತ್ರ ಇನ್ನೂ ಬಿಡಲಿಲ್ಲ. ಅವರ ಮನೆ ಒಳ್ಳೆಯ ಮರ್ಯಾದಿತ ಸಭ್ಯರಿರುವ ವಠಾರದಲ್ಲಿತ್ತು. ಅಲ್ಲಿ ಬಾವಿಯ ಹಗ್ಗ, ರಾಟೆ, ತಂಬಿಗೆ, ಕೊಡ ಇತ್ಯಾದಿ ಚಿಲ್ಲರೆ ಸಾಮಾನುಗಳನ್ನು ಕದಿಯುವ ಚಟವಾಯಿತು. ಕೆಲವು ಸಲ ಕದಿಯುವಾಗ ಸಿಕ್ಕಿಬಿದ್ದುದೂ ಇತ್ತು. ಒಮ್ಮೆ ಅವರ ಮನೆಯ ಹತ್ತಿರವೇ ವಾಸಿಸುತಿದ್ದ ಸಬ್ ಇನ್ಸ್‌ಪೆಕ್ಟರ್ ಯಾಕೂಬ್ ಪಾಶಾರ ಮನೆಯಿಂದ ಒಂದು ಬೆಲೆ ಬಾಳುವ ಗಡಿಯಾರವನ್ನೇ ಕದ್ದರು. ಪೋಲಿಸ್ ಇನ್ಸ್‌ಪೆಕ್ಟರ ಪಾಶಾ ಇದನ್ನು ತಿಳಿದು ರೈಗಳ ಮನೆಯನ್ನು ಧಾಳಿ

ಮಾಡಿದರು. ಆ ಧಾಳಿಯಲ್ಲಿ ಎಷ್ಟೋ ಜನರ ಕಳವಾದ ಸೊತ್ತುಗಳು ಸಿಕ್ಕಿದುವು. ಪಾಶಾರ ಲಾಳ ಕಟ್ಟಿದ ಬೂಟ್ಸಿನಲ್ಲಿ ನಾಲ್ಕು ಒದೆತಗಳೂ ರೈಗಳಿಗೆ ಸಿಕ್ಕಿದುವು. ಮತ್ತೆ ಪಾಶಾ ಮುಂದುವರಿಯಲಿಲ್ಲ. " ಇಲ್ಲೇ ನನ್ನ ಮನೆಯ ಹತ್ತಿರ ನೀನೊಬ್ಬ ಆಢ್ಯ ಗ್ರಹಸ್ಥನಂತೆ ವರ್ತಿಸುತ್ತಿದ್ದೀ. ನಿನ್ನದೇ ದೊಡ್ಡ ಮನೆಯಿದೆ. ಇನ್ನಾದರೂ ಮರ್ಯಾದೆಯಲ್ಲಿ ನಡೆದುಕೊಳ್ಳು. ಈಗ ನಿನಗೆ ಮಾಫಿ ಬಿಟ್ಟಿದ್ದೇನೆ, ಬದ್ಮಾಷ್ " ಎಂದು ಕಣ್ಣರಳಿಸಿ, ಕಾಲು ಕೆದರಿ ಗರ್ಜಿಸಿ ರೈಗಳನ್ನು ಬಿಟ್ಟುಬಿಟ್ಟರು.

ಈ ಘಟನೆಯಾದ ನಂತರ ರೈಗಳ ಪ್ರತಿಷ್ಠೆ ನೆಲಸಮವಾಯಿತು. ನೆರೆ ಮನೆಯವರ ಕಣ್ಣು ಯಾವಾಗಲೂ ಇವರ ಮೇಲೆ ಇರಲೇ ಬೇಕಾಯಿತು. ಎಲ್ಲಿ ಏನು ಕದ್ದು ಹೋಗಲಿ, ಇಲ್ಲವೆ ಬಿಸಾಡಿ ಹೋಗಲಿ, ದೂರುಗಳೆಲ್ಲ ರೈಗಳ ಮೇಲೆ. ಹಲವು ಸಲ ಸೆಟ್ಟರಿಗೆ ಪೆಟ್ಟು ಬಿತ್ತು. ಒಮ್ಮೆ ರಾತ್ರೆ ಯಾರೋ ನೆರೆಮನೆಯವರು ಅವರಿಗೆ ಕದ್ದದ್ದಕ್ಕೆ ಹೊಡೆದಾಗ, ಅವರೊಟ್ಟಿಗಿದ್ದ ಕೋಟಿ ಭಂಡಾರಿಗಳ ಹೆಂಡತಿ " ಇಲ್ಲಿ ಹೊಡೆಯುತ್ತಾರೇ ರಕ್ಷಿಸಿ ! " ಎಂದು ಬೊಬ್ಬೆ ಹೊಡೆಯಲು, ರೈಗಳು " ಅಯ್ಯೋ ಮುಂಡೇ, ಹೊಡೆಯುತ್ತಾರೆನ್ನಬೇಡ, ಕಳ್ಳರು ನುಗ್ಗಿದ್ದಾರೆ ಎಂದು ಹೇಳು " ಎಂದು ಪೆಟ್ಟಿನ ಮಧ್ಯದಲ್ಲೂ ಗದರಿಸಿದ್ದರು. ಇಷ್ಟಾದರೂ ಮೂಗು ಅವರದೇ ಮೇಲು.

ರೈಗಳಿಗೆ ಪೇಟೆಯಲ್ಲಿ ಭಂಡಾರಿಗಳ ಹೆಂಡತಿ ಅನಧಿಕೃತ ಹೆಂಡತಿಯಾಗಿದ್ದಳು. ಅವಳ ಪರಿಸ್ಥಿತಿಯಲ್ಲಿ ಅವಳಿಗೆ ಬೇರೆಲ್ಲಿ ಹೋಗಲೂ ಅವಕಾಶವಿರಲಿಲ್ಲ; ಗಂಡನಲ್ಲಿ ಹೋಗುವುದಂತೂ ಆಗದ ಮಾತು. ಕುಟುಂಬದಲ್ಲಿ ಆ ಮುಂಚೆಯೇ ಅವಳಿಗೆಂದು ಬಿಟ್ಟಿದ್ದ ಅಶನಾರ್ಥವನ್ನು ರೈಗಳೇ ವಸೂಲು ಮಾಡುತಿದ್ದರು. ಆದರೂ ರೈಗಳೆಂದರೆ ಅವಳಿಗೆ ಪಂಚಪ್ರಾಣವಾಯಿತು. ಒಮ್ಮೆ ಭಂಡಾರಿಗಳು ಅವಳನ್ನು ಹಿಂದಿನದೆಲ್ಲ ಮರೆತು ಬರಬೇಕೆಂದು ಹೇಳಿ ಕಳಿಸಿದ್ದರಂತೆ. ಅವಳು ಹೋಗಲಿಲ್ಲ. ಈಗ ಮುಸುರೆ ತಿಕ್ಕುವುದರಿಂದ ಹಿಡಿದು ಹಾಸಿಗೆ ಬಿಡಿಸುವವರೆಗೂ ಅವಳದೇ ಕೆಲಸ. ಹೀಗಿದ್ದರೂ ರೈಗಳಿಗೆ ಅವಳಲ್ಲದೆ ಎರಡು ಜನ ಸೂಳೆಯರೂ ಇದ್ದರು. ಮತ್ತೆ ನೆರೆಕರೆಯ ಹೆಂಗಸರನ್ನು ಒಲಿಸಲು ರೈಗಳ ಪ್ರಯತ್ನ ಸತತವಾಗಿ ನಡೆಯುತಿತ್ತು. ಕುಡಿಯುವುದಕ್ಕಂತೂ ಮಿತಿಯಿಲ್ಲ. ಕೋಟಿ ಭಂಡಾರಿಗಳ ಹೆಂಡತಿ ಇದನ್ನೆಲ್ಲ ನೋಡಿ

ಸುಮ್ಮನಿರಬೇಕಾಗಿತ್ತು. ಮಾತನಾಡಿದರೆ ಸಿಕ್ಕಿದ್ದರಲ್ಲಿ ರೈಗಳು ಹೊಡೆಯುತ್ತಿದ್ದರು.

ಇದೇ ರೀತಿಯಾಗಿ ಕೆಲವು ವರುಷಗಳು ಉರುಳಿದುವು. ಅವರ ಹತ್ತಿರ ಜನರು ಬಾರದಾದರು. ಆವರ ಸ್ವಲ್ಪ ಹಣ ಕಾಸುಗಳು ನೆರೆಕರೆಯವರಿಂದಲೇ ಕದಿಯಲ್ಪಟ್ಟವು. ಕೆಲವು ಆಸ್ತಿಗಳು ವ್ಯಾಜ್ಯಗಳ ಗಲಾಟೆಯಲ್ಲಿ ಕೈಬಿಟ್ಟವು. ರೈಗಳ ವರ್ಚಸ್ಸು ಹಳ್ಳಿಗಳಲ್ಲಿ ಕೂಡ ತುಂಬ ಕುಗ್ಗಿ ಹೋಯಿತು. ಅವರ ಕಕ್ಷಿಗಾರರೆಲ್ಲ ಒಬ್ಬೊಬ್ಬರೇ ದೂರವಾದರು. ಕೊನೆಗೆ ಪೇಟೆಯ ಮನೆಯನ್ನು ಮಾರಾಟ ಮಾಡಿದರು. ಕೋಟಿ ಭಂಡಾರಿಗಳ ಹೆಂಡತಿ ಏನೋ ಕಾಹಿಲೆಯಿಂದಾಗಿ ಮೃತಪಟ್ಟಳು.

ಸಂಜೀವನ ತಂದೆ ಮಂಜಣ್ಣ ರೈಗಳ ಸ್ನೇಹವನ್ನು ಮಾತ್ರ ಕೋಚಣ್ಣ ರೈಗಳು ಬಿಟ್ಟಿರಲಿಲ್ಲ. ಮಂಜಣ್ಣ ರೈಗಳ ವ್ಯವಹಾರಗಳೆಲ್ಲ ಸಾಮಾನ್ಯವಾಗಿ ಅವರ ಮೂಲಕವೇ ನಡೆಯುತಿತ್ತು. ಪೇಟೆಯ ಮನೆಯನ್ನು ಮಾರಾಟ ಮಾಡಿದ ಬಳಿಕ ಕೋಚಣ್ಣರೈಗಳು ಮಂಜಣ್ಣ ರೈಗಳ ಆಶ್ರಯುವನ್ನೇ ಪಡೆದು ಅವರಲ್ಲೇ ವಾಸಿಸತೊಡಗಿದರು.

ಆದರೆ ಕೋಚಣ್ಣ ರೈಗಳು ಅವರ ಕೊಂಕುಬುದ್ಧಿಯನ್ನು ಎಂದೂ ಬಿಡಲಿಲ್ಲ ಅದನ್ನು ಮರೆಮಾಡಲು ಯತ್ನಿಸುತಿದ್ದರು ಮಾತ್ರ. ಮಂಜಣ್ಣರೈ ಅವರ ಕುತಂತ್ರಗಳನ್ನು ಕಂಡುಹಿಡಿಯುತ್ತಿರುವಾಗಲೇ ವಾಂತಿಭೇದಿಯಿಂದ ಪ್ರಾಣಬಿಟ್ಟರು ಕೋಚಣ್ಣ ರೈಗಳ ಅದೃಷ್ಟ ಮೇಲಾಯಿತೆಂದು ಕೆಲವು ಸಮಯ ತೋರಿತು. ಆದರೆ ಪೂವಕ್ಕೆಯ ಅಣ್ಣನೊಬ್ಬರು ಮುಂಬಯಿಯಿಂದ ಬಂದರು. ಅವರಿಗೂ ರೈಗಳಿಗೂ ಕೆಲವೇ ದಿನಗಳಲ್ಲಿ ಜಗಳವಾಯಿತು. ರೈಗಳನ್ನು ಅವರು ಹೊರಗೆ ಅಟ್ಟಿ ಹಾಕಿದರೆಂದು ಊರವರು ಹೇಳುತಿದ್ದರು. ಕೆಲವು ಸಮಯದಲ್ಲಿ ಪೂವಕ್ಕೆಯ ಅಣ್ಣ ಪುನಃ ಮುಂಬಯಿಗೆ ಹೋದ. ರೈಗಳು ಮರಳಿದರು. ದೇವಪ್ಪ ಸಾಧಾರಣ ದೊಡ್ಡವನಾಗುವವರೆಗೆ ರೈಗಳದೇ ಆಡಳಿತೆ ನಡೆಯಿತೆನ್ನಬಹುದು. ಆಮೇಲೆ ದೇವಪ್ಪ, ರೈಗಳ ಕುರಿತಾಗಿ ತಾಯಿಯೊಡನೆ ಜಗಳಾಡಿದ. ಹಾಗಾಗಿ ರೈಗಳು ಪುನಃ ಪಟ್ಟಣ ಸೇರಿ ಹೋಟೇಲಿನ ಅನ್ನಕ್ಕೆ ಬಲಿಯಾಗಬೇಕಾಯಿತು.

ಸಂಜೀವನನ್ನು ಅವರು ಹಾಗೆ ಸಾಲೆ ಬಿಡಿಸಿದ್ದರೂ, ಅವನಿಗೆ ಪಾರ್ವತಿಯನ್ನು ಮದುವೆ ಮಾಡುವ ಕುರಿತು ನಾರಾಯಣ ಸೆಟ್ಟರೊಡನೆ ಪ್ರಸ್ತಾಪಿಸಿದ್ದು ರೈಗಳೇ. ಸಂಜೀವನನ್ನು ತುಂಬ ಹೊಗಳಿದ್ದರು. ಆದುದರಿಂದ ರೈಗಳಿಗೆ ನಾರಾಯಣಸೆಟ್ಟರ ಸ್ನೇಹಕ್ಕೆ ಎಡೆ ಸಿಕ್ಕಿತು. ಪಾರ್ವತಿಯ ಮದುವೆಯ ನಂತರ ಅವರು ಆಗಾಗ ಸೆಟ್ಟರ ಮನೆಗೆ ಹೋಗಿ ಕೆಲದಿನ ಉಳಕೊಳ್ಳುವುದೂ ಇತ್ತು. ಆದರೆ ಲಿಂಗಮ್ಮನಿಗೆ ರೈಗಳೊಡನೆ ಸರಿಹೋಗುತಿದ್ದಿಲ್ಲ. ಸೆಟ್ಟರೊಡನೆ ಯಾವಾಗಲೂ ರೈಗಳ ಕುರಿತು ದೂಷಿಸದಿಲ್ಲ. ಕೆಲವೊಮ್ಮೆ ಅವರಿಗೆ ಅಪ್ರತ್ಯಕ್ಷ ರೀತಿಯಲ್ಲಿ ಬಯ್ಯುವುದೂ ಇತ್ತು.

## ಅಧ್ಯಾಯ ಆರು.

ಪಾರ್ವತಿಯ ಮೇಲೆ ಪೂವಕ್ಕೆಯ ಅಧಿಕಾರ ಬಿರುಸಾಗಿತ್ತು. ಅತ್ತೆ–ಸೊಸೆಯರ ಸಂಬಂಧವೆಂದರೆ ಎಣ್ಣೆಸೀಗೆಯಂತೆ ಎನ್ನುವ ಗಾದೆಗೆ ಅವರಿಬ್ಬರು ಹೊರತಾಗಿರಲಿಲ್ಲ. ಪಾರ್ವತಿಯು ಸೆಟ್ಟರಲ್ಲಿ ಬಹಳ ಸುಖವಾಗಿ ದಿನಗಳೆದವಳು. ಅಲ್ಲಿ ಅವಳಿಗೆ ಏನಾದರೂ ಸ್ವಲ್ಪ ಮನೆಗೆಲಸ ಮಾತ್ರ ಇರುತಿತ್ತು. ಅದನ್ನು ಆದಷ್ಟು ಸಂಕುವಿನಿಂದಲೇ ಲಿಂಗಮ್ಮ ಮಾಡಿಸುತಿದ್ದಳು. ಮತ್ತೆ ಹೊರಗಿನ ಕೆಲಸಕ್ಕೆ ಬೇಕಾದಷ್ಟು ಆಳುಗಳಿದ್ದರು. ಆದುದರಿಂದ ಪಾರ್ವತಿಗೆ ಬೆವರು ಸುರಿಯುವಷ್ಟು ದುಡಿದು ಅಭ್ಯಾಸವೇ ಇಲ್ಲವೆನ್ನಬಹುದು.

ಸೆಟ್ಟರಲ್ಲಿರುವಾಗ ಅವಳಿಗೆ ಬೆಳಗ್ಗೆ ಎದ್ದೊಡನೆ ಗಂಜಿಯೂಟವಾಗುವುದು. ಆಮೇಲೆ ವಸ್ತ್ರ ಬದಲಾಯಿಸಿ ಹೂ ಕೊಯ್ಯಲು ತೋಟಕ್ಕೆ ಹೋಗುವಳು. ಅಲ್ಲಿ ಗುಲಾಬಿ, ದಾಸವಾಳ, ಗೋಟಿ, ಗೊಂಡೆ ಮುಂತಾದ ಹೂಗಳನ್ನು ಕೊಯ್ದು ಮನೆಗೆ ತಂದು ಮಾಲೆ ಕಟ್ಟುವಳು. ಅದಾದ ಬಳಿಕ ತಲೆ ಬಾಚಿ ಹೂ ಮುಡಿಯುವಳು. ಮತ್ತೆ ಏನಾದರೂ ಸ್ವಲ್ಪ ಅಡುಗೆ ಕೆಲಸ. ಇಷ್ಟು ಲಘು ಕೆಲಸಗಳನ್ನು ಮಾಡುತಿದ್ದ ಪಾರ್ವತಿಗೆ ಗಂಡನ ಮನೆಯಲ್ಲಿಯ ಕೆಲಸ ಸಹಿಸದಾಯಿತು.

ಮುಂಜಾನೆಯ ಕೋಳಿ ಕೂಗುವಾಗಲೇ ಪೂವಕ್ಕ ಪಾರ್ವತಿಯನ್ನು ಕರೆದು ಎಬ್ಬಿಸುವಳು. ಆಮೇಲೆ ಪಾತ್ರೆ ತೊಳೆದು ನೀರು ತಂದು ಅನ್ನ ಪದಾರ್ಥಗಳನ್ನು ಬೇಯಿಸಬೇಕು ಶಂಕರಿ ಅಷ್ಟು ದೊಡ್ಡ ಹುಡುಗಿಯಾಗಿದ್ದರೂ ಅವಳೊಡನೆ ಪೂವಕ್ಕ ಏನೂ ಕೆಲಸ ಹೇಳುತ್ತಲೂ ಇರಲಿಲ್ಲ. ಅವಳು ಅವಳಾಗಿಯೇ ಮಾಡುತ್ತಲೂ ಇರಲಿಲ್ಲ. ಬೆಳಿಗ್ಗೆ ತಂಗಳನ್ನ ಉಂಡಾದ ಮೇಲೆ ಪಾರ್ವತಿ ಗುಡ್ಡೆಗೆ ಹೋಗಬೇಕು. ಅಲ್ಲಿಂದ ಹಟ್ಟಿಗೆ ಹಾಕಲು ಸೊಪ್ಪು ತರಬೇಕು. ಪೈರಿನ ಸಮಯದಲ್ಲಿ ಪೈರಿನ ಕೆಲಸ ಬೆಳಿಗ್ಗಿನಿಂದ ಕತ್ತಲೆಯವರೆಗೆ. ದಿನದಿನವೂ ಪಾರ್ವತಿಯ ಕಣ್ಣೀರು ಹೆಚ್ಚಾಗತೊಡಗಿತು.

ಅವಳಿಗೆ ಯಾರೊಡನೆ ಮಾತನಾಡಲು ಪೂವಕ್ಕೆಯ ಅಪ್ಪಣೆ ಇಲ್ಲ. ಎಲ್ಲ ಬಿಟ್ಟು ಸಂಜೀವನೊಡನೆ ಕೂಡ ಅವಳು ರಾತ್ರಿ ಮಲಗಿದ ಮೇಲೆ ಮಾತನಾಡಬೇಕಷ್ಟೆ. ಬೈಗಳಂತೂ ಹೇಳತೀರದು. ಪಾರ್ವತಿಯ ತಾಯಿಗೆ, ತಂದೆಗೆ, ಅಜ್ಜಂದಿರಿಗೆ—ಎಲ್ಲ ದಿನಂಪ್ರತಿ ಬೈಗಳು. ಪಾರ್ವತಿ ಹೇಗೆ ಅನ್ನ ಬೇಯಿಸಿದರೂ ಪೂವಕ್ಕ ಅದನ್ನು ಒಂದೋ ಬೆಂದು ಮುದ್ದೆಯಾಯಿತೆನ್ನುವಳು. ಇಲ್ಲವೇ ಬೇಯಲೇ ಇಲ್ಲವೆನ್ನುವಳು. ಪದಾರ್ಥಕ್ಕೆ ಒಂದು ದಿನ ಉಪ್ಪು ಹೆಚ್ಚಾಯಿತೆಂದರೆ, ಮರುದಿನ ಮೆಣಸು ಜಾಸ್ತಿಯಾಯಿತೆನ್ನುವಳು. ಅಂತೂ ಪಾರ್ವತಿ ಯಾವ ಕೆಲಸ ಮಾಡಿದರೂ ಅವಳಿಗೆ ತೃಪ್ತಿಯಿಲ್ಲ. ಅವಳು ಮಾಡುವ ಪ್ರತಿಯೊಂದು ಕೆಲಸದಲ್ಲೂ ಸುಮ್ಮನೆ ಬಯ್ಯಲು ಇಲ್ಲ-ಸಲ್ಲದ ಕಾರಣಗಳನ್ನು ಹುಡುಕುವಳು. ಏನೇನೋ ಅಪವಾದಗಳನ್ನು ಹೊರಿಸುವಳು. ಬಂದಬಂದವರೆದುರು ಅವಳನ್ನು ಟೀಕಿಸುವಳು.

ಪೂವಕ್ಕೆಯ ಇನ್ನೊಬ್ಬ ಸೊಸೆ ರುಕುಮಿ ಅತ್ತೆಯ ಈ ಬೈಗಳಿಗೆ ಸಿಗುತಿದ್ದಿಲ್ಲ. ಅವಳು ಹೆಚ್ಚಾಗಿ ಇದ್ದುದು ತಾಯಿಯ ಮನೆಯಲ್ಲೇ. ದೇವಪ್ಪನೂ ರುಕುಮಿಯ ತಾಯಿಯ ತಂತ್ರದಲ್ಲಿ ಭಾಗಿಯಾಗಿ ಯಾವಾಗಲೂ ರುಕುಮಿಗೆ ಒಂದಲ್ಲದಿದ್ದರೆ ಒಂದು ಕಾಹಿಲೆಯ ನೆವನವನ್ನು ಮುಂದಿರಿಸುತಿದ್ದನು. ಪೂವಕ್ಕ ಮತ್ತೂ ಅವನನ್ನು ಒತ್ತಾಯ ಪಡಿಸಿದರೆ ಒಮ್ಮೆ ಅವಳನ್ನು ಮನೆಗೆ ಕರೆದುಕೊಂಡು ಬಂದು ಒಂದೆರಡು ವಾರಗಳೊಳಗೇ ಹಿಂದೆ ಕರೆದುಕೊಂಡು ಹೋಗುವನು. ಆದರೆ ಅವನು ಮಾತ್ರ ವಾರಕ್ಕೊಮ್ಮೆಯಾದರೂ ಹೋಗಿ ಎರಡು ದಿನ ಅಲ್ಲಿ ಉಳಕೊಂಡು ಬಾರದಿಲ್ಲ.

ಆದುದರಿಂದ ರುಕುಮಿ ಎಂದೂ ಮನೆಯುವಳೆಂದು ಗ್ರಹಿಸಲ್ಪಟ್ಟಿದ್ದಿಲ್ಲ. ಬಂದರೆ ಅವಳು ನೆಂಟರ ಹಾಗೆ. ಆಮೇಲೆ ಮಕ್ಕಳ ಆರೈಕೆ ಬೇರೆ. ಹೀಗಾಗಿ ಪೂವಕ್ಕಗೆ ಅವಳನ್ನು ಯಾವ ವಿಧದಿಂದ ಶಿಕ್ಷಿಸಲೂ ಆಸ್ಪದ ದೊರೆಯಲಿಲ್ಲ. ದೇವಪ್ಪನಂತೂ ಹಿರಿಯ ಮಗನಾದುದರಿಂದ ಮನೆಯ ಅನಧಿಕೃತ ಯಜಮಾನ.

ಸಂಜೀವನಿಗೆ ಮುಖ್ಯವಾಗಿ ಹಳ್ಳಿಯ ಜೀವನವೇ ಒಗ್ಗುತ್ತಿರಲಿಲ್ಲ. ಅದರ ಮೇಲೆ ಗದ್ದೆಯ ಕೆಲಸವಂತೂ ಸಾಧ್ಯವೇ ಇಲ್ಲ. ಅವನ ವಸ್ತ್ರಗಳಿಗೆ ಕೆಸರಿನ ಪರಿಚಯವಿಲ್ಲ. ಪಟ್ಟಣದಲ್ಲೇನೋ ಕ್ರಿಕೆಟ್, ಹಾಕಿ ಮುಂತಾದ ಶ್ರಮಯುಕ್ತ ಆಟಗಳನ್ನಾಡುತಿದ್ದವ. ಅಲ್ಲದೆ ಮೈಲಿಗಟ್ಟಲೆ ಬೈಸಿಕಲ್ ಬಿಡಬಲ್ಲ. ಆದರೆ ಗದ್ದೆಯಲ್ಲಿ ಹಾರೆ-ಪಿಕ್ಕಾಸಿನ ಕೆಲಸ ಪ್ರಾರಂಭಿಸಿದರೆ ಒಂದು ಗಳಿಗೆಯಲ್ಲೇ ದಣಿವು—ಆಯಾಸ. ಅಂಗೈಯಲ್ಲಿ ಬೊಕ್ಕೆಗಳೇಳುವುವು. ನೇಗಿಲು ಹಿಡಿದು ನಾಲ್ಕುಸುತ್ತು ಉಳುವಾಗ ಅವನ ಕಾಲಿನ ಉಗುರುಗಳೆದ್ದು ರಕ್ತ ಬರುವುದು. ಅಲ್ಲಲ್ಲಿ ಕಲ್ಲು ಕೊಯಿದು ಗಾಯಗಳಾಗುವುವು. ಇಷ್ಟೆಲ್ಲ ಅಡೆ-ತಡೆಗಳ ಮಧ್ಯದಲ್ಲೂ ಅವನಿಗೆ ತಾತ್ಕಾಲಿಕವಾಗಿಯಾದರೂ ದುಡಿಯಲೆ ಬೇಕಾಯಿತು. ಪೂವಕ್ಕ ಅವನಿಗೂ ಬೈಗಳನ್ನು ಕಡಿಮೆ ಮಾಡುತಿದ್ದಿಲ್ಲ. ಮತ್ತೆ ಕಾಫಿ-ಚಹ-ಸಿಗರೇಟುಗಳ ವಂಶವೇ ಇಲ್ಲ. ಬೇಕಾದರೆ ಅವನು ಎಲೆಯಡಿಕೆ ಜಗಿಯಬೇಕಷ್ಟೆ. ಅದು ಅವನಿಗೆ ಆಗುತ್ತಿರಲಿಲ್ಲ. ಅವನಿಗೆ ಮೆಂಚೆಸ್ಟರ್ ವೇಷ್ಟ ಇಲ್ಲವೆ ಪಾಪ್ಲಿನ್ ಅಂಗಿ, ಉಣ್ಣೆಯ ಸೂಟು, ಬೂಟ್ಸ್— ಇವುಗಳಿಗೆಲ್ಲ ಹಣ ಈಗ ಸಿಗದಾಯಿತು. ಅವನಿಗೆ ಬೇಕಾದ ವಸ್ತ್ರಗಳನ್ನು ಪೂವಕ್ಕ ದೇವಪ್ಪನ ಮೂಲಕ ತರಿಸುವಳು. ಅದೂ ವರುಷಕ್ಕೊಮ್ಮೆ ವರದ ಬಾಳಿಗರ ಅಂಗಡಿಯಿಂದ. ಅವರಲ್ಲಿ ಹಳ್ಳಿಯವರಿಗೆ ತಕ್ಕದಾದ ಕೋಲಂಚಿನ ಪಂಚೆ, ಕೊಯಂಬತ್ತೂರು ಶಾಲು, ಮಲಬಾರು ತುಂಡು. ಇವುಗಳಲ್ಲದೆ ಬೇರೆ ಯಾವ ವಸ್ತ್ರಗಳೂ ಇರುವ ವಾಡಿಕೆಯಿಲ್ಲ. ಲೆಕ್ಕವೂ ಹಾಗೆಯೇ! ವರುಷಕ್ಕೊಮ್ಮೆ. ಈ ವರುಷದ ಸಾಲ ಬರುವ ವರುಷ ಸಂದಾಯವಾಗಬೇಕು. ಇದು ಅಷ್ಟೊಂದು ಲಾಭಪ್ರದವಾದ ವ್ಯಾಪಾರವಲ್ಲವೆಂದು ನೋಡುವವರಿಗೆ ತೋರಿದರೂ ವರದ ಬಾಳಿಗರ ಆಸ್ತಿಯ ವಿಸ್ತೀರ್ಣ ವರುಷವರುಷವೂ ಬೆಳೆಯುತಿತ್ತು.

ಪಾರ್ವತಿಗೂ ಅಷ್ಟೆ. ನಾರಾಯಣಸೆಟ್ಟರು ವರುಷಕ್ಕೆ ತಂದುಕೊಡುತಿದ್ದ ಏಳೆಂಟು ರೇಶ್ಮೆಯ ಸೀರೆಗಳೆಲ್ಲಿ, ಈ ದಪ್ಪವಾದ ಕೈಮಗ್ಗದ ಜೋಡು ಸೀರೆಗಳೆಲ್ಲಿ? ಇವುಗಳನ್ನು ಒಗೆಯಲು ಕೂಡಾ ಅವಳಿಗೆ ಬಹಳ ಕಷ್ಟ. ಬಣ್ಣವಂತೂ ಕಪ್ಪುವಿನಃ ಬೇರಿಲ್ಲ. ರವಿಕೆಗಳು ಒಂದೂ ಅವಳಿಗೆ ಸರಿಯಾಗಿ ಆಗವು. ಒಂದೇ ಕೈ ಉದ್ದ, ಇಲ್ಲವೆ ಗುಬ್ಬಿ ಹಾಕಿಕೊಳ್ಳಲು ಬಿಗಿಯಾಗುವುವು. ಅವುಗಳು ಒಂದೋ ಎರಡೋ ಸಾರಿ ತೊಳೆಯುವಾಗ ಬಣ್ಣಹೋಗಿಕೊಳಕಾಗುವುವು. ಮೈ ತೊಳೆಯಲು ಸಾಬೂನಿಲ್ಲ. ಬದಲಾಗಿ ಸೀಗೇಕಾಯಿ ಹುಡಿ. ವಸ್ತ್ರ ತೊಳೆಯಲಿಕ್ಕೂ ಅದೇ. ತಂದೆ ಹಿಂದೆ ತಂದುಕೊಡುತಿದ್ದ ಪೌಡರ್ ಮತ್ತು ಪರಿಮಳದ ಎಣ್ಣೆಗಳು ಪುರಾತನದ ಮಾತುಗಳಾದುವು. ಈಗ ತಲೆಗೊಮ್ಮೆ ಎಣ್ಣೆ ಇಡಲು ಕೂಡಾ ಸಮಯವಿಲ್ಲ. ಹಿಂದೆ ಅವಳು ಬಣ್ಣದ ರಿಬನ್ ಹಾಕಿ ಕಟ್ಟುತಿದ್ದ ಜಡೆ ಮೊಣಕಾಲುವರೆಗೆ ಇಳಿಯುತಿತ್ತು. ಈಗ ತಲೆಗೆ ದಿನಾಲೂ ಅಡಿಕೆಮರದ ಹಾಳೆಯ 'ಮುಟ್ಟಾಳೆ' ಯನ್ನಿಟ್ಟು ಕೂದಲುಗಳ ಹೊಳಪು ಮಾಯವಾಗಿದೆ.

ಹೀಗಾಗಿ ರಾತ್ರೆ ಸಂಜೀವನ ಕೋಣೆಗೆ ಬರುವಾಗ ಅವಳು ಯಾವಾಗಲೂ ನಿದ್ದೆಯಿಂದ ತೂಕಡಿಸುತಿದ್ದಳು. ಸೊಪ್ಪು ಕೊಯ್ಯುವಾಗ ಕೈಬೆರಳುಗಳಿಗೆ ಆಗುವ ಗಾಯಗಳಿಗೆ ಲೆಕ್ಕವಿಲ್ಲ. ಗುಡ್ಡೆಯಲ್ಲಿ ಸಂಚರಿಸುವಾಗ ಅಂಗಾಲುಗಳಿಗೆ ಚುಚ್ಚುವ ಮುಳ್ಳುಗಳು ಅವಳನ್ನು ಸರಿಯಾಗಿ ನಡೆಯದಂತೆ ಮಾಡುತಿದ್ದುವು. ಮತ್ತೆ ಭಾರವನ್ನು ಹೊತ್ತು, ಒಂದು ದಿನ ತೋಳುಬೇನೆ, ಮತ್ತೊಂದು ದಿನ ಕುತ್ತಿಗೆ ನೋವು—ಹೀಗೆ ಒಂದು ದಿನವಾದರೂ ಅವಳು ಸುಖದಿಂದಿದ್ದುದಿಲ್ಲ. ಇಷ್ಟಲ್ಲದೆ ಪೂವಕ್ಕೆಯ ಬೈಗಳನ್ನು ಕೇಳಿ ಪ್ರತಿದಿನವೂ ಅವಳು 'ಕಣ್ಣೀರಿನ ಅನ್ನ' ತಿನ್ನಬೇಕಷ್ಟೆ.

ಒಂದು ದಿನ ಸೆಟ್ಟರೇ ಸ್ವತಃ ಅಳಿಯ ಮತ್ತು ಮಗಳನ್ನು ನೋಡಿಕೊಂಡು ಹೋಗಲು ಬಂದರು. ಅವರಿಗೆ ಗದ್ದೆಯಲ್ಲಿ ಕೆಲಸ ಮಾಡುತಿದ್ದ ಪಾರ್ವತಿಯನ್ನು ನೋಡಿ ಮೊದಲು ಗುರುತು ಸಿಗಲಿಲ್ಲ! ಹಾಗೆಯೇ ಮನೆಗೆ ಬಂದು ಸಂಜೀವನನ್ನು ಮಾತನಾಡಿಸಿದರು. ಪೂವಕ್ಕೆಯ ಉಪಚಾರಕ್ಕಂತೂ ಮಿತಿಯಿಲ್ಲ. ಅವರಿಗೆ ಒಂದು ಕೋಳಿಯ ಸಂಭ್ರಮವಾಯಿತು. ಆದರೆ ಸೆಟ್ಟರಿಗೆ ಅಂದು ನಿದ್ದೆ ಹಿಡಿಯಲಿಲ್ಲ. ಅವರ ಮಗಳು ಕೆಲಸದ

ತೊತ್ತಿನಂತಾಗಿದ್ದಳು! ಅವಳ ಚೆಲುವು, ಅವಳ ದೇಹದ ಮಾಟ ಇವೆಲ್ಲ ಈಗ ಪೂರ್ಣ ಬದಲಾಗಿದ್ದುವು. ಅವಳ ಕಣ್ಣಿನಲ್ಲಿ ಹೊಳೆಯುತಿದ್ದ ಆ ಕಳ ಕಳೆ ಈಗ ಮಾಯವಾಗಿ ಅದರಲ್ಲಿ ಕರಾಳತೆ ಹುಟ್ಟಿತ್ತು. ಕೈಕಾಲುಗಳೆಲ್ಲ ಕ್ಷೀಣಿಸಿದ್ದುವು. ಎಲ್ಲ ಬಿಟ್ಟು ಅವಳು ಉಟ್ಟ ಬಟ್ಟೆ ಕೂಡಾ ಹರಕಾಗಿತ್ತು.

ಮಗಳ ಮೇಲಿನ ಮಮತೆ ಸೆಟ್ಟರಿಗೆ ದ್ವಿಗುಣಿತವಾಯಿತು. ಅವಳನ್ನು ಎಷ್ಟು ಪ್ರೇಮದಿಂದ ಸಾಕಿದ್ದರು! ಅವಳ ಯಾವೊಂದು ಕೇಳಿಕೆಗೂ ಅವರು ಆಗದೆಂದುದಿಲ್ಲ. ಅವಳು ತನ್ನ ಮನೆಯನ್ನು ಬೆಳಗಿಸುವವಳು ಎಂದು ಹಲ ವಾರು ಬಾರಿ ಸಂಜೀವನೊಡನೆ ಹೇಳಿದ್ದರು. ಅಲ್ಲದೆ ಅವಳ ಮದುವೆಗೆ ಪಟ್ಟಷ್ಟು ಶ್ರಮ ಅವರು ಎಂದೂ ಅನುಭವಿಸಿದುದಿಲ್ಲ. ಮದುವೆ ಮಾಡಿ ಕೊಡುವಾಗ ಸಂಜೀವ ವಿದ್ಯಾವಂತ, ಪೂವಕ್ಕ ಮುದುಕಿ, ದೇವಪ್ಪ ಹೆಡ್ಡ— ಹೀಗಾದುದರಿಂದ ಸಂಜೀವನು ಸುಮ್ಮನಿರಲಾರ. ಅವನು ಬೇಗನೇ ಆಡ ಳಿತೆಯನ್ನು ನಡೆಸಿಯಾನು ಎಂದು ಸೆಟ್ಟರು ಭಾವಿಸಿದ್ದರು. ಅದೇ ಆಸೆ ಯಿಂದ ಸಂಜೀವ ಸಾಧಾರಣ ಕುರೂಪಿಯಾಗಿದ್ದರೂ, ಅಷ್ಟೊಂದು ಗುಣ ವಂತನಲ್ಲವೆಂದು ಇತರರು ಹೇಳಿದರೂ, ಸೆಟ್ಟರು ತಮ್ಮ ನಿರ್ಧಾರವನ್ನೇ ಮುಂದರಿಸಿದ್ದರು. ಆದರೆ ಈಗ ಅವರ ಗಗನಕುಸುಮ ಕಳಚಿ ತಲೆಕೆಳಗಾಗಿ ಕೆಳಗೆ ಬಿದ್ದು, ಸಿಡಿದು ಹೋಯಿತು.

ಮರುದಿನ ಸೆಟ್ಟರು ತಾನು ಹೋಗುವಾಗ ಮಗಳನ್ನು ಕರೆದುಹೋಗುವೆ ನೆಂದರು. ಪೂವಕ್ಕ ಒಂದೆರಡು ನೆವನ ಹೇಳಿ ಪಾರ್ವತಿಯನ್ನು ಕುಳ್ಳಿರಿಸ ನೋಡಿದಳು. ಆದರೆ ಸೆಟ್ಟರ ಒತ್ತಾಯಕ್ಕೆ ಅವಳು ಕೊನೆಗೆ ತಲೆಬಾಗ ಬೇಕಾಯಿತು.

ಅಂದು ರಾತ್ರೆ ದೇವಪ್ಪನಿಗೂ ಸಂಜೀವನಿಗೂ ಏನೋ ಪುಟ್ಟ ಕಾರಣ ಕ್ಕಾಗಿ ಜಗಳ ಪ್ರಾರಂಭವಾಯಿತು. ಸಂಜೀವ ಶಂಕರಿಗೆ ಒಂದೇಟು ಕೊಟ್ಟ ನಂತೆ. ದೇವಪ್ಪ ಸಂಜೀವನಿಗೇ ಹೊಡೆಯಲು ಹೋದನಂತೆ. ಹಾಗೆ ಮೊದಲುಗೊಂಡ ಜಗಳ ಪೂವಕ್ಕೆಯ ಮಧ್ಯಸ್ತಿಕೆಗೂ ಕೊನೆಗೊಳ್ಳಲಿಲ್ಲ. ಬದಲಾಗಿ ಗಳಿಗೆಗಳಿಗೆಗೂ ಔನ್ನತ್ಯಕ್ಕೇರುತಿತ್ತು. ಇಬ್ಬರ ಕೈಯಲ್ಲೂ ದೊಣ್ಣೆ ಗಳಿದ್ದುವು.

“ ನಿನ್ನಪ್ಪ ಅವಳನ್ನು ಅನ್ನ ಕೊಟ್ಟು ಸಾಕಿದ್ದಾನೆಯೋ ಕತ್ತೇ ಜನ್ಮ ದವನೇ ? ನಿನಗೆ ಬಹಳ ಗರ್ವ ಬಂದಿದೆ ಗೊಡ್ಡವರ ಸಂಬಂಧವಾಗಿದೆ ಯೆಂದು ! ” ಎನ್ನುತ್ತ ದೇವಪ್ಪ ಸಂಜೀವನ ಮೇಲೆ ದೊಣ್ಣೆಯೆತ್ತಿದ.

ಸಂಜೀವ ಪೆಟ್ಟನ್ನು ಹೇಗಾದರೂ ತಪ್ಪಿಸಿಕೊಂಡು “ ನಿನ್ನನ್ನು ಯಾರಾದರೂ ದೊಡ್ಡವರ ಸಂಬಂಧ ಮಾಡಬಾರದೆಂದು ಅಡ್ಡಿ ಮಾಡಲಿಲ್ಲ. ಶಂಕರಿಯನ್ನು ನೀನೂ ಸಾಕಲಿಲ್ಲ. ಸುಮ್ಮನೆ ಕುಡಿದು ಏನೇನು ಮಾತನಾಡ ಬೇಡ ” ಎಂದ.

“ ನಿಮ್ಮ ಕಾಳಗವನ್ನು ನಿಲ್ಲಿಸಿ ” ಎಂದು ಪೂವಕ್ಕ ನಡುವೆ ಬಾಯಿ ಹಾಕಿದಳು. “ ನಿಮಗೆ ಇಲ್ಲಿಯ ಅನ್ನ ಹೆಚ್ಚಾಗುತ್ತದೆ. ಈ ಬಾವಿಯ ನೀರಿನ ಗುಣ ಅದು. ”

ಸಂಜೀವ ಕೋಪದಲ್ಲಿ ಥರಥರನೆ ನಡುಗುತಿದ್ದ. ಅವನಿಗೆ ಮಾವ ನನ್ನು ಕಂಡುದೇ ದೊಡ್ಡ ಅವಮಾನವಾಗಿತ್ತು. ಅದರ ಮೇಲೆ ದೇವಪ್ಪನ ಮೊಂಡುತನದ ಒಳಾಡಳಿತೆಯ ಮೇಲೆ ಎಂದೋ ಜಿಗುಪ್ಸೆ ಹುಟ್ಟಿತ್ತು. ಮತ್ತೆ ಪೂವಕ್ಕ ಪಾರ್ವತಿಯ ಮೇಲೆ ಕಿಡಿಕಾರುತಿದ್ದುದಂತೂ ಉಂಟಲ್ಲ ? ಈ ಎಲ್ಲ ಪ್ರವಾಹಗಳೂ ಈಗ ಸಂಗಮ ಗೂಡಿದುವು. ತನ್ನ ದೊಣ್ಣೆಯ ಪೆಟ್ಟು ಒಡಹುಟ್ಟಿದ ಅಣ್ಣನಿಗೆ ಬೀಳಬೇಕೋ ಅಲ್ಲ, ತನ್ನನ್ನು ಲೋಕದಲ್ಲಿ ಸೃಷ್ಟಿ ಸಿದ ತಾಯಿಯ ಮೇಲೆಯೇ ಬೀಳಬೇಕೋ ಎಂಬುದು ಅವನಿಗೆ ತಿಳಿಯದಾ ಯಿತು.

“ ಇಗೋ ತಾಯಿ ” ಸಂಜೀವ ಅವನ ಕೈಯನ್ನು ತೋರಿಸುತ್ತ ಗದರಿ ಸಿದ. “ ನಿನ್ನ ಮಮತೆ ಇನ್ನು ಸಾಕು. ಈತನಕ ನೀನು ನನ್ನನ್ನು ಮತ್ತೆ ನನ್ನ ಹೆಂಡತಿಯನ್ನು ಸಂರಕ್ಷಿಸಿದುದು ಸಾಕು. ನಿನ್ನ ಆಸ್ತಿಯ ಹಣ ಖರ್ಚಾ ಗುವುದು ಬೇಡ. ನಾವೆಲ್ಲಾದರೂ ಬೇಡಿಯಾದರೂ ಜೀವನ ನಡೆಸುತ್ತೇನೆ. ನಿನಗೊಬ್ಬ ಮಗನಿದ್ದಾನಲ್ಲ ! ಅವನು ನಿನ್ನನ್ನು ಸ್ವರ್ಗಕ್ಕೆ ಬೇಕಾದರೂ ಕಳಿಸಿಯಾನು. ”

“ ದೊಡ್ಡ ಜನದ ಹಾಗೆ ಮಾತನಾಡಬೇಡ. ಇಗೋ ನಿನ್ನ ತಲೆ ಯನ್ನೇ ಒಡೆದು ಬಿಡುತ್ತೇನೆ. ನನ್ನ ತಾಯಿಗೆ ಬಯ್ಯಲು ಪ್ರಾರಂಭಿಸಿದೆಯಾ ಕಳ್ಳ ! ನಿನಗೆ ಬರಹ ಕಲಿಯಲಿಕ್ಕೆಂದು ಪಾಪ ಅವಳೆಷ್ಟು ಖರ್ಚು ಮಾಡಿ

ದಳು ! ಆಮೇಲೆ ನಿನಗೆ ಮದುವೆ, ಅಲ್ಲಲ್ಲ, ಬೊಜ್ಜವಾಯಿತು. ನಿನಗೊಂದಿಷ್ಟೂ ಗುರುತಿಲ್ಲ" ಎಂದು ದೇವಪ್ಪ ಉತ್ತರಿಸಿದ.

"ಆಯಿತು. ಚಿಂತಿಲ್ಲ. ನನ್ನ ಪಾಲೆಲ್ಲ ಈ ಒಳಗೇ ಖರ್ಚಾಗಿ ಹೋಗಿದೆ, ಅಲ್ಲವೇ ? ಇನ್ನು ನನಗೆ ಉಳಿದ ಋಣವೆಂದರೆ ನಾಲ್ಕು ಮಣ ಕಟ್ಟಿಗೆ ಮಾತ್ರವೆಂದು ಕಾಣುತ್ತದೆ. ನೀವೇ ಇನ್ನು ಸುಖವಾಗಿ ಬಾಳಿ" ಹೀಗೆನ್ನುತ್ತ ಸಂಜೀವ ತನ್ನ ದೊಣ್ಣೆಯನ್ನು ಅತ್ತ ಬಿಸಾಡಿ ತನ್ನ ಕೋಣೆಗೆ ಹೋದ.

ಪೂವಕ್ಕನ ಅಳು ಆಗ ನಿಂತಿತ್ತು. ಅವಳಿಗೂ ಕೋಪ ಬಂದಿತ್ತು. ಸಂಜೀವ ಅವಳೊಡನೆ ಇಷ್ಟು ನಿಷ್ಠುರವಾಗಿ ಎಂದೂ ಮಾತನಾಡಿದವನಲ್ಲ. ದೇವಪ್ಪನಿಗೆ ಅವಳು ಹೆಚ್ಚಿಗೆ ಸಲುಗೆ ಕೊಡುತ್ತಿದ್ದುದು ಅವಳಿಗೇ ಗೊತ್ತಿತ್ತು. ಆದರೆ ಸಂಜೀವನು ಆ ಸಲುಗೆಯನ್ನು ಈ ರೀತಿ ಅರ್ಥ ಮಾಡಿಕೊಂಡಾನೆಂದು ಅವಳು ಗ್ರಹಿಸಿರಲಿಲ್ಲ. ಮತ್ತೆ ದೇವಪ್ಪನೂ ಇಷ್ಟು ಧೈರ್ಯದಿಂದ ಮಾತನಾಡಿಯಾನೆಂಬುದನ್ನು ಅವಳು ನೆನೆಸಿರಲಿಲ್ಲ.

ಅವಳು ದೇವಪ್ಪನ ಬಳಿಗೆ ಹೋಗಿ ·ಹೇಳಿದಳು: "ಇಗೋ ದೇವು. ನೀವು ಪಾಲು-ಗೀಲಿನ ವಿಚಾರ ಮಾತನಾಡಿದರೆ ನಾನು ಈಗಲೇ ಹೊರಟು ಹೋಗುತ್ತೇನೆ. ನೀವೇ ಏನಾದರೂ ಮಾಡಿಕೊಳ್ಳಿ" ಎಂದು.

ದೇವಪ್ಪ ಮಾತನಾಡಲಿಲ್ಲ. ಅವನಿಗೆ ಸಂಜೀವನ ಮದುವೆಯ ನಂತರ ಅವನ ಮೇಲೆ ಅಸೂಯೆ ಹೆಚ್ಚಾಗಿತ್ತು. ಸಂಜೀವನ ಮಾವ ನಾರಾಯಣಸೆಟ್ಟರು ದೊಡ್ಡ ವರ್ಗದಾರ, ಪ್ರತಿಷ್ಠಾವಂತ ವ್ಯಕ್ತಿ. ದೇವಪ್ಪನ ಮಾವ ಬರೇ ಗೇಣಿ ಒಕ್ಕಲು. ಅವರು ದುಡಿದುದು ಅವರಿಗೆ ಉಣ್ಣಲಿಕ್ಕೆ—ತಿನ್ನಲಿಕ್ಕೆ ಕೂಡಾ ಸಾಕಾಗುತಿದ್ದಿಲ್ಲ. ವರುಷ ವರುಷ ಗೇಣಿ ಬಾಕಿಯಾಗದೆ ಇಲ್ಲ. ಎರಡು ಮೂರು ವರುಷಗಳಿಗೊಮ್ಮೆ ಒಂದೆಡೆಯಲ್ಲಿ ಗೇಣಿ ಬಾಕಿ ಮಾಡಿ ಮತ್ತೊಂದೆಡೆಗೆ ಹೋಗುವರು. ಮತ್ತೆ ರುಕುಮಿಯೂ ಅಷ್ಟೊಂದು ಚೆಲುವೆಯಲ್ಲ. ಅವಳನ್ನು ಎಲ್ಲೋ ಕೆಲವು ಕಡೆ ಮದುವೆಯ ಮುಂಚೆ ಸಂಧಿಸಿದ್ದನು. ಆಗಲೇ ಅವಳೊಡನೆ ಪ್ರಣಯ ವ್ಯವಹಾರ ಬೆಳೆಸಿದ. ಈ ಗುಟ್ಟು ಊರಲ್ಲೆಲ್ಲ ಪಸರಲು ತಾನು ಅವಳನ್ನೇ ಮದುವೆಯಾಗುವೆನೆಂದ. ಪೂವಕ್ಕ ಎಷ್ಟೋ ಅಡ್ಡಿ ಮಾಡಿದಳು. ಸಂಜೀವ ಎಷ್ಟೋ ಹೇಳಿದ. ಆದರೆ

ಒಂದೂ ನಡೆಯಲಿಲ್ಲ. ಈಗ ಪಾರ್ವತಿಯ ತುಂಬಿದ ದೇಹವನ್ನು ನೋಡು ವಾಗ ಅವನಿಗೂ ಪಾರ್ವತಿಯಂತಹ ಚೆಲುವೆಯನ್ನೇ ಮದುವೆಯಾಗಬೇಕಿತ್ತೆಂದು ತೋರುತಿತ್ತು. ತನ್ನ ದುಡುಕಿಗಾಗಿ ತುಂಬ ಪಶ್ಚಾತ್ತಾಪ ಪಡುತಿದ್ದ. ಅಲ್ಲದೆ ನಾರಾಯಣಸೆಟ್ಟರು ಅಗತ್ಯವಿದ್ದರೆ ಸಂಜೀವನಿಗೆ ಎಷ್ಟೋ ಸಹಾಯ ಮಾಡಬಹುದು. ದೇವಪ್ಪನ ಮಾವನಿಗೆ ದೇವಪ್ಪನೇ ತಾಯಿಗೆ ತಿಳಿಯದಂತೆ ಆಗಾಗ್ಗೆ ಹಣ ಕೊಡುತಿದ್ದ. ಅಷ್ಟಾದರೂ ಅವನ ಮಾವನಿಗೆ ಪೂರ್ಣ ಗೇಣಿ ಪಾವತಿ ಮಾಡಲಾಗುತ್ತಿರಲಿಲ್ಲ.

ಸಂಜೀವ ಕೋಣೆಯೊಳಗಿಂದ ಹೊರಗೆ ಬಂದು ತಾಯಿಯನ್ನುದ್ದೇಶಿಸಿ, "ನಾನೇ ಹೋಗುತ್ತೇನೆ. ನಿಮಗಿಬ್ಬರಿಗೆ ಸುಖ ಸಿಗಲಿ" ಎಂದ.

ಪೂವಕ್ಕಗೆ ಅಳು ಬಂತು. ಹಾಗೆಯೇ ಅವಳು ಒಳಗೆ ಹೋದಳು.

* * *

"ಎಂಥ ಮನೆಯಪ್ಪ ಅದು! ಮಗುವಿನ ಗುರುತು ಕೂಡಾ ನನಗೆ ಸಿಗಲಿಲ್ಲ!" ಹೀಗೆಂದು ನಾರಾಯಣಸೆಟ್ಟರು ರಾತ್ರೆ ಊಟವಾದ ಬಳಿಕ ವೀಳ್ಯ ಜಗಿಯುತ್ತ ಕೋಚಣ್ಣ ರೈಗಳೊಡನೆ ಹೇಳುತಿದ್ದರು. "ಸಂಜೀವ ನಂತೂ ಕೋಣನ ಹಾಗೆ ಬೆಳೆದಿದ್ದಾನೆ ಮಾತ್ರವಲ್ಲದೆ, ಅವನ ತಲೆಯಲ್ಲಿ ಒಂದಿಷ್ಟೂ ಮಿದುಳಿಲ್ಲ."

ಕೋಚಣ್ಣ ರೈಗಳಿಗೆ ಈ ಮಾತು ಹಿಡಿಸಲಿಲ್ಲ. ಅವರೇ ಮೊದಲು ಸಂಜೀವನನ್ನು ಬಾಯಿತುಂಬ ಹೊಗಳಿದವರು. "ಹುಡುಗ ಇಂಗ್ಲೀಷ್ ಕಲಿತಿದ್ದಾನೆ. ನೂರು ಮುಡಿ ಗೇಣಿ ಬರುವ ಆಸ್ತಿಯಿದೆ. ಇರುವುದೊಂದು ತಾಯಿ ಮತ್ತು ಅಣ್ಣ ಮಾತ್ರ. ಇಬ್ಬರೂ ಏನೂ ಪ್ರಯೋಜನವಿಲ್ಲದವರು. ಸಂಜೀವನಿಗೇ ಇನ್ನು ಆಡಳಿತ ಸಿಗುವುದು ತೀರ ಅನಿವಾರ್ಯ. ಹುಡುಗ ತುಂಬ ಯೋಗ್ಯ ಗುಣವಂತ............" ಇತ್ಯಾದಿ. ಈಗ ಏನನ್ನು ಉತ್ತರಿಸಲೂ ಅವರಿಗೆ ಮಾತು ಬರಲಿಲ್ಲ. ಆದರೂ ಅವರು ಈತನಕ ಮಾತಿಗಾಗಿ ಸೋತವರಲ್ಲ. ಅವರಿಗೆ ತಿಳಿಯಲಿ, ತಿಳಿಯದಿರಲಿ, ಮಾತಿಗೆ ಮಾತು ಹೇಳಿಯೇ ಬಿಡುವುದು ಅವರ ಸ್ವಭಾವಸಿದ್ಧ ಗುಣ.

"ಏನೋ ಆ ಪೂವು ಸ್ವಲ್ಪ ಅಧಿಕಾರ ನಡೆಸುತ್ತಿರಬೇಕು." ರೈಗಳು ಗಂಟಲು ಕೆರೆಯುತ್ತ ಮುಗುಳು ನಗುವಿನಲ್ಲಿ ಹೇಳಿದರು. ಆ ಗಂಟಲು ಕೆರೆತ ಯಾವಾಗಲೂ ರೈಗಳ ಸಂಶಯಾರ್ಥಕ ಚಿಹ್ನೆಯಾಗಿತ್ತು. "ಸ್ವಲ್ಪ ಕಾಲ ನೋಡುವ. ನಾರೀ ಭಾಗ್ಯಂ ಪುರುಷ ಪುಣ್ಯಂ ಸೆಟ್ಟರೆ."

"ಹೇಗಾದರೂ ಈ ರೀತಿಯಾದರೆ ಕಷ್ಟವೇ ಸೈ, ರೈಗಳೇ. ನೀವು ನಂಬಲಾರಿರಿ: ನಾನು ಹೋಗುವಾಗ ಪಾಪ ನನ್ನ ಮಗು ಗದ್ದೆಗೆ ಆ ನೀರ ಸುರಿಯುವ ಗೊಬ್ಬರವನ್ನು ಹೊತ್ತುಕೊಂಡು ಹೋಗುತಿತ್ತು. ನನಗೆ ಗುರುತೇ ಸಿಗಲಿಲ್ಲ! ಹರಕು ವಸ್ತ್ರ, ತಲೆಯಲ್ಲಿ 'ಮುಟ್ಟಾಳೆ'! ಛಿ! ಛಿ! ಇಂಥ ಅವಸ್ಥೆಯಲ್ಲಿ ನನ್ನ ಹಿರಿಯರು ಕೂಡಾ ಇರಲಿಲ್ಲ ನೀವು ಭಂಗಾರ ಸಿಗುವುದೆಂದು ಹೇಳಿದ್ದರೂ ಕೂಡ ನಾನು ಆ ಸಂಬಂಧಕೊಪ್ಪುತಿದ್ದಿಲ್ಲ. ಅವ ಳನ್ನೇ ನೋಡಿ! ಇಲ್ಲಿ ಹೇಗಿದ್ದಳು, ಈಗ ಹೇಗಾಗಿದ್ದಾಳೆ!"

ಸೆಟ್ಟರ ಮಾತನ್ನು ಕೇಳಿ ರೈಗಳು ಬೇರೆ ಕಡೆಗೆ ಮಾತನ್ನು ತಿರುಗಿಸಿ ದರು:

"ನೋಡಿ ಮಂಜಣ್ಣ ರೈಗಳದು ಬಹಳ ಹಿರಿಯ ಮನೆ. ಹ್ಞೇ. ಅವರ ಆಡಳಿತೆಯ ದಿನಗಳಲ್ಲಿ ಕಲೆಕ್ಟರ್ ಹೋದರೂ ಕೂಡಾ ಅಪ್ಪಣೆ ಪಡೆದೇ ಮನೆ ಹೊಕ್ಕಬೇಕಾಗಿತ್ತು. ನೀವೂ ಅವರ ಘನಸ್ತಿಕೆಯ ಕುರಿತಾಗಿ ಕೇಳಿರಬಹುದು. ಅಷ್ಟು ಪ್ರಸಿದ್ಧ ವ್ಯಕ್ತಿ ಅವರು! ಈ ಸಂಜೀವನನ್ನು ಸಾಲೆಗೆ ಹಾಕಿಸಿದ್ದೂ ನಾನೇ. ಆಗ ಮಂಗಳೂರಲ್ಲಿ ನಮ್ಮೂರ ಹುಡುಗರಾರೂ ಇರಲಿಲ್ಲ. ಮಾಷ್ಟ್ರು ಗಳೆಲ್ಲ ನನ್ನ ಪರಿಚಯದವರಾದ್ದರಿಂದ ಸಂಜೀವನನ್ನು ಸುಲಭವಾಗಿ ಸೇರಿಸಿ ಬಿಟ್ಟೆ. ಆಗ ನೋಡಿ ನಮ್ಮ ಕಂಕನಾಡಿಯ ಸಾಲು ಸಿಕೇರರು ಹೆಡ್ ಮಾಷ್ಟ್ರು. ಬಹಳ ಒಳ್ಳೆಯ ಜನ ನೋಡಿ. ನಾನು ಮಂಗಳೂರಿಗೆ ಹೋದರೆ ಯಾವಾಗಲೂ ಅಲ್ಲಿಗೇ ಹೋಗುತಿದ್ದೆ."

"ಸಾಲು ಸಿಕೇರರೆಂದರೆ ನಮ್ಮ ವಕೀಲ ಪೆರ್ನಾಂದೀಸರ ತಮ್ಮ ಅಲ್ಲವೆ?" ನಾರಾಯಣಸೆಟ್ಟರು ಕುತೂಹಲದಲ್ಲಿ ಕೇಳಿದರು. "ಅವರು ಇಲ್ಲಿಯ ಹೊಸಮನೆ ಕೆದ್ಲಾಯರ ಆಸ್ತಿ ಪಡಕೊಳ್ಳಲಿಕ್ಕೆಂದು ಬಂದವರು ಇಲ್ಲಿಗೂ ಬಂದಿದ್ದರು. ಹೌದು ಅವರು ಒಳ್ಳೆಯ ಜನ."

ರೈಗಳಿಗೆ ತಮ್ಮ ಉಪಾಯ ಸಾಧಿಸಿತೆಂದು ಸಂತೋಷವಾಯಿತು. ಸೆಟ್ಟರ ಮಾತಿನ ಸರಣಿಯೇ ಬದಲಿತು. ಮತ್ತೆ ಅವರು ಕಂಕನಾಡಿ, ಫಳ ಸೀರು, ಬಾವಟೆ ಗುಡ್ಡೆ, ಜಿಲ್ಲಾ ಜಡ್ಜರು, ಕ್ರಿಮಿನಲ್ ವಕೀಲರು, ಬ್ಯಾರಿಸ್ಟರ್ ಗ್ರಾಂಟ್ ದೊರೆ ಇತ್ಯಾದಿ ಅನೇಕ ವಿಷಯಗಳನ್ನು ಮಾತನಾಡಿದರು. ತನ್ಮಧ್ಯೆ ಸೆಟ್ಟರಿಗೆ ಮಗಳ ವಿಚಾರ ಮರೆತು ಹೋಯಿತು.

* * *

ಬಾಬು ಪಾರ್ವತಿಯೊಡನೆ ಪಡಸಾಲೆಯ ಜಗಲಿಯಲ್ಲಿ ಕುಳಿತುಕೊಂಡು ಮಾತನಾಡುತಿದ್ದ. ಸಂಕು ಆ ಒಳಗೇ ಮಲಗಿದ್ದಳು. ಲಿಂಗಮ್ಮ ಒಳಗೆ ಸೆಟ್ಟರಿಗೆ ಮತ್ತು ರೈಗಳಿಗೆ ಮಲಗುವಾಗ ಕುಡಿಯಲಿಕ್ಕೆಂದು ಶುಂಠಿಯಕಶಾಯ ತಯಾರಿಸುತಿದ್ದಳು.

" ಏನು ಹೆಣ್ಣೇ, ನಿನ್ನ ರೂಪವೇ ಬದಲಾಗಿದೆಯಲ್ಲ !" ಎಂದ ಬಾಬು.

ಪಾರ್ವತಿ ಕಣ್ಣೀರಿಟ್ಟಳು.

" ಏಕೆ ಕೂಗುತ್ತೀ ಅಮ್ಮ ? " ಎಂದು ಬಾಬು ಸ್ವಲ್ಪ ಹತ್ತಿರ ಹೋದ.

" ಅತ್ತೆ ಮನೆಯ ಸುಖ ಬಾಬಣ್ಣ " ಪಾರ್ವತಿ ಅಳುತ್ತ ಹೇಳಿದಳು.

" ಅದನ್ನೆಲ್ಲ ಮರೆತು ಬಿಡು " ಬಾಬು ಅವಳನ್ನು ಸಂತೈಸುವ ಧಾಟಿಯಲ್ಲಿ ಹೇಳಿದ.

" ನಿನ್ನಪ್ಪ ಇದ್ದಾರೆ, ಹೆದರಬೇಡ."

" ನಾನೇಕೆ ಹೆದರಬೇಕು ? ಅರ್ಧ ಮುಳುಗಿದವಳಿಗೆ ಇನ್ನು ಎಲ್ಲಿ ಚಳಿ ? " ಪಾರ್ವತಿ ಮೂಗಿನಿಂದ ಸುರಿಯುತಿದ್ದ ನೀರನ್ನು ಒರಸುತ್ತ ನುಡಿದಳು.

ಬಾಬುವಿಗೆ ತುಂಬ ಸಂತಾಪವಾಯಿತಲ್ಲದೆ ಸಹಾನುಭೂತಿಯೂ ಮೂಡಿತು. ಅವಳ ಅಸಹಾಯಕತೆ ಅವನ ಮುಂದೆ ಎದ್ದು ನಿಂತಿತು. ಗಂಡನ ಮನೆಯಲ್ಲಿ ಅವಳಿಗೆ ಸುಖ ಸಿಗಲಿಲ್ಲವೆಂಬುದು ಅವನಿಗೆ ಸ್ಪಷ್ಟವಾಯಿತು.

" ನೀನು ಬೇಸರ ಪಡಬೇಡಮ್ಮ " ಎನ್ನುವಾಗ ಅವನ ಕಣ್ಣುಗಳಲ್ಲಿ

ನೀರು ಬಂದಿತ್ತು. "ಅಂಥದ್ದೇನೂ ನಾನು ಜೀವಿಸಿರುವಾಗ ನಡೆಯದು. ಏನೆಲ್ಲ ಮಾಡುವರೆಂದು ನೋಡೋಣ."

ಪಾರ್ವತಿ ತಲೆಬಾಗಿಸಿ ನಿಂತಿದ್ದಳು. ಲಿಂಗಮ್ಮ ಹೊರಗೆ ಬರುವ ಸದ್ದು ಕೇಳಿ ಅವಳು ದೂರ ಸರಿದಳು. ಬಾಬು ಮತ್ತೆ ತಾನು ಮಲಗುವಲ್ಲಿಗೆ ಹೋಗಿ ಚಾಪೆ ಬಿಡಿಸಿ ಮಲಗಿಕೊಂಡ.

ಅವನು ಇಂದಿನಷ್ಟು ಸರಳವಾಗಿ, ನಿಸ್ಸಂಕೋಚವಾಗಿ, ಪಾರ್ವತಿಯೊಡನೆ ಎಂದೂ ಮಾತನಾಡಿರಲಿಲ್ಲ. ಅವಳನ್ನು ಕಂಡರೆ ಗಣ್ಯವಿಲ್ಲದೆ ಬೇರೆ ಕಡೆಗೆ ಮುಖ ತಿರುಗಿಸಿ ಹೋಗುವವ. ಇಂದು ಅವಳನ್ನು ಕಂಡು ತುಂಬ ವೇದನೆಯಾಯಿತು. ಅವನಿಗೆ ನಿದ್ದೆ ಹತ್ತಲಿಲ್ಲ. ಅತ್ತಿತ್ತ ಹೊರಳಾಡಿದ. ಎಷ್ಟು ಯೋಚಿಸಿದರೂ ಪಾರ್ವತಿಯ ಸ್ಥಿತಿಯೇ ಅವನ ಕಣ್ಣುಮುಂದೆ ನಿಲ್ಲುತಿತ್ತು.

## ಅಧ್ಯಾಯ ಏಳು.

ಪೂವಕ್ಕನ ಅಣ್ಣ ರಾಮಪ್ಪಸೆಟ್ಟರು ಮುಂಬಯಿಯಿಂದ ಊರಿಗೆ ಬಂದರು. ಅವರು ಊರಿಗೆ ಬಾರದೆ ನಾಲ್ಕೈದು ವರ್ಷಗಳಾಗಿದ್ದುವು. ಸಂಜೀವನ ಮದುವೆಗೆ ಬರಬೇಕೆಂದು ಕಾಗದ ಹೋಗಿದ್ದರೂ ಅವರು ಬಂದಿರಲಿಲ್ಲ. ಕೆಲಸ ವಿಪರೀತವಿದ್ದುದರಿಂದ ತನಗೆ ಬರಲಿಕ್ಕೆ ಸಾಧ್ಯವಿಲ್ಲದೆಂದು ಪೂವಕ್ಕಗೆ ಬರೆದು ಮದುಮಗನಿಗೆ ಹತ್ತು ರೂಪಾಯಿ, ಮದುಮಗಳಿಗೆ ಹತ್ತು ರೂಪಾಯಿ ಉಡುಗೊರೆಯಾಗಿ ಕಳಿಸಿದ್ದರು. ಅವರು ಬಾರದಿರಲು ಮುಖ್ಯ ಕಾರಣವೆಂದರೆ ಸಂಜೀವನಿಗೆ ಅವರ ಮಗಳನ್ನು ಕೊಡಬೇಕೆಂದಿದ್ದನ್ನು ಪೂವಕ್ಕ ಗಮನಿಸದಿದ್ದುದು ಒಂದೇ ಆಗಿತ್ತು.

ಅವರೊಮ್ಮೆ ಊರಿಗೆ ಬರುವುದೆಂದರೆ ಊರಿಗೆ ಊರೇ ಎದ್ದು ನಿಂತ ಹಾಗೆ. ಅಷ್ಟು ಅವರ ಆಡಂಬರ. ಅವರ ಕೋಟು ಕಚ್ಚೆಗಳೆಲ್ಲ ಊರಿಗೇ ಹೊಸದು. ಅದರೊಡನೆ ಒಮ್ಮೊಮ್ಮೆ ಇಜಾರು ಹಾಕುವುದೂ ಇತ್ತು. ಕಾಲಿಗೆ ಹೊಳೆಯುವ ಬೂಟ್ಸುಗಳು. ಜೊತೆಯಲ್ಲಿ ಆರೇಳು ದೊಡ್ಡ ಪೆಟ್ಟಿಗೆ

ಗಳು ಯಾವಾಗಲೂ ಇರುವುವು. ಅವುಗಳಲ್ಲೆಲ್ಲ ಊರಿನ ಸ್ನೇಹಿತರಿಗೆ ಕೊಡಬೇಕಾದ ಪಾರಿತೋಷಕಗಳು, ಪರಿಮಳದ ಸಾಬೂನುಗಳು, ಎಣ್ಣೆಯ ಕುಪ್ಪಿಗಳು, ವಸ್ತ್ರಗಳು—ಇವುಗಳ ಕುರಿತು ಕೇಳಬೇಕಾದ್ದಿಲ್ಲ. ನಾಲ್ಕೈದು ಟಿನ್ನು 'ಪಿಲಾತಿ' ಮಾರ್ಕಿನ ಸಿಗರೇಟುಗಳನ್ನು ಊರವರಿಗೆಲ್ಲ ಹಂಚಿಬಿಡು ವರು. ಮತ್ತೆ ಒಮ್ಮೆ ಶರಾಬಿನ ಅಂಗಡಿಯನ್ನು ಸೇರಿದರೆಂದರೆ ಅವರ ಸ್ನೇಹಿ ತರಿಗೆ ಕಡಿಮೆಯಿಲ್ಲ. ದಿನಕ್ಕೆ ಹತ್ತು-ಹದಿನೈದು ರೂಪಾಯಿಗಳು ಅಲ್ಲೇ ಖರ್ಚಾಗುತಿದ್ದುವು. ಅವರು ಊರಲ್ಲಿ ಉಳಿಯುವ ಅವಧಿ ಸುಮಾರು ಒಂದು ತಿಂಗಳಷ್ಟು. ಆಮೇಲೆ ಹಿಂದೆ ಹೋಗಲಿಕ್ಕೆ ಮುಂಬಯಿಯಿಂದ ಹಣ ತರಿಸಬೇಕಷ್ಟೆ. ಅಷ್ಟರಲ್ಲಿ ಊರವರಿಂದಲೂ ನೂರಾರು ರೂಪಾಯಿ ಸಾಲ ಪಡೆದಾಗುತಿತ್ತು.

ರಾಮಪ್ಪಸೆಟ್ಟರ ಹಿಂದೆ ಜನ ನೆರೆಯುವುದು ಅವರು ಮಾಡುತಿದ್ದ ಶರಾಬು-ಸಿಗರೇಟುಗಳ ಉಪಚಾರಕ್ಕಾಗಿ ಮಾತ್ರ ಅಲ್ಲ. ರಾಮಪ್ಪಸೆಟ್ಟರ ಮಾತುಕತೆಯೂ ಅಷ್ಟೇ ರುಚಿಕರವಾಗಿತ್ತು. ಎರಡು ಡ್ರಾಮು ಶರಾಬು ಸೇವಿಸಿ ಕೂತು ಮಾತನಾಡತೊಡಗಿದರೆಂದರೆ ಸಮಯ ಹೋಗುವುದು ಅವ ರಿಗಾಗಲೀ ಕೇಳುವವರಿಗಾಗಲೀ ತಿಳಿಯದು. ಯಾವ ಸುದ್ದಿ ಬೇಕಾದರೂ ಅವರ ಹತ್ತಿರ ಇದೆ. ಯಾವ ಯಾವ ಸಿನೆಮಗಳ ಸುದ್ದಿಗಳು! ಕುದುರೆ ಜೂಜಿನ ವರ್ಣನೆಯೇನು! ಮತ್ತೆ ಮುಂಬಯಿಯ ಹಾಲು ಮಾರುವ 'ಭಯ್ಯಾ'ರ ಪರಿಸ್ಥಿತಿ, ಮವಾಲಿಗಳ ಜೀವನ, ಮಾಳಿಗೆಯ ಮೋಟಾರು ಗಳ ವಿಚಿತ್ರ ಕತೆ—ಇವನ್ನೆಲ್ಲ ಸೆಟ್ಟರು ಹೇಳತೊಡಗಿದರೆಂದರೆ ಮತ್ತೆ ಅವರ ವಾಕ್ಪ್ರವಾಹಕ್ಕೆ ನಿಲ್ದಾಣವಿಲ್ಲ. ಸೇಠ್‌ಗಳು ಮಾಡುವ ಮೋಸ, ಅವರಿಗೆ ಸೆಟ್ಟರು ಮಾಡಿದ ಮೋಸ, ಸೇಠ್‌ಗಳ ಹೆಂಗಸರೊಡನೆ ಅವರಿಗಿದ್ದ ಗುಪ್ತ ಸಂಬಂಧದ ಕತೆಗಳು, ಅವರು ಸ್ವತಃ ಕಳ್ಳರನ್ನು ಹಿಡಿದ ಕತೆಗಳು, ಎಲ್ಲ ಒಮ್ಮೆ ಕೇಳಿದವರಿಗೆ ಮತ್ತೆ ಮರೆಯುವಂತಿಲ್ಲ.

ರಾಮಪ್ಪಸೆಟ್ಟರ ಹೆಸರು ರಾಮನೆಂದು. ಪೂವಕ್ಕೆಯೂ ಅವರೂ ಚಿಕ್ಕಂದಿನಲ್ಲಿ ಒಟ್ಟಿಗಿದ್ದವರು. ಅವರು ಸಾಲೆಗೆ ಹೋಗಿರಲೇ ಇಲ್ಲ. ಚಿಕ್ಕಂದಿ ನಲ್ಲಿ ಬೇಸಾಯದ ಕಸಬಿನಿಂದಲೇ ಅವರ ಜೀವನ. ಅವರ ಆಸ್ತಿಯೆಲ್ಲ ಪೂವಕ್ಕೆಯ ಮಾವನ ಕಾಲದಲ್ಲಿ ಮಾರಿಹೋಗಿತ್ತು. ಆ ಮಾವನಿರುವಾಗಲೇ

ಪೂವಕ್ಕೆಗೆ ಮಂಜಣ್ಣರೈಗಳೊಡನೆ ವಿವಾಹವಾದುದು. ಮಂಜಣ್ಣರೈಗಳಿಗೆ ಯಾರೂ ಕುಟುಂಬವಿಲ್ಲದ್ದರಿಂದ ಅವರು ಸತ್ತಮೇಲೆ ಅವರ ಆಸ್ತಿ ಪೂವಕ್ಕ ಮತ್ತು ಅವಳ ಮಕ್ಕಳಿಗೆ ಸಿಕ್ಕಿತು. ರಾಮಪ್ಪಸೆಟ್ಟರು ಆ ಮುಂಚೆಯೇ ಯಾರೊಡನೆಯೂ ಹೇಳದೆ ಮುಂಬಯಿಗೆ ಓಡಿಹೋಗಿದ್ದರು.

ಆ ಸಮಯದಲ್ಲಿ ಮುಂಬಯಿಯಲ್ಲಿ ಕೆಲಸಕ್ಕೆ ಕಡಿಮೆ ಇಲ್ಲ ಎಂಬ ವದಂತಿ ಊರಲ್ಲೆಲ್ಲ ಹಬ್ಬಿತ್ತು. ಮೊದಲು ದೂಜ ಕ್ರಾಸ್ತರ ಮಗ ಅಂತೋನಿ ಮುಂಬಯಿಗೆ ಹೋದವ. ಅವನು ಅಲ್ಲಿ ಯಾರೋ ಪಾರಸಿಗಳಲ್ಲಿ ಅಡುಗೆಗೆ ಕೆಲ ಸಮಯ ನಿಂತಿದ್ದನಂತೆ. ಆಮೇಲೆ ಅವನೇ ಒಂದು ಹೋಟೇಲಿಟ್ಟ ನಂತೆ. ಅವನ ಪ್ರಖ್ಯಾತಿ ಊರಿನಲ್ಲಿ ಬೆಳೆಯುವಾಗ ರಾಮಪ್ಪಸೆಟ್ಟರಿಗೂ ಬಾಯಿಯಲ್ಲಿ ನೀರು ಸುರಿಯತೊಡಗಿತು. ಅಂತೋನಿಯೊಡನೆ ಎಲ್ಲ ಮೊದಲೇ ಮಾತು ಕತೆ ನಡೆಸಿ, ಮೆಲ್ಲಗೆ ಮನೆಯಿಂದ ಹತ್ತು ರೂಪಾಯಿ ಕದ್ದು ರಾತಾರಾತ್ರೆ ಪರಾರಿಯಾದರು.

ಮುಂಬಯಿಯಲ್ಲಿಳಿಯುವಾಗ ಅವರೊಡನೆ ಉಳಿದುದು ಬರೀ ಒಂದಾಣೆ. ಅಲ್ಲಿಂದ ಹೇಗೋ ಮಾಡಿ ಪಾರ್ಸಿ ಬಜಾರಿನ ಒಂದು ಗಲ್ಲಿಯ ಲ್ಲಿದ್ದ ಅಂತೋನಿಯ ಹೋಟೇಲನ್ನು ಸೇರಿದರು. ಅಲ್ಲಿ ಎರಡು ಮೂರು ತಿಂಗಳು ಗ್ಲಾಸು ತೊಳೆಯುವ ಕೆಲಸ ಮುಗಿದ ಮೇಲೆ ಅಂತೋನಿ ಅವರಿಗೆ ತಿಂಡಿ ತಂದು ಕೊಡುವ ಕೆಲಸ ಕೊಟ್ಟ. ಸಂಬಳ ಊಟ ಕೊಟ್ಟು ತಿಂಗಳಿಗೆ ಹತ್ತು ರೂಪಾಯಿ. ಸೆಟ್ಟರಿಗೆ ಬೇರೇನೂ ಖರ್ಚಿರಲಿಲ್ಲ. ಮತ್ತೆ ಕೆಲವು ಸಮಯ ಕಳೆದ ಮೇಲೆ ಅಂತೋನಿ ಮಾತುಂಗದಲ್ಲೊಂದು ಹೋಟೇಲನ್ನು ವಹಿಸಿಕೊಂಡು ರಾಮಪ್ಪಸೆಟ್ಟರನ್ನು ವ್ಯವಸ್ಥಾಪಕರನ್ನಾಗಿ ಮಾಡಿದ. ರಾಮಪ್ಪ ಸೆಟ್ಟರ ಮುಖದಲ್ಲಿ ಆಗ ಗಡ್ಡ ಮೀಸೆ ಕಪ್ಪಾಗುತ್ತ ಬರುತಿತ್ತು. ಹಣ ಕೈ ಯಲ್ಲಿ ತಿರುಗತೊಡಗಿತು. ಬರೀ ಆರು ತಿಂಗಳಲ್ಲೇ ಅಂತೋನಿ ಮಾತುಂಗದ ಶಾಖೆಯನ್ನು ಬಿಟ್ಟುಬಿಡಬೇಕಾಯಿತು.

ರಾಮಪ್ಪಸೆಟ್ಟರಿಗೆ ಅಷ್ಟರಲ್ಲೇ ಅನೇಕರ ಪರಿಚಯವಾಗಿತ್ತು. ಅಂಗಡಿ ಗಳ ಸೇಠ್‌ಗಳು ಅವರಿಗೆ ಎಷ್ಟು ಸಾಲ ಕೊಡಲೂ ಸಿದ್ಧರಾಗಿದ್ದರು. ಸರಿ. ಸೆಟ್ಟರು ಅಂತೋನಿಯ ಕೆಲಸವನ್ನು ಬಿಟ್ಟು ತಾನೇ ಸ್ವತಃ ಮಾತುಂಗದ ಹೋಟೇಲನ್ನು ನಡೆಸತೊಡಗಿದರು. ವ್ಯಾಪಾರ ಬಲವಾದಂತೆಯೇ

ಹೋಟೇಲು ಪ್ರಗತಿಯನ್ನು ಹೊಂದಿತು. ಹೋಟೇಲಿನ ಗೋಡೆಗಳಿಗೆ ಕನ್ನಡಿಗಳನ್ನು ಬಿಗಿಸಿದರು. ತಿಂಡಿಯಿಡಲು ದೊಡ್ಡ ಕಪಾಟುಗಳನ್ನು ಮಾಡಿಸಿದರು. ಹೋಟೇಲಿಗೆ ಬಣ್ಣ ಬಳಿಸಿ ದೊಡ್ಡ ದೊಡ್ಡ ರವಿವರ್ಮನ ಚಿತ್ರಗಳನ್ನು ಜೋಡಿಸಿದರು. ಇಷ್ಟಾಗುವಾಗ ಸೆಟ್ಟರ 'ರಾಮವಿಲಾಸ ಕಾಫಿ ಕ್ಲಬ್' ಮಾತುಂಗದ ಹೋಟೇಲುಗಳಲ್ಲಿ ಅಗ್ರಗಣ್ಯವೆಂದೆನಿಸಿಕೊಂಡಿತು. ಕೆಲವು ಹಳೆಯ ಇರಾನಿ ಹೋಟೇಲುಗಳು ಕೂಡಾ ಸೆಟ್ಟರ ಹೋಟೇಲಿನ ಸಾಲಿಗೆ ನಿಲ್ಲಲು ಅಸಮರ್ಥವಾದುವು.

ಎರಡು ಮೂರು ವರ್ಷಗಳಲ್ಲಿ ಸೆಟ್ಟರ ಹೆಸರು ಮೆರೆಯತೊಡಗಿತು. ಅವರನ್ನು ಮುಂಬಯಿಯ ಜನರು 'ಸೇಠ್' ಎಂದು ಸಂಬೋಧಿಸತೊಡಗಿದರು. ಮತ್ತೇನು, ಸೆಟ್ಟರು ಮುಂಬಯಿಗೆ ಹೋದ ಐದನೇ ವರ್ಷದಲ್ಲಿ ನಾಲ್ಕು ಹೋಟೇಲುಗಳ ಒಡೆಯರಾದರು. ಒಂದು ಕೊಲಾಬಾದಲ್ಲಿ, ಇನ್ನೊಂದು ದಾದರ್‌ನಲ್ಲಿ, ಮೂರನೆಯದು ಬೋರಿಬಂದರಿನಲ್ಲಿ. ಎಲ್ಲವೂ ದೊಡ್ಡ ದೊಡ್ಡ ಹೋಟೇಲುಗಳು. ದಿನ ಒಂದಕ್ಕೆ ಒಂದೊಂದರಲ್ಲಿ ಆರ್‍ನೂರು ಏಳ್ನೂರು ರೂಪಾಯಿಗಳ ವ್ಯಾಪಾರವಾಗುತಿತ್ತು. ಆಗಿನ ಹೋಟೇಲು ವ್ಯಾಪಾರ ಒಳ್ಳೇ ಲಾಭದಾಯಕವಾಗಿತ್ತು. ಒಂದು ರೂಪಾಯಿಯ ವ್ಯಾಪಾರದಲ್ಲಿ ಕಡಿಮೆಯೆಂದರೆ ಎಂಟಾಣೆ ಲಾಭ ದೊರೆಯುತಿತ್ತು. ರಾಮಸೆಟ್ಟಿ ಎಂದಿದ್ದ ಅವರ ಹೆಸರು ಈಗ ಆರ್. ಎಸ್. ಬಾಜೀವಾಲಾ ಎಂದಾಯಿತು.

ಅವರು ಮುಂಬಯಿಯಿಂದ ಮೊದಲು ಬಂದ ವೇಳೆ ಅವರ ಗುರುತು ಹಿಡಿಯಲು ಯಾರಿಂದಲೂ ಸಾಧ್ಯವಾಗಲಿಲ್ಲ. ಹಿಂದೆ ಅವರು ಬರೇ ಲಂಗೋಟಿ ಮಾತ್ರ ಕಟ್ಟಿಕೊಂಡು ತಿರುಗಾಡುತಿದ್ದವರು ಈಗ ಜರತಾರೀವಸ್ತ್ರಗಳನ್ನುಟ್ಟುಕೊಂಡಿದ್ದರು. ಕಾಲಿಗೆ ಹೊಳೆಯುವ ಬೂಟ್ಸುಗಳು. ಬಂದವರು ಪೂವಕ್ಕೆಯ ಮನೆಯಲ್ಲೇ ಉಳಕೊಂಡರು. ಅವರಿಗೆ ಆಗ ಸುಮಾರು ಇಪ್ಪತ್ತೈದು ವರ್ಷ ಪ್ರಾಯ. ನೆರೆಮನೆಯ ಧನಿಕರೆಲ್ಲ ತಾವು ಹೆಣ್ಣು ಕೊಡುತ್ತೇವೆ, ತಾವು ಹೆಣ್ಣು ಕೊಡುತ್ತೇವೆಂದು ಮುಂದೆ ಬಂದರು. ಕೊನೆಗೆ ಅವರ ದೂರದ ಸಂಬಂಧಿಕಳಾಗಿದ್ದ ಸೋಮಕ್ಕ ಎಂಬವಳ ಮಗಳನ್ನು ಮದುವೆಯಾದರು. ವಿವಾಹ ಸಮಾರಂಭ ಬಹಳ ವಿಜೃಂಭಣೆಯಲ್ಲಿ ಜರುಗಿತು. ಮದುವೆಯಾದ ಕೆಲವು ದಿನಗಳಲ್ಲೇ ರಾಮಪ್ಪಸೆಟ್ಟರು ಹೆಂಡತಿಯನ್ನೂ, ಅವರ ಅತ್ತೆ

ಯನ್ನೂ ಮತ್ತೆ ಹೆಂಡತಿಯ ಇಬ್ಬರು ತಂಗಿಯರನ್ನೂ ಕರೆದುಕೊಂಡು ಮುಂಬಯಿಗೆ ತೆರಳಿದರು.

ಸೆಟ್ಟರು ಮುಂಬಯಿಯಲ್ಲಿದ್ದ ಆರೇಳು ವರ್ಷ ಕಾಲದಲ್ಲಿ ಶುದ್ಧ ಬ್ರಹ್ಮಚಾರಿಯಾಗಿಯೇ ಉಳಿದಿದ್ದರೆಂದು ಯಾರೂ ಭಾವಿಸಲಾಗದು. ಖೇತ್ವಾಡಿ ಗಲ್ಲಿಯಲ್ಲಿ ಅವರಿಗೊಬ್ಬ ಮೀನಾಕ್ಷಿ ಎಂಬವಳ ಸ್ನೇಹ ಹಲವು ವರ್ಷಗಳ ಹಿಂದೆಯೇ ಬೆಳೆದಿತ್ತು. ಮೀನಾಕ್ಷಿಯೂ ದಕ್ಷಿಣ ಕನ್ನಡದವಳೇ. ಮಂಗಳೂರಿನ ಸಮೀಪದಲ್ಲೇ ಅವಳ ಮನೆಯಂತೆ. ಮನೆಯಲ್ಲಿ ಅವಳನ್ನು ಕರೆಯುತಿದ್ದುದು ಗುರ್ಬಿಯೆಂದು. ಅವಳು ಮನೆಯನ್ನು ಮೊದಲುಬಿಟ್ಟದ್ದು ಹಾಮದ್ ಸ್ಯಾಬನೊಡನೆ ಹಾಮದ್ ಸ್ಯಾಬನಿಗೆ ಮುಂಬಯಿಯಲ್ಲಿ ಲಾರಿ ನಡೆಸುವ ಕೆಲಸವಿತ್ತು. ಅವಳನ್ನು ಅವನು ಕರೆದುಕೊಂಡು ಹೋಗಿ ಸುಮಾರು ಒಂದು ವರುಷ ಕಳೆದ. ಆಮೇಲೆ ಅವಳಿಗೆ ತಿಮ್ಮಪ್ಪ ಸಾಲಿಯಾನ್‌ನಲ್ಲಿ ಆಶ್ರಯ ಸಿಕ್ಕಿತು. ತಿಮ್ಮಪ್ಪ ಸಾಲಿಯಾನ್‌ನಿಗೆ ಒಂದು ದರೋಡೆಯ ಫಿರ್ಯಾದಿನಲ್ಲಿ ಆರು ವರುಷ ಸಜೆಯಾಯಿತು. ಕೆಲವು ದಿನ ಗುರ್ಬಿಗೆ ತನ್ನ ಭವಿತವ್ಯದ ಕುರಿತು ದಾರಿ ಕಾಣದಾಯಿತು. ಅಷ್ಟರಲ್ಲಿ ಒಬ್ಬ ಚಿನ್ನದ ವ್ಯಾಪಾರದ ಸೇಠ್ ಗಂಟುಬಿದ್ದ. ಅವನು ಅವಳಿಗೆ ಖೇತ್ವಾಡಿಯಲ್ಲಿ ಒಂದು ಕೋಣೆಯನ್ನು ತೆಗೆಸಿಕೊಟ್ಟ. ಆಬಳಿಕ ಅವಳ ಹೆಸರು ಮೀನಾಕ್ಷಿಯೆಂದಾಯಿತು. ಸೇಠ್‌ನ ಹಣದ ಬಲದಿಂದ ಇನ್ನೂ ಕೆಲವು ಹೆಣ್ಣುಗಳನ್ನು ಸಂಬಳಕ್ಕೆ ನಿಯಮಿಸಿಕೊಂಡಳು ನಾಲ್ಕು ದೊಡ್ಡ ಕೊಠಡಿಗಳನ್ನು ಬಾಡಿಗೆಗೆ ಪಡೆದಳು. ಆಮೇಲೆ ಕಿಟಕಿಯಲ್ಲಿ ಕೆಂಪು ಬಣ್ಣದ ದೀಪಗಳನ್ನು ಹಚ್ಚಿಸಿದಳು.

ಅವಳ ವಹಿವಾಟು ಏನಾದರೂ ಚಿಕ್ಕದಲ್ಲ. ದಿನಕ್ಕೆ ನೂರಾರು ರೂಪಾಯಿಗಳು ಕೈಯಲ್ಲಿ ಚಲಾವಣೆಯಾಗುತಿದ್ದುವು. ಅವಳು ಮೇಲಿಂದ ಮೇಲೆ ಸೇಠ್‌ನನ್ನು ಪ್ರೀತಿಸುವಂತೆ ನಟಿಸುತಿದ್ದರೂ ಅವಳ ಶೀಲದ ಕುರಿತು ಅವನಿಗೆ ಆಶ್ವಾಸನೆ ಕೊಟ್ಟಿದ್ದರೂ, ಅವಳು ಸ್ವತಃ ದಿನಕ್ಕೆ ಐವತ್ತು-ಎಪ್ಪತ್ತೈದು ರೂಪಾಯಿಗಳಷ್ಟು ಸಂಪಾದಿಸುತಿದ್ದಳು. ಅಂಥ ಆಕರ್ಷಣೆ ಅವಳದು. ಅವಳನ್ನೊಮ್ಮೆ ಕಂಡವ ಮತ್ತೆಂದೂ ಅವಳನ್ನು ಅಪೇಕ್ಷಿಸದಿರಲಾರ. ಆ ಅಪೇಕ್ಷೆ ಗಿರಾಕಿಗಳಿಗೆ ಹೆಚ್ಚಿದಂತೆ ಅವಳ ವರಮಾನವೂ ಹೆಚ್ಚುತಿತ್ತು. ಕೆಳಗೆ

ಮಾರ್ಗದ ಎದುರಿನ ಕೋಣೆಯನ್ನು ತುಂಬ ಆಕರ್ಷಣೀಯವಾಗಿ ಸಿಂಗರಿಸುತಿದ್ದಳು. ಅಲ್ಲಿ ಇಪ್ಪತ್ತು ವರ್ಷ ಮಿಕ್ಕಿದ ಹೆಂಗಸರನ್ನು ಅವಳು ಎಂದೂ ಇರಗೊಡಿಸುತಿದ್ದಿಲ್ಲ.

ಸೆಟ್ಟರು ಮಾತುಂಗಕ್ಕೆ ಬಂದಮೇಲೆ ಗಲ್ಲಿಗಳ ಕಡೆಗೆ. ದೃಷ್ಟಿ ಬೀರಿದರು. ಹಗಲಿಡೀ ದುಡಿದ ದಣಿವಿಗೆ ಹೆಂಗಸಳೊಬ್ಬಳ ಒಡನಾಟವೇ ಪರಿಹಾರವೆಂಬುದನ್ನು ಅವರು ಮನಗಂಡರು. ಮೊದಮೊದಲು ಸ್ವಲ್ಪ ವೇಷ ಬದಲಾಯಿಸಿದಂತೆ ಮಾಡಿ ಕೆಲವು ಗಲ್ಲಿಗಳನ್ನು ರಾತ್ರಿ ಸುತ್ತತೊಡಗಿದರು. ಆಮೇಲೆ ಅವರ ಸಂಕೋಚ ದೂರವಾಗುತ್ತ ಬಂತು. ಕೆಲವು ವೇಳೆ ಒಂದೇ ರಾತ್ರಿಯಲ್ಲಿ ಐವತ್ತು ಇಲ್ಲವೆ ನೂರು ರೂಪಾಯಿಗಳನ್ನು ಕೂಡ ಖರ್ಚು ಮಾಡಿದ್ದಿತ್ತು. ಹೀಗಿರುವಾಗ ಒಂದು ದಿನ ಮೀನಾಕ್ಷಿಯನ್ನು ಖೇತ್ವಾಡಿಯಲ್ಲಿ ಕಂಡರು. ಅವಳು ತಮ್ಮೂರವಳೆಂದು ಅವರಿಗೆ ಗುರುತು ಸಿಗಲಿಲ್ಲ. ಅವಳು ಕಾಲಿಗೆ ಪೈಜಾಮ ಹಾಕಿ, ಮೇಲೆ ಕುಪ್ಪಸ ತೊಟ್ಟಿದ್ದಳು. ಕಣ್ಣಿಗೆ ಕಾಡಿಗೆಯಿತ್ತು. ಕಾಲಿಗೆ ತೆಳುವಾದ ಮೆಟ್ಟುಗಳನ್ನು ಸಿಕ್ಕಿಸಿಕೊಂಡಿದ್ದಳು. ಮುಖವಂತೂ ಸುಣ್ಣ ಸಾರಿಸಿದ ಗೋಡೆಯಂತಾಗಿತ್ತು. ಸೆಟ್ಟರನ್ನು ಅವಳೇ ಇದಿರ್ಗೊಂಡಳು. ಒಳಗೆ ಕೊಂಡು ಹೋಗಿ ಬೇರೆ ಬೇರೆ ಹುಡುಗಿಯರನ್ನು ತೋರಿಸಿದಳು. ಅವಳು ಹಿಂದಿಯಲ್ಲೇ ಮಾತನಾಡುತಿದ್ದಳು. ಅವರೂ ಹಿಂದಿಯಲ್ಲೇ ಉತ್ತರ ಕೊಡುತಿದ್ದರು. ಕೊನೆಗೆ ಅವಳೇ ತನಗೆ ಬೇಕೆಂದರು. ಅವಳು ಅವರನ್ನು ಹೆದರಿಸಲಿಕ್ಕಾಗಿ ನೂರು ರೂಪಾಯಿಯೆಂದಳು. ಸೆಟ್ಟರು ಸೈಗುಟ್ಟಿದರು.

ಅವಳ ಸ್ವಂತ ಕೋಣೆ ಬಹಳ ಚೊಕ್ಕವಾದ ಕೋಣೆ. ಅಲ್ಲಿ ಬರೇ ಕೆಲವರಿಗೆ ಮಾತ್ರ ಪ್ರವೇಶ. ಅಂಥವರಲ್ಲಿ ಸೇಠನೂ ಒಬ್ಬ. ಆದರೆ ಅವನು ಬಂದರೆ ಅರ್ಧ ಗಂಟೆ ಉಳಕೊಳ್ಳುತಿದ್ದ. ಆಮೇಲೆ ಮೀನಾಕ್ಷಿಗೆ ಸ್ವಾತಂತ್ರ್ಯವೇ. ರಾಮಪ್ಪಸೆಟ್ಟರು ಅವಳೊಡನೆ ಊರಾವುದೆಂದು, ಏನೂ ಮಾತನಾಡಲು ವಿಷಯವಿಲ್ಲದ್ದಕ್ಕೆ, ಕೇಳಿದರು. ಒಮ್ಮೆಯೇ ಅವಳು ಪಂಜಾಬ್ ಎಂದಳು. ಸೆಟ್ಟರು ಈತನಕ ಪಂಜಾಬ್ ಹುಡುಗಿಯೊಡನೆ ವ್ಯವಹರಿಸಿದ್ದಿಲ್ಲ. ಆದರೆ ಪಂಜಾಬೀಯರು ಒಳ್ಳೇ ಗಟ್ಟಿಮುಟ್ಟಾದವರೆಂದೂ, ಸತ್ತ್ವಶಾಲಿಗಳೆಂದೂ ತಿಳಿದಿದ್ದರು. ಇಂಥ ಕುಲಕ್ಕೆ ಸೇರಿದ ಹೆಣ್ಣಿನೊಡನೆ ಬೆರೆಯುವು

ದೆಂದರೆ ಏಳನೆಯ ಸ್ವರ್ಗವೆಂದೇ ಅವರು ಕಲ್ಪಿಸಿದ್ದರು. ಪಂಜಾಬೀ ಹುಡುಗಿಯರ ನೀಳವಾದ ಜಡೆ, ಶುಭ್ರವಾದ ಮುಖ, ತಿವಿಯುವ ಕಣ್ಣುಗಳು, ಸುಂದರವಾದ ಮೈಕಟ್ಟುಗಳನ್ನು ಕಂಡು ಅಂಥವಳೊಬ್ಬಳನ್ನು ಮದುವೆಯಾಗಬೇಕೆಂದೂ ಕೆಲವೊಮ್ಮೆ ಆಶಿಸಿದ್ದರು. ಮತ್ತೆ ಮೀನಾಕ್ಷಿಯ ಹಾವಭಾವಗಳನ್ನು ಕಂಡು, ಅವಳಿತ್ತ ಸುಖವನ್ನನುಭವಿಸಿಯಂತೂ ಅರೆಹುಚ್ಚರಂತಾಗಿ ಹೋದರು. ಅಂದಿನಿಂದ ಕಡಿಮೆಯೆಂದರೆ ಹದಿನೈದು ದಿನಗಳಿಗೊಮ್ಮೆಯಾದರೂ ಸೆಟ್ಟರು ಮೀನಾಕ್ಷಿಯನ್ನು ಸಂದರ್ಶಿಸದಿಲ್ಲ. ಆದರೆ ಪ್ರತಿಸಲವೂ ಅವಳು ನೂರು ರೂಪಾಯಿಗಳಿಗಿಂತ ಹೆಚ್ಚಾಗಿಯೇ ಪ್ರತಿಫಲ ಸ್ವೀಕರಿಸದೆ ಬಿಡುತಿದ್ದಿಲ್ಲ.

ಕೆಲವು ಸಮಯದ ಬಳಿಕ ಒಮ್ಮೆ ಮೀನಾಕ್ಷಿ ಸೆಟ್ಟರ ಊರಾವುದೆಂದು ಕೇಳಿದಳು. ಅವರು ಮಂಗಳೂರೆಂದರು. ಮೀನಾಕ್ಷಿಗಾದ ಸಂತೋಷಕ್ಕೆ ಪಾರವೇ ಇಲ್ಲ. ಮರುಗಳಿಗೆಯಲ್ಲೇ ಅವಳು ಸೆಟ್ಟರೊಡನೆ ತುಳುಭಾಷೆಯಲ್ಲಿ ಮಾತನಾಡಿದಳು. ಸೆಟ್ಟರಿಗೂ ತುಂಬ ಆನಂದವಾಯಿತು. ಅನಂತರ ಸೆಟ್ಟರ ಸ್ಥಿತಿಗತಿಗಳನ್ನು ತಿಳಿದುಕೊಂಡು ಅವರು ಪ್ರತಿದಿನವೂ ಬಂದುಹೋಗಬೇಕೆಂದು ಕಟ್ಟಾಜ್ಞೆಯಿತ್ತಳು. ಅಂದಿನಿಂದ ಸೆಟ್ಟರಿಗೆ ಅವಳಿಗಾಗಿ ಕೊಡುತಿದ್ದ ಹಣದ ಭಾರ ತಪ್ಪಿತು. ಬದಲಾಗಿ ಅವರಿಗೇನಾದರೂ ಅಗತ್ಯಬಿದ್ದರೆ ಅವಳೇ ಕೈಕಡ ಕೊಡುತಿದ್ದಳು.

ಮೀನಾಕ್ಷಿಗೆ, ಸೆಟ್ಟರು ತನ್ನ ಊರವರೆಂದು ಮಾತ್ರ ಅಭಿಮಾನವಲ್ಲ. ಅವರ ತಾರುಣ್ಯದಲ್ಲಿ ನಲಿಯುತಿದ್ದ ದೇಹದ ಓಜಸ್ಸೂ ಅವಳನ್ನು ಮರುಳು ಮಾಡಿತ್ತು. ಅವರದು ಧೃಡಕಾಯ, ಎಣ್ಣೆಕಪ್ಪಿನ ಸುಂದರ ಮುಖ. ಅವರ ಬಿರುಸಾದ ತುಟಿಯಂಚಿನ ಮೀಸೆ, ತುಂಬಿದ ದವಡೆಗಳು, ಅಲೆಯಲೆಯಾಗಿ ಬಾಚಿದ ತಲೆಗೂದಲುಗಳು, ಅಗಲವಾದ ಹಣೆ—ಇವುಗಳೆಲ್ಲ ಮೀನಾಕ್ಷಿಗೆ ಪ್ರತಿದಿನವೂ ಸಿಗುವಂಥವುಗಳಲ್ಲ. ಸೆಟ್ಟರ ಅನ್ಯೋನ್ಯತೆಯು ಅವರ ವಿಶಿಷ್ಟ ದೇಹಾಕೃತಿಯ ಮೇಲೆ ಅವಳ ಮನಸನ್ನು ನೆಡಿಸಿತು. ಅವರ ಬಲಸಿಕ್ಕಿದೊಡನೆಯೇ ಸೇಠ್‌ನನ್ನು ಏನೋ ನೆವನ ಹೇಳಿ ಇತರ ಹುಡುಗಿಯರಲ್ಲಿಗೆ ಅಟ್ಟಿದಳು. ಅವಳನ್ನಪೇಕ್ಷಿಸುವ ಗಿರಾಕಿಗಳು ಭಂಗಾರವನ್ನೇ ಕೊಟ್ಟರೂ ಮುಟ್ಟಲಾರಳಾದಳು.

ಈಗ ಸೆಟ್ಟರು ಮದುವೆಯಾಗಿ ಬಂದ ಬಳಿಕವೂ ಅವಳನ್ನು ದೂರ ಮಾಡಲಿಲ್ಲ. ಒಂದು ದಿನ ಅವಳನ್ನೇ ಅವರ ಮನೆಗೆ ಕರೆದು ತಂದರು. ಅವಳಿಗೆ ಎಲ್ಲರ ಪರಿಚಯ ಮಾಡಿಸಿದರು. ಸೋಮಕ್ಕ ನಡುಹರೆಯ ದಾಟಿ ದವಳು; ಸೆಟ್ಟರ ಹೆಂಡತಿ ಸುಮಾರು ಇಪ್ಪತ್ತು ವರ್ಷದವಳು; ಅವಳ ಇಬ್ಬರು ತಂಗಿಯಂದಿರು ಹದಿನೈದು ವರ್ಷಕ್ಕಿಂತ ಮೇಲಿನವರು. ಸೆಟ್ಟರು ಬಂದು ಒಂದು ತಿಂಗಳಾಗುವಷ್ಟರಲ್ಲೇ ಹೆಂಡತಿಯೊಡನೆ ಮತ್ತು ಅತ್ತೆಯೊಡನೆ ಜಗ ಳಾಡಲಾರಂಭಿಸಿದರು. ಕೊನೆಗೆ ಅವರನ್ನು ಹೊರಗಟ್ಟುತ್ತೇನೆಂದು ಗರ್ಜಿಸಿ ದರು. ಅದಕ್ಕೆ ಸರಿಯಾಗಿ ಮೀನಾಕ್ಷಿಯೂ ಅವರ ಮನೆಗೆ ಬಂದಳು. ಸೋಮಕ್ಕನಯ ಹತ್ತಿರ ತನ್ನಲ್ಲಿಗೆ ಬನ್ನಿ ಎಂದು ಎಲ್ಲರನ್ನು ಕರೆದುಕೊಂಡು ಹೋದಳು. ಸೆಟ್ಟರು ಏನೂ ಆಕ್ಷೇಪಿಸಲಿಲ್ಲ. ( ಅವರೇ ಮೀನಾಕ್ಷಿಯ ಮೂಲಕ ಈ ತಂತ್ರ ಹೂಡಿದ್ದೆಂದು ಮತ್ತೆ ಸೋಮಕ್ಕ ಕಲ್ಪಿಸಿದಳು. )

ಪ್ರಾರಂಭದಲ್ಲಿ ಸೋಮಕ್ಕ ಮತ್ತು ಅವಳ ಮಕ್ಕಳಿಗೆ ಮೀನಾಕ್ಷಿ ಏನೂ ಕೆಲಸ ಕೊಡಲಿಲ್ಲ. ಕೆಲವು ದಿನಗಳ ಬಳಿಕ ಸೆಟ್ಟರ ಹೆಂಡತಿಯನ್ನು ಒಂದು ಕೋಣೆಗೆ ಕಳಿಸಿದಳು. ಮತ್ತೊಬ್ಬ ಅವಳ ತಂಗಿಯನ್ನು ಕೆಳಗಿನ ಮಾರ್ಗದ ಬದಿಯ ಕೋಣೆಯಲ್ಲಿ ಬರೇ ತುಂಡುಕೈಯ ರವಿಕೆ ಹಾಕಿಸಿ ಕುಳ್ಳಿರಿಸಿದಳು. ಇನ್ನೊಬ್ಬಳನ್ನು ಸೇಠ್‌ನ ತೃಪ್ತಿಗಾಗಿ ಅವಳ ಕೋಣೆಯಲ್ಲೇ ಬಿಟ್ಟಳು. ಕೊನೆಗೆ ಸೋಮಕ್ಕನಯ ಸರದಿಯೂ ಬಂತು. ಆದರೆ ಈ ನಾಲ್ವರಿಗೂ ಮೀನಾಕ್ಷಿಯನ್ನು ಪ್ರತಿಭಟಿಸಲು ಸಾಧ್ಯವಾಗಲಿಲ್ಲ. ಅಂಥ ತಂತ್ರ ಅವಳದು. ಮೊದಲಿನ ರಾತ್ರೆ ಒಳ್ಳೆಯ ಸುಂದರ ಗಂಡಸರನ್ನೇ ಅವರಲ್ಲಿಗೆ ಕಳಿಸುವಳು. ಆಗ ಅವರು ಪ್ರಕೃತಿಯ ಕಟ್ಟಳೆಗೆ ಒಳಗಾಗಿ ಆ ಗಂಡಸರೊಡನೆ ಇರಲೇ ಬೇಕಾಗುತಿತ್ತು. ಎರಡನೆಯ ದಿನದಿಂದ ಯಾವ ರೀತಿಯ ವರ್ಗೀಕರಣವೂ ಇಲ್ಲ. ಹಣ ಹೆಚ್ಚು ಯಾರು ಕೊಟ್ಟರೋ ಅವರು ಕುರೂಪಿಗಳಾಗಿರಲಿ, ರೋಗಿಗಳಾಗಿರಲಿ, ಮುದುಕರಾಗಿರಲಿ, ತಮಗೆ ಬೇಕಾದ ಹೆಂಗಸಿನೊಡನೆ ಒಂದು ರಾತ್ರೆ ಕಳೆಯಬಹುದು.

ಸೋಮಕ್ಕಗೆ ಈ ರೀತಿಯ ಜೀವನ ಹಿಡಿಯಲಿಲ್ಲ. ಆದರೆ ಅವಳು ಯಾರೊಡನೆಯೂ ದೂರು ಕೊಡಲು ಆಸ್ಪದವಿದ್ದಿಲ್ಲ. ಅವಳು ಊರಿನಿಂದ ಹೊರಡುವಾಗ ಅವಳ ನೆರೆಕರೆಯವರೆಷ್ಟೋ ಹೋಗಬಾರದೆಂದು ಒತ್ತಾಯ

ಪಡಿಸಿದ್ದರು. ಆದರೆ ಅವಳು ಸೆಟ್ಟರ ಮಾತುಗಳನ್ನು ಪೂರ್ಣ ನಂಬಿದ್ದಳು. "ಇಂಥ ಐಶ್ವರ್ಯವಂತ, ಕಿವಿಗಳಲ್ಲಿ ವಜ್ರದ 'ಒಂಟಿ' ಗಳುಳ್ಳ ಮನುಷ್ಯ ನಮಗೆ ಮೋಸ ಮಾಡಿಯಾರೆ? ಅವರಲ್ಲದೆ ನಮ್ಮನ್ನು ರಕ್ಷಿಸುವವರು ಈ ಹುಡುಗಿಯರನ್ನು ಮದುವೆ ಮಾಡಿ ಕೊಡುವವರು ಬೇರೆ ಯಾರು?" ಎಂದು ಅವಳು ತನ್ನ ಮಕ್ಕಳೊಡನೆಯೇ ಆಗ ವಾದಿಸಿದ್ದಳು! ಈಗ ಸೆಟ್ಟರು ಅವಳಿಗಿತ್ತ ಅವಸ್ಥೆಯನ್ನು ಅವಳೆಂದೂ ಕಲ್ಪಿಸಿರಲಿಲ್ಲ. ಒಂದೇ ವಾರದಲ್ಲಿ ಅವಳಿಗೆ ಸಾಕೋಸಾಕಾಯಿತು. ಇಷ್ಟು ಸ್ವಲ್ಪ ದಿನಗಳಲ್ಲಿ ಇಷ್ಟು ಹೆಚ್ಚು ಜನರೊಡನೆ ಅವಳೆಂದೂ ಬೆರೆದಿದ್ದಿಲ್ಲ.

ಮೀನಾಕ್ಷಿಯನ್ನು ಕಂಡೊಡನೆ ಅವಳಿಗೆ ಹೆದರಿಕೆಯಾಗುತಿತ್ತು. ಮೀನಾಕ್ಷಿಯ ಎದುರಲ್ಲಿ ಎಂಥ ಕಣ್ಣೀರಾಗಲೀ, ಎಂಥ ಕೂಗಾಗಲೀ ನಡೆಯದು. ಏನೆಂದರೂ ಬಾರುಗೋಲಿನ ಪೆಟ್ಟೊಂದಲ್ಲದೆ ಬೇರಿಲ್ಲ. ವಿಶೇಷ ದುರ್ಬಲ ಹೆಂಗಸರಿದ್ದರೆ, ಅವರಿಗೆ ಚೆನ್ನಾಗಿ ಸರಾಯಿ ಕುಡಿಸುವಳು. ಹಾಗೆಯೇ ಸೋಮಕ್ಕಗೂ ಒಂದೆರಡು ದಿನ ಕೊಟ್ಟಳು. ಸೋಮಕ್ಕಗೆ ತಡೆಯಲಾಗಲಿಲ್ಲ. ಅವಳು ಗಂಡಸಿನೊಡನೆ ದೈಹಿಕ ಸಂಬಂಧವಿಟ್ಟುಕೊಳ್ಳುವ ಕಾಲ ಅಂತ್ಯವಾಗುತಿತ್ತು. ಆದರೆ ಮುಂಬಯಿಯಂಥ ಲಕ್ಷಗಟ್ಟಲೆ ಜನರು ವಾಸಿಸುವ ನಗರದಲ್ಲಿ ಎಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ವೈವಿಧ್ಯವೇ ಆಗಿ ಪರಿಣಮಿಸುತಿತ್ತು.

ಎಂಟನೆಯ ರಾತ್ರಿ ಸೋಮಕ್ಕ ಲೆಕ್ಕ ಹಾಕಿದಳು. ದಿನಕ್ಕೆ ಮೂರರಿಂದ ಎಂಟರವರೆಗೆ ಗಿರಾಕಿಗಳು ಅವಳನ್ನು ಕೂಡಿದ್ದರು. ಅದೂ ಎಂಥೆಂಥ ವಿಧದವರು! ಹಲ್ಲಿಲ್ಲದ ಮುದುಕರು, ಗಡ್ಡ ಬೆಳೆದು ರಕ್ಕಸರಂತೆ ತೋರುವ ಕರಿ ಕುರೂಪಿಗಳು, ರೋಗದಲ್ಲಿ ನರಳುತ್ತಿರುವ, ಬಾಯಿಯಲ್ಲಿ ಎಂಜಲು ಕಾರುತ್ತಿರುವ, ಮೈಯಿಂದ ಕೀವು ಸುರಿಯುತ್ತಿರುವ ಕಾಮಾಂಧರು! ಪ್ರತಿಯೊಬ್ಬನೊಡನೆ ನಡೆದ ಅವಳ ಸಮಾಗಮವೂ ಅವಳಿಗೆ ದೊಡ್ಡ ಚಿತ್ರಹಿಂಸೆಯಾಯಿತು. ಅಂದಿನ ರಾತ್ರಿ ಕೊನೆಯ ಗಿರಾಕಿ ಅವಳನ್ನಗಲಿದ ಮೇಲೆ ಅವಳುಟ್ಟ ಸೀರೆಯನ್ನು ಬಿಚ್ಚಿ, ಹುರಿಮಾಡಿ ಮಂಚದ ಮೇಲೆ ಹತ್ತಿ ಕಬ್ಬಿಣದ ಅಡ್ಡ ಸರಳಿಗೆ ಒಂದು ತುದಿಯನ್ನು ಕಟ್ಟಿ ಮತ್ತೊಂದು ತುದಿಯನ್ನು ಅವಳ ಕುತ್ತಿಗೆಗೇ ಕಟ್ಟಿಕೊಂಡು ಪ್ರಾಣಬಿಟ್ಟಳು.

ಮತ್ತೆ ರಾಮಪ್ಪಸೆಟ್ಟರು ಪ್ರತಿಸಲವೂ ಊರಿಂದ ಹಿಂತಿರುಗುವಾಗ ಒಂದೆರಡು ಹೆಂಗಸರನ್ನಾದರೂ ಮುಂಬಯಿಗೆ ಕರೆದುಕೊಂಡು ಹೋಗಿ ಮೀನಾಕ್ಷಿ ನಡೆಸುತಿದ್ದ ಸಂಸ್ಥೆಯನ್ನು ವಿಸ್ತರಿಸದಿಲ್ಲ. ಯುದ್ಧದ ಸಮಯ ದಲ್ಲಂತೂ ಅವರ ಸವಾರಿ ಊರಿಗೆ ವರುಷಕ್ಕೆ ಆರೇಳು ಸಲ. ಎರಡುಮೂರು ವರುಷಗಳಲ್ಲಿ ನೂರಕ್ಕಿಂತಲೂ ಹೆಚ್ಚಿಗೆ ಹೆಂಗಸರನ್ನು ಮುಂಬಯಿಗೆ ಸಾಗಿಸಿದ್ದರು.

ಇಷ್ಟಾದರೂ ಊರವರೊಡನೆ ಅವರು ಹೇಳುತಿದ್ದುದು ಬೇರೇಯೇ. ಮುಂಬಯಿಯಲ್ಲಿ ಕೆಲಸಕ್ಕೆ ಜನ ಕಡಿಮೆಯಾಗಿದೆಯಂತೆ. ಕೆಲಸದ ಹೆಂಗಸರಿಗೆ ತುಂಬ ಸಂಬಳವಂತೆ. ಹೀಗೆ ಮುಂಬಯಿಗೆ ಹೋಗಬೇಕೆಂದು ಇಚ್ಛಿಸುತಿದ್ದ ಪ್ರತಿಯೊಬ್ಬ ಉಮೇದುವಾರಳಿಗೂ ಬಾಯಿಯಲ್ಲಿ ನೀರು ತರಿಸುತಿದ್ದರು.

"ಮುಂಬಯಿಯಲ್ಲಿ ಇಲ್ಲಿಯಂತೆ ದಿನವಿಡೀ ದುಡಿತವಿಲ್ಲ. ಶನಿವಾರ ಆದಿತ್ಯವಾರ ರಜೆ. ಪ್ರತಿದಿನ ಸಂಜೆ ಸಮುದ್ರದ ಬಳಿಗೆ ಹೋಗಬಹುದು. ಇಲ್ಲವೇ ಸಿನೇಮಾಕ್ಕೆ ಹೋಗಬಹುದು. ತಿನ್ನಲಿಕ್ಕೆ ಗೋದಿ ಮತ್ತು ತುಪ್ಪ ಮಾತ್ರ. ಅಲ್ಲಿ ಭಂಗಾರಕ್ಕೆ ಇಲ್ಲಿಯ ಬೆಳ್ಳಿಯ ಕ್ರಯ. ವಸ್ತುಗಳಂತೂ ಬಹಳ ಅಗ್ಗ. ಅಲ್ಲದೆ ಧನಿಗಳು ಕೂಡಾ ತುಂಬ ಧರ್ಮಾತ್ಮರುಗಳು."

—ಇದು ಸೆಟ್ಟರು ಊರಿನ ಭಿಕಾರಿ ಹೆಂಗಸರಿಗೆ ತೋರಿಸುತಿದ್ದ ರಾಮ ರಾಜ್ಯದ ವರ್ಣನೆ.

## ಅಧ್ಯಾಯ ಎಂಟು.

ಪಾರ್ವತಿಯನ್ನು ಕರೆದುಕೊಂಡು ಬರಲು ಸಂಜೀವ ನಾರಾಯಣಸೆಟ್ಟರಲ್ಲಿಗೆ ಹೋದ. ಕೋಚಣ್ಣ ರೈಗಳೂ ಅಲ್ಲಿ ಇದ್ದರು. ಸೆಟ್ಟರು ಅರೆಮನಸಿನಲ್ಲಿ ಸಂಜೀವನನ್ನು ಸ್ವಾಗತಿಸಿದರು. ಊಟೋಪಚಾರಗಳು ನಡೆದ ಬಳಿಕ ಸೆಟ್ಟರು ಮನೆಯವರ ಯೋಗಕ್ಷೇಮ ವಿಚಾರಿಸುವಾಗ ಸಂಜೀವ ತುಂಬ ವ್ಯಗ್ರನಾದ.

"ಏನು ಸಂಜೀವ, ನಿಮ್ಮಲ್ಲೇನೂ ಸುಧಾರಣೆಗಳಾದಂತೆ ತೋರುವದಿಲ್ಲ. ನೀನೇನೂ ಮನಸು ಮಾಡುತ್ತಿಲ್ಲವೆಂದು ತೋರುತ್ತದೆ." ಎಲೆಯಡಿಕೆ ಜಗಿಯುವ ನಡುವೆ ಸೆಟ್ಟರು ಕೇಳಿದರು. ಕೋಚಣ್ಣ ರೈಗಳು ಅಲ್ಲೇ ದೂರದಲ್ಲಿ ಒಂದು ತಲೆದಿಂಬಿಗೆ ಒರಗಿ ಒಂದು ಬೀಡಿ ಎಳೆಯುತಿದ್ದರು.

"ಹಂ," ಸಂಜೀವನು ಏನನ್ನೂ ಹೇಳಲು ತೋಚದೆ ನಿಟ್ಟುಸಿರು ಬಿಟ್ಟ. "ಎಲ್ಲ ಹಿರಿಯರು ನಡೆಸುತಿದ್ದಾರೆ."

"ಹಿರಿಯರು! ಶಿವ ಶಿವಾ, ನನ್ನ ಮಗಳನ್ನು ಹೇಗೆ ನಡೆಸುತಿದ್ದಾರೆ! ಜೀವವಿರುವವರು ಅವಳಿಗೆ ಅಂಥ ಕಷ್ಟ ಕೊಟ್ಟಾರೆ? ಅದರ ಮೇಲೆ ನೀನೊಬ್ಬ ಗಂಡಸು!"

"ನಾನೇನು ಮಾಡಬೇಕು, ನೀವು ಹೇಳಿ. ಯಜಮಾನರು ಹೇಳಿದ ಹಾಗೆ ಸಾಧ್ಯವಿದ್ದಷ್ಟು ದಿನ ದೂಡುವುದು. ಮತ್ತೆ ದೇವರಿಟ್ಟ ಹಾಗೆ ಆಗುತ್ತದೆ."

"ಛೆ! ದೇವರು, ದಿಂಡರು! ದೇವರು ದೇವರೆನ್ನುತ್ತ ನಾವೆಲ್ಲ ಸುಮ್ಮನೆ ಕುಳಿತುಕೊಂಡಿದ್ದರೆ ಏನಾಗುತಿತ್ತು, ನಿನಗೆ ಗೊತ್ತೇ! ರೈಗಳೊಡನೆ ಕೇಳು, ನನ್ನ ಒಬ್ಬ ಮಾವನನ್ನು ಹೇಗೆ ಬಗ್ಗಿಸಿದೆನೆಂದು. ನೀನು ಹೇಡಿಯಾಗಿ ಹೀಗೆಯೇ ಕುಳಿತರೆ ನಿನಗೆ ಗೆರಟೆ ಮತ್ತು ಕೋಲುಗಳೇ ಗತಿ. ತಿಳಿಯಿತೇ?"

"ಅಲ್ಲ, ನನ್ನ ತಾಯಿ........"

"ತಾಯಿಯಾದರೇನು, ತಂದೆಯಾದರೇನು? ಕಣ್ಣಿನಲ್ಲಿ ರಕ್ತವಿದ್ದವ ಈ ರೀತಿ ನನ್ನ ಮಗಳನ್ನು ಕಷ್ಟಕ್ಕೀಡು ಮಾಡುತಿದ್ದಿಲ್ಲ. ಹೇಗೆ ಇದ್ದ ಹುಡುಗಿ ಈಗ ಹೇಗಾಗಿ ಹೋಗಿದ್ದಾಳೆ!"

"ಸಂಜೀವನಿಗೆ ಅದೆಲ್ಲ ಕ್ರಮೇಣ ಗೊತ್ತಾಗುತ್ತದೆ ಸೆಟ್ಟರೆ" ರೈಗಳು ಬೀಡಿಯ ಬೆಂಕಿಯನ್ನು ನೆಲಕ್ಕೆ ಜಜ್ಜುತ್ತ ಹೇಳಿದರು. ಅವರಿಗೆ ಈ ಸಂಭಾಷಣೆಯ ತೀವ್ರಗತಿಯನ್ನು ಕಂಡು ಸ್ವಲ್ಪ ಅಂಜಿಕೆಯಾಗಿತ್ತು. "ನಾವೆಲ್ಲ ಇರುವಾಗ ಅವನನ್ನು ಬಿಟ್ಟು ಹಾಕುವುದಾದರೂ ಹೇಗೆ?"

"ಹೌದು ರೈಗಳೆ, ಯಾವುದಕ್ಕಾದರೂ ನಮ್ಮೊಡನೆ ಹೇಳಬೇಕಲ್ಲ?

ಇದು ಏನೂ ಇಲ್ಲ. ನೀರಿನಲ್ಲಿ ಬಿದ್ದ ಹೇನಿನಂತೆ ವರ್ತಿಸಿದರೆ ಯಾರಿಂದೇನು ಮಾಡಬಹುದು?" ಸೆಟ್ಟರು ಕಣ್ಣರಳಿಸಿ ಒಮ್ಮೆ ಸಂಜೀವನನ್ನು ನೋಡುತ್ತ ಒಮ್ಮೆ ರೈಗಳನ್ನು ನೋಡುತ್ತ ನುಡಿದರು.

ಸಂಜೀವ ನಿರುತ್ತರನಾದ. ರೈಗಳು ನಸುನಗುತ್ತ ಸಂಜೀವನನ್ನು ಸಮೀಪಕ್ಕೆ ಬರಹೇಳಿದರು. ಬೀಡಿಯ ಕಟ್ಟನ್ನು ಮುಂದಿಟ್ಟು ಬೆಂಕಿ ಪೆಟ್ಟಿಗೆಯ ಕಡ್ಡಿಯಿಂದ ಹಲ್ಲಿನ ಸಂದುಗಳನ್ನು ಕುಕ್ಕುತ್ತ ತಮ್ಮ ವಿಚಾರ ಹೇಳತೊಡಗಿದರು. ಸಂಜೀವನಿಗೆ ಕೇಳುವುದೊಂದೇ ಕೆಲಸವಾಯಿತು. ರೈಗಳು ಅಲ್ಲಿಂದೆದ್ದು ಕೋಣೆಗೆ ನಿದ್ರಿಸಲು ಹೋದರು.

"ಸೆಟ್ಟರ ಮಾವನ ಹೆಸರು ಕೋಟಿ" ರೈಗಳು ಹೇಳುತಿದ್ದರು. "ಒಳ್ಳೆಯ ಧಾಂಡಿಗ ಮನುಷ್ಯ. ನಿನ್ನ ದೇವಪ್ಪ ಎಲ್ಲಿ, ಅವರೆಲ್ಲಿ! ಅವರ ಮೀಸೆಯನ್ನು ನೋಡಿದೊಡನೆಯೇ ಎಂಥವನೂ ತತ್‌ಕ್ಷಣ ಮೂತ್ರ ಹೊಯ್ಯಬೇಕು. ಕಪ್ಪು ಕಪ್ಪಾಗಿ ಮೈಯ ಮಾಂಸ ಹೊಳೆಯುತಿತ್ತು. ಚಿಕ್ಕಂದಿನಲ್ಲಿ ನಾನು ಅವರನ್ನು ಕಂಡಾಗ ಒಮ್ಮೆ ಹೆದರಿ ಹೋಗಿದ್ದೆ."

ಸೆಟ್ಟರಿಗೆ ಅವರ ಮಾವ ಏನೊಂದೂ ಖರ್ಚಿಗೆ ಕೊಡುತಿದ್ದಿಲ್ಲವಂತೆ. ಮಾವನ ಹೆಂಡತಿಯಂತೂ ಮೂರು ದಿನವಾದ ತಂಗಳನ್ನವನ್ನು ಬಡಿಸುತಿದ್ದರಂತೆ. ಸೆಟ್ಟರು ಎಷ್ಟು ಕೆಲಸ ಮಾಡಿದರೂ ಮನೆಯಲ್ಲಿ ಪೆಟ್ಟು ತಪ್ಪಿದ್ದಲ್ಲ. ನಾಲ್ಕೈದು ಸಲ ಸೆಟ್ಟರಿಗೆ ಹೊಡೆತದ ದೆಸೆಯಿಂದಾಗಿ ಸ್ಮೃತಿ ತಪ್ಪಿತ್ತು. ● ಮೇಲೆ 'ಪರೆಂಗಿ ಮಣೆ' ಯ ಶಿಕ್ಷೆ. ಪರೆಂಗಿಮಣೆಯೆಂದರೆ ಒಂದು ಮರದ ತುಂಡಿಗೆ ಒಂದು ಪಾದವಿಡಲು ಮಾತ್ರ ಜಾಗೆಯಿಟ್ಟು ಉಳಿದ ಕಡೆ ಮುಳ್ಳು ಹಾಕುವುದು. ಅದರಲ್ಲಿ ಶಿಕ್ಷೆಗೆ ಒಳಗಾದವ ಒಂದೇ ಕಾಲಿನಲ್ಲಿ ನಿಲ್ಲಬೇಕು. ಅದಲ್ಲದೆ ಕಣ್ಣಿಗೆ ಮೆಣಸಿನ ಪುಡಿ ಹಾಕುತಿದ್ದರು. ಸೆಟ್ಟರಿಗೆ ಈ ಜೀವನ ಸಹಿಸದಾಯಿತು.

ಒಮ್ಮೆ ಅವರಿಗೆ ಕಟ್ಟಿ ಹಾಕಿದ ಕೋಣ ಹಾಯಿತಂತೆ. ಕೋಟಿಸೆಟ್ಟರ ಕಂಬಳದ ಕೋಣಗಳೆಂದರೆ ಊರೂರು ಪ್ರಸಿದ್ಧವಾದವುಗಳು. ಅವುಗಳನ್ನು ತೊಳೆಯಲು ಕೊಂಡು ಹೋಗುವಾಗ ಕೂಡಾ ಆರೇಳು ಜನ ಅವುಗಳನ್ನು ಹಿಡಿಯಲಿಕ್ಕೆ ಬೇಕು. ಮತ್ತೆಲ್ಲಾದರೂ ಕಂಬಳಕ್ಕೆ ಓಡಿಸಲು ಕೊಂಡು

ಹೋಗುವುದೆಂದರೆ ಒಂದೊಂದು ಕೊಂಬಿಗೆ ಎರಡೆರಡು ಜನ, ಒಂದೊಂದು ಕಾಲಿಗೆ ಒಂದೊಂದು ಜನದಂತೆ ಬೇಕಾಗುತಿತ್ತು. ಅವುಗಳು ಹೋದ ಕಂಬಳದಿಂದ ಓಟದಲ್ಲಿ ಬಹುಮಾನ ತಾರದಿಲ್ಲ. ಒಂದು ಜತೆ ಹಳೆಯದಾದೊಡನೆ ಅದನ್ನು ಮಾರಿ ಹೊಸ ಜತೆ ಪಡಕೊಂಡು ಸಾಕುವರು. ದಿನಕ್ಕೆ ಆರಾರು ಸೇರು ಹುರುಳಿ ಬೇಯಿಸಿ ಹಾಕುತಿದ್ದರು. ಮತ್ತೆ ಮನೆಗೆಲಸದ ಹೊಲೆಯರಿಗೆಲ್ಲ ಸಂಜೆ ಅವುಗಳಿಗೆ ಹುಲ್ಲು ತರುವುದೊಂದೇ ಕೆಲಸ. ನಾರಾಯಣಸೆಟ್ಟರಿಗೆ ಅವುಗಳ ಕೆಲಸ ಮಾಡಿ ಹೆಚ್ಚು ಗೊತ್ತಿಲ್ಲದಿದ್ದರೂ ಮಾವನ ಹೆದರಿಕೆಗೆ ಬಾಗಬೇಕಾಯಿತು. ಆಗ ಒಂದು ಕೋಣ ಹಾಯ್ದು ಬಿಟ್ಟಿತು. ಸೆಟ್ಟರ ತೊಡೆಯಲ್ಲಿ ಒಂದು ದೊಡ್ಡ ಗಾಯವಾಯಿತು.

ಆದರೆ ಅವರ ಮಾವ ಕೋಟಿಸೆಟ್ಟರು ಅದನ್ನು ಗಮನಿಸಲಿಲ್ಲ. ನಾರಾಯಣಸೆಟ್ಟರು ಒಂದೆರಡು ದಿನ ನೋವನ್ನು ಸಹಿಸಿದರು. ಮತ್ತೆ ಅವರಿಂದ ಅದು ಸಾಧ್ಯವಾಗಲಿಲ್ಲ. ಅದರಲ್ಲಿ ಕೀವು ಹುಟ್ಟಿತು. ಅವರಿಗೆ ಜ್ವರ ಬಂತು. ಅನ್ನ ತೆಗೆದುಕೊಳ್ಳಲಾಗಲಿಲ್ಲ. ಹುಣ್ಣು ನಾರತೊಡಗಿತು. ಇಷ್ಟಾದರೂ ಕೋಟಿಸೆಟ್ಟರು ಕೊಡುತಿದ್ದ ದಂಡನೆಗೆ ಲೆಕ್ಕವಿಲ್ಲ. ಕೊನೆಗೆ ನಾರಾಯಣಸೆಟ್ಟರು ಚಾಪೆ ಹಿಡಿದರು. ಊರಿನ ವೈದ್ಯ ಬೊಗ್ರ ಪೂಜಾರಿಯ ಮದ್ದು ನಡೆಯಿತು. ದಿನಕ್ಕೆ ಅರ್ಧ ಡ್ರಾಮು ಶರಾಬು ಕುಡಿಸಬೇಕೆಂದಿದ್ದನಂತೆ ಅವನು ರೋಗಿಗೆ. ಆದರೆ ಕೋಟಿಸೆಟ್ಟರು ಅದನ್ನು ಕೊಡಲಿಲ್ಲ. ನಾರಾಯಣಸೆಟ್ಟರು ಕೂಗುತ್ತಲೇ ವೇದನೆಯನ್ನು ಸಹಿಸಬೇಕಾಯಿತು. ತನ್ಮಧ್ಯೆ ಕೋಟಿಸೆಟ್ಟರು ಬೊಗ್ರ ಪೂಜಾರಿಗೆ ಸರಿಯಾಗಿ ಹಣ ಕೊಡದಿದ್ದುದರಿಂದ ಅವನು ಮದ್ದನ್ನು ಬದಲಿಸಿ ಕೊಟ್ಟ. ನಾರಾಯಣಸೆಟ್ಟರ ಗಾಯ ಜೋರಾಗಿ ಉರಿಯಲಾರಂಭಿಸಿತು. ಕೋಟಿಸೆಟ್ಟರ ಗದರಿಸುವಿಕೆಗೂ ನಾರಾಯಣಸೆಟ್ಟರ ಗಟ್ಟಿಯಾದ ಕೂಗು ನಿಲ್ಲಲಿಲ್ಲ. ಮತ್ತೆ ಬೊಗ್ರ ಪೂಜಾರಿಗೆ ಕೋಟಿಸೆಟ್ಟರು ಗದರಿಸಿ ಬೆತ್ತ ಹಿಡಿದರು. ಆಮೇಲಿನ ಮದ್ದಿನಲ್ಲಿ ಗಾಯ ವಾಸಿಯಾಗುತ್ತ ಬಂತು. ಆದರೆ ಪೂರ್ಣ ವಾಸಿಯಾಗಿ ನಡೆಯಲಿಕ್ಕಾಗುವುದರೊಳಗೇ ಕೋಟಿಸೆಟ್ಟರು ನಾರಾಯಣಸೆಟ್ಟರನ್ನು ಹುಲ್ಲು ಕೊಯ್ಯಲಿಕ್ಕೆ ಕಳಿಸುತಿದ್ದರು. ಆಗ ಪಾಪ ನಾರಾಯಣಸೆಟ್ಟರು ಒಂದು ಕೋಲನ್ನು ಊರಿಕೊಂಡು ನಡೆಯಬೇಕಿತ್ತಷ್ಟೆ. ಮಾತ್ರ ಹುಲ್ಲು ತಾರದಿದ್ದರೆ ಅತ್ತೆ ಅಂದು ಅನ್ನ

ಹಾಕಲಿಕ್ಕಿಲ್ಲ.

ಅತ್ತೆಯ ಭೇದಭಾವವೆಂದರೆ ಹೇಳತೀರದು. ಕೋಟಿಸೆಟ್ಟರ ಮನೆಯಲ್ಲಿ ಕೋಳಿಗಳು ತುಂಬ. ಕೋಳಿ ಜೂಜಿನಲ್ಲಿಯೂ ಅವರು ನಿಸ್ಸೀಮರು. ಎಂಟುರೂಪಾಯಿ–ಹತ್ತು ರೂಪಾಯಿಗಳ ಕೋಳಿಗಳು ಅವರೊಡನೆ ಯಾವಾಗಲೂ ಆರೇಳಕ್ಕಿಂತ ಕಡಿಮೆಯಾದುದಿಲ್ಲ. ಕೋಳಿ ಜೂಜಿನಲ್ಲಿ ಹಣವನ್ನೂ ಕಟ್ಟುತಿದ್ದರು. ಆದರೆ ಹೆಚ್ಚಿನದರಲ್ಲಿ ಅವರ ಹಣ ಹೋಗುತಿತ್ತೇ ವಿನಃ ಬರುತಿದ್ದಿಲ್ಲ. ಮನೆಯಲ್ಲಿ ಕೋಳಿಯ ಪದಾರ್ಥ ಮಾಡಿದರೆ ನಾರಾಯಣ ಸೆಟ್ಟರಿಗೆ ಅತ್ತೆಯಿಂದ ಸಿಗುವುದು ಎಲುಬಿನ ತುಂಡು ಮಾತ್ರ. ಮಾಂಸವೆಲ್ಲ ಅತ್ತೆ ಮಾವಂದಿರಿಗೇ. ಮತ್ತೆ ಅವಳಿಂದೂ ಬಿಸಿ ಅನ್ನ ಉಂಡದ್ದೇ ಇಲ್ಲ. ಏನೋ ಹುಳಗಳುಳ್ಳ ಉಪ್ಪಿನಕಾಯಿ, ಇಲ್ಲವೇ ಬರೇ ಉಪ್ಪು ಮೆಣಸುಗಳನ್ನು ಮಾತ್ರ ಅನ್ನದೊಡನೆ ಕೊಡುತಿದ್ದಳು.

ಇಷ್ಟಾದರೂ ಸೆಟ್ಟರಿಗೆ ಉಸಿರೆತ್ತಲು ಎಡೆಯಿಲ್ಲ. ಅವರೊಡನೆ ಮನೆಯಲ್ಲಿ ಮಾತನಾಡುವವರು ಕೂಡಾ ಇಲ್ಲ. ಕೋಟಿಸೆಟ್ಟರ ಕಣ್ಣು ಶರಾಬಿನ ಬಲದಿಂದ ಯಾವಾಗಲೂ ಕೆಂಪಗಾಗಿಯೇ ಇರುತಿತ್ತು. ನಾರಾಯಣಸೆಟ್ಟರು ಎಂದೂ ಅವರ ಎದುರು ನಿಂತು ಮಾತನಾಡಿದ್ದಿಲ್ಲ. ನಾರಾಯಣಸೆಟ್ಟರಿಗೆ ಕೋಟಿಸೆಟ್ಟರು ಆಗ ಕೊಡುತಿದ್ದುದು ಒಂದು ಲಂಗೋಟಿ ಮಾತ್ರ. ಅದೂ ಅವರ ಹಳತಾದ ವಸ್ತ್ರಗಳಿಂದ ಹರಿದ ತುಂಡು. ಮತ್ತೆ "ನಿನ್ನನ್ನೀಗ ಹೂಳಿಬಿಡುವೆ", "ನಿನ್ನನ್ನು ಕೊಂದು ಬಿಡುವೆ", "ನಿನ್ನನ್ನು ಮನೆಯೊಳಗೆ ಬಾರದ ಹಾಗೆ ಮಾಡುತ್ತೇನೆ"—ಇಂಥ ಮಾತುಗಳನ್ನು ಪ್ರತಿನಿತ್ಯವೂ ಹೇಳುತಿದ್ದರು.

ನಾರಾಯಣಸೆಟ್ಟರ ತಂಗಿ ಸಂಕುವೂ ಆಗ ಕೋಟಿಸೆಟ್ಟರಲ್ಲೇ ಇದ್ದಳು. ಅವಳಿಗೂ ಸೆಟ್ಟರ ನಿರ್ಬಂಧಗಳು ಅನೇಕ. ಅತ್ತೆಗಂತೂ ತನಗೆ ಮಕ್ಕಳಿಲ್ಲದಿದ್ದರೂ ಸೊಸೆಯೆಂದರೆ ನೋಡಲಾಗದು. ಆದರೆ ಸಂಕುವಿಗೆ ಹದಿಮೂರನೇ ವಯಸ್ಸಿನಲ್ಲೇ ಮದುವೆಯಾಯಿತು. ಆಗ ನಾರಾಯಣಸೆಟ್ಟರಿಗೆ ಬಿಡುವಿಲ್ಲ. ಏನೋ ಕೋಟಿಸೆಟ್ಟರು ಅಳಿಯನಿಗೆ ಆಗ ಒಂದು ವಸ್ತ್ರ, ಒಂದು ತುಂಡು ಕೈಯ ಅಂಗಿ ಮತ್ತೊಂದು ಸಣ್ಣ ಶಾಲುಗಳನ್ನು ಮದುವೆಯ ಸಂಭ್ರಮಕ್ಕೆಂದು ಕೊಟ್ಟಿದ್ದರು. ಆಗ ಅವರಿಗೆ ಸುಮಾರು ಇಪ್ಪತ್ತು ವರುಷ

ಹಾಯ. ಮನೆಯಲ್ಲಿ ಚಪ್ಪರ ಹಾಕುವುದು, ಪೇಟೆಯಿಂದ ಸಾಮಾನು ತರುವುದು, ಊರಿನಿಂದ ತೆಂಗಿನಕಾಯಿ, ವೀಳ್ಯದೆಲೆಗಳನ್ನು ಸಂಗ್ರಹಿಸುವುದು ಇವೆಲ್ಲ ಕೆಲಸಗಳು ನಾರಾಯಣಸೆಟ್ಟರ ಮೇಲೆಯೇ ಬಿದ್ದಿದ್ದುವು. ಮದುವೆಯ ಮುಂಚಿನ ಹದಿನೈದು ದಿನಗಳಲ್ಲಿ ಅವರಿಗೆ ಸರಿಯಾಗಿ ನಿದ್ದೆ ಇರಲಿಲ್ಲ. ಕಾಲಕ್ಕೆ ಸರಿಯಾಗಿ ಆಹಾರವಿರಲಿಲ್ಲ. ಇಷ್ಟು ದುಡಿದರೂ ಕೋಟಿಸೆಟ್ಟರು ದಿನಕ್ಕೊಮ್ಮೆಯಾದರೂ ಅವರಿಗೆ ಗದರಿಸದಿಲ್ಲ. ಹಾಗೂ ಹೀಗೂ ಮದುವೆ ತೀರಿತು. ಸಂಕು ಗಂಡನ ಮನೆಗೆ ಹೋಗುವಾಗ ನಾರಾಯಣಸೆಟ್ಟರೆಷ್ಟೋ ಅತ್ತಿದ್ದರು.

ಸಂಕುವಿನ ಗಂಡ ದೇಜುಪೂಂಜರು ನಡುಹರೆಯ ದಾಟಿದವರು. ಅವರ ಮೊದಲ ಹೆಂಡತಿ ಸಿಡುಬಿನರೋಗದಲ್ಲಿ ಮುಂಚಿನ ವರುಷ ತೀರಿಕೊಂಡಿದ್ದಳು. ಆದರೂ ದೇಜುಪೂಂಜರು ಒಳ್ಳೆಯ ಮನುಷ್ಯ. ಊರಲ್ಲಿ ಅವರು ಯಾರ ಗೋಜಿಗೂ ಹೋಗದೆ ಇದ್ದುದನ್ನೇ ವೃದ್ಧಿಗೊಳಿಸುತಿದ್ದರು. ಅವರ ಆ ಗುಣಗಳನ್ನು ನೋಡಿಯೇ ಅವರೊಡನೆ ಕೋಟಿಸೆಟ್ಟರು ಸಂಬಂಧ ಬೆಳೆಸಿದ್ದಾಗಿತ್ತು. ಅವರ ಮುಂಚಿನ ಹೆಂಡತಿಗೆ ಎರಡು ಜನ ಹೆಣ್ಣು ಮಕ್ಕಳು ಮಾತ್ರ ಇದ್ದರು. ಅವರನ್ನು ಅವರ ಕುಟುಂಬದವರೇ ಸಾಕುತಿದ್ದರು. ಮನೆಯಲ್ಲಿದ್ದುದು ಅವರ ಮೂರು ಮಂದಿ ಅಳಿಯಂದಿರು ಮತ್ತು ಇಬ್ಬರು ಸೊಸೆಯರು ಮಾತ್ರ. ಸಂಕುವಿನ ಮದುವೆಯಾಗುವಾಗಲೇ ನಾರಾಯಣಸೆಟ್ಟರು ಪೂಂಜರೊಡನೆ ಗೆಳೆತನ ಬೆಳೆಸಿದ್ದರು. ಮದುವೆಯಾದ ಬಳಿಕ ಕೋಟಿಸೆಟ್ಟರು ಸಂಕುವನ್ನು ಮನೆಗೆ ಕರೆದು ತರಲಿಕ್ಕೆಂದು ಯಾವಾಗಲೊಮ್ಮೆ ನಾರಾಯಣಸೆಟ್ಟರನ್ನು ಪೂಂಜರಲ್ಲಿಗೆ ಕಳಿಸುತಿದ್ದರು.

ಪೂಂಜರು ನಾರಾಯಣಸೆಟ್ಟರ ಅವಸ್ಥೆಯನ್ನೆಲ್ಲ ಮನನ ಮಾಡಿಕೊಂಡರು. ಅವರು ಮಾವನ ಆಡಳಿತೆಯಲ್ಲಿ ಅನುಭವಿಸುತಿದ್ದ ಸಂಕಷ್ಟಗಳಿಗೆ ಸಹಾನುಭೂತಿ ತೋರಿಸಿದರು. ಕೊನೆಗೆ ಅವರಿಗೆ ಯಾವ ರೀತಿಯ ಸಹಾಯವನ್ನು ಕೊಡಲೂ ಸಿದ್ಧನಿರುವೆನೆಂದು ಆಶ್ವಾಸನವಿತ್ತರು.

ನಾರಾಯಣಸೆಟ್ಟರ ಪೌರುಷ ಅಂದಿನಿಂದ ಉಕ್ಕೇರತೊಡಗಿತು. ಮಾವನೊಡನೆ ಸಿಕ್ಕಸಿಕ್ಕಲ್ಲಿ ಘರ್ಷಿಸಲು ಅವರು ಹಿಂದೆ ಜಾರುತಿದ್ದಿಲ್ಲ. ಊರಿನ ಇತರ ಪುಂಡರುಗಳ ಸ್ನೇಹವನ್ನು ಚಹದಂಗಡಿಯಲ್ಲಿ ಬೆಳೆಸಿದರು. ದೂಮಪ್ಪ

ಪೂಜಾರಿ ನಾಲ್ಕು ಸಲ ಜೈಲಿಗೆ ಹೋದವ. ಎಂಟು ಜನರಿಗೆ ಹೊಡೆದವ. ಇಬ್ಬರಿಗೆ ಚೂರಿಯಿಂದ ತಿವಿದವ. ಮೂರು ಜನರನ್ನು ಕೊಂದವ. ದೇವು ಮೂಲ್ಯ ಕದಿಯುವುದರಲ್ಲಿ ನಿಸ್ಸೀಮ. ಕಲ್ಲಿನ ಗೋಡೆ ಕೂಡಾ ಅವನ ಕನ್ನಕ್ಕೆ ಎದುರಲ್ಲ. ಕೋಚ ಬ್ಯಾರಿ ಹಗಲಿನಲ್ಲಿ ಗೃಹಸ್ಥ; ರಾತ್ರಿ ಮಾರ್ಗ ದಲ್ಲಿ ಹೋಗುವ ಗಾಡಿಗಳನ್ನು ಸುಲಿಗೆ ಮಾಡುವನು. ಇಂಥ ಜನರು ನಾರಾಯಣಸೆಟ್ಟರಿಗೆ ಸುಲಭವಾಗಿ ಗಂಟುಬಿದ್ದರು. ಅವರಿಗೆ ಕೋಟಿಸೆಟ್ಟ ರೊಡನೆ ಆಗುತ್ತಲೂ ಇರಲಿಲ್ಲ. ಏಕೆಂದರೆ ಕೋಟಿಸೆಟ್ಟರಿಂದ ಅವರ ಆಪತ್ಕಾಲಗಳಲ್ಲಿ ಜಾಮೀನು ಮುಂತಾದ ಸಾಮಾನ್ಯ ಸಹಾಯ ಕೂಡ ದೊರೆ ಯುತಿದ್ದಿಲ್ಲ. ಬದಲಾಗಿ ಕೋಟಿಸೆಟ್ಟರು ಪೋಲೀಸರೊಡನೆ ಅವರನ್ನು ಹಿಡಿ ಸಲು ಬಹಿರಂಗವಾಗಿ ಸಹಕರಿಸುತಿದ್ದರು.

ನಾರಾಯಣಸೆಟ್ಟರ ಭಾವ, ಪೂಂಜರು ಆಗಾಗ ಸ್ವಲ್ಪ ಸ್ವಲ್ಪ ಹಣ ವನ್ನು ಕೊಡುತಿದ್ದರು. ಅವರ ಆಸೆಯೆಂದರೆ ಕೋಟಿಸೆಟ್ಟರ ಬಳಿಕ ತನ್ನ ಹೆಂಡತಿಗೂ ಅವರ ಆಸ್ತಿಯಲ್ಲಿ ಸ್ವಲ್ಪ ಲಾಭ ದೊರೆಯಬಹುದೆಂಬುದು. ಹಾಗಾಗಿ ಒಳಗಿಂದೊಳಗೇ ತಂತ್ರ ಬೆಳೆಯಿತು. ಕೋಟಿಸೆಟ್ಟರಿಗೆ ಈ ಕುರಿತು ಸ್ವಲ್ಪ ಸಂಶಯವಾಗುತಿದ್ದರೂ ಅವರೇನು ಹೆದರಲಿಲ್ಲ. ಬದಲಾಗಿ ನಾರಾ ಯಣಸೆಟ್ಟರಿಗೆ ಮದುವೆ ಮಾಡುವುದೆಂದು ನಿಶ್ಚಯಿಸಿದರು. ಸರಿ. ಲಿಂಗ ಮ್ಮನ ತಂದೆ-ತಾಯಿಗಳೊಡನೆ ವಿಚಾರಿಸಿ, ವಿವಾಹವನ್ನು ಮಾಡಿಸಿಯೇ ಬಿಟ್ಟರು. ನಾರಾಯಣಸೆಟ್ಟರ ವಿರೋಧ ಇದರಿಂದಾಗಿ ತಣಿಯುವ ಬದಲು ಇನ್ನೂ ಹೆಚ್ಚು ಬಿಸಿಯಾಯಿತು. ಕೋಟಿಸೆಟ್ಟರು ಎಷ್ಟೋ ಸಲ ಸಭಿಕರ ಎದುರಲ್ಲೇ ಅವರಿಗೆ ಅವಮಾನವಾಗುವಂಥ ಮಾತುಗಳನ್ನು ಹೇಳಿದರು.

ಮದುವೆಯಾದ ಕೆಲವು ದಿನಗಳೊಳಗೇ ಲಿಂಗಮ್ಮನಿಗೂ ಕೋಟಿಸೆಟ್ಟರ ಹೆಂಡತಿಗೂ ಜಗಳ ಹಿಡಿಯಿತು. ಲಿಂಗಮ್ಮನನ್ನು ಕೋಟಿಸೆಟ್ಟರ ಹೆಂಡತಿ ನಾನಾ ವಿಧದಿಂದ ಹಿಂಸಿಸತೊಡಗಿದಳು. ಆದರೆ ಲಿಂಗಮ್ಮ ಅವಳ ಬೆದರಿಕೆ ಗಳಿಗೆ ಸೊಪ್ಪು ಹಾಕಲಿಲ್ಲ. ತತ್ಪರಿಣಾಮವಾಗಿ ಕೋಟಿಸೆಟ್ಟರ ಮನೆಯಲ್ಲಿ ಅಶಾಂತಿ ತಲೆಹಾಕಿತು. ಕೆಲವು ಸಲ ಅನ್ನವಿಲ್ಲ, ಕೆಲವು ಸಲ ಪದಾರ್ಥವಿಲ್ಲ ಕೆಲವು ಸಲ ಒಲೆಯಲ್ಲಿ ಬೆಂಕಿಯೇ ಇಲ್ಲ—ಇಂಥ ಪ್ರಸಂಗಗಳು ಬಂದೊದಗಿ ದುವು. ಕೋಟಿಸೆಟ್ಟರಿಗೆ ಇದನ್ನು ತಡೆಯಲಾಗಲಿಲ್ಲ. ಕೊನೆಗೊಂದು ದಿನ

ನಾರಾಯಣಸೆಟ್ಟರಿಗೆ ನಾಲ್ಕು ಪೆಟ್ಟು ಹೊಡೆದರು. ಒಮ್ಮೆಲೇ ನಾರಾಯಣ ಸೆಟ್ಟರು ತನ್ನ ವಸ್ತ್ರ-ಅಂಗಿಗಳನ್ನು ಕಂಕುಳಲ್ಲಿಟ್ಟುಕೊಂಡು ಮನೆಯಿಂದ ಹೊರ ಬಿದ್ದರು.

ಆಗ ಕೋಟಿಸೆಟ್ಟರ ಮನಪಲ್ಲಿ ಬಲವಾದ ಹೆದರಿಕೆ ಮೂಡಿತು. ಅಳಿಯನು ಪುಂಡರ ಸ್ನೇಹ ಹಿಡಿದಿರುವನೆಂಬುದು ಅವರು ಮೊದಲೇ ತಿಳಿದ ಸಂಗತಿ. ಆದುದರಿಂದ ಇನ್ನು ನಾರಾಯಣಸೆಟ್ಟರನ್ನು ಉಪಾಯದಿಂದ ಬಲೆಯಲ್ಲಿ ಹಾಕಬೇಕೆಂದು ಬಗೆದರು. ಹಾಗೆಯೇ ಅವರನ್ನು ದೂಮಪೂಜಾರಿಯ ಮನೆಯಲ್ಲಿ ಕಂಡುಹಿಡಿದು, ತಾನು ಅವರಿಗೆ ಆಸ್ತಿಯ ಒಂದು ಪಾಲು ಕೊಡುತ್ತೇನೆಂದು ಆಶ್ವಾಸನೆ ಇತ್ತರು. ನಾರಾಯಣಸೆಟ್ಟರು ಅದಕ್ಕೆ ಒಪ್ಪಲಿಲ್ಲ. ಕೋಟಿಸೆಟ್ಟರೆಷ್ಟು ಹೇಳಿದರೂ ಇನ್ನು ಮನೆಯೊಳಗೆ ತಲೆಹಾಕಲಾರೆನೆಂದರು. ಆಗ ಕೋಟಿಸೆಟ್ಟರು ಸೊಂಟಕ್ಕೆ ಸುತ್ತಿಕೊಂಡಿದ್ದ ತಲವಾರನ್ನು ತೆಗೆದು " ಇಗೋ, ಈಗ ನನ್ನ ಮಾತು ಕೇಳದಿದ್ದರೆ ನಿನಗೆ ಇದೇ ಗತಿ " ಎಂದು ಗದರಿಸಿದರು. ಅಷ್ಟರೊಳಗೆ ದೂಮ ಪೂಜಾರಿ ಬಂದು ಕೋಟಿಸೆಟ್ಟರನ್ನು ಸಮಾಧಾನಪಡಿಸಿದ.

ಇದಾದ ದಿನವೇ ನಾರಾಯಣಸೆಟ್ಟರು ದೇಜುಪೂಂಜರಲ್ಲಿಗೆ ಹೋದರು. ದೇಜುಪೂಂಜರು, ಇನ್ನೂರು ರೂಪಾಯಿಗಳನ್ನೂ ಒಂದು ಸಣ್ಣ ಕಳ್ಳ ಕೋವಿಯನ್ನೂ ಅವರಿಗೆ ಕೊಟ್ಟು ಹಿಂದೆ ಕಳಿಸಿದರು. ಸರಿ. ದೂಮ ಪೂಜಾರಿ, ದೇವು ಮೂಲ್ಯ, ಕೋಚ ಬ್ಯಾರಿ—ಎಲ್ಲರೂ ಒಟ್ಟು ಸೇರಿದರು ಅಂದು ದೂಮ ಪೂಜಾರಿಯಲ್ಲಿ ಕೋಳಿ ಪದಾರ್ಥ ಮತ್ತು ಮೊಟ್ಟೆಯ ಔತಣವಾಯಿತು. ನಾಲ್ಕೈದು ಬಾಟ್ಲಿ ಶರಾಬೂ ಖರ್ಚಾಯಿತು. ರಾತ್ರೆಯಾಗುವಾಗ ಈ ನಾಲ್ಕು ಜನರೂ ಕೋಟಿಸೆಟ್ಟರ ಮನೆಗೆ ಹೋಗಿ ಹೊರಗೆ ಸಂದು ಸಂದುಗಳಲ್ಲಿ ಅವಿತು ಕುಳಿತುಕೊಂಡರು. ನಾರಾಯಣಸೆಟ್ಟರು ಮುಂಚೆಯೆ ಲಿಂಗಮ್ಮನನ್ನು ಗುಪ್ತವಾಗಿ ಕಂಡು ರಾತ್ರೆ ಒಂದು ಕೆಮ್ಮಿನ ಸಬ್ದ ಕೇಳಿದೊಡನೆ ಅಂಗಳದ ಹೊರಗಿನ ಬಾಗಿಲನ್ನು ತೆಗೆಯಬೇಕೆಂದು ಸೂಚಿಸಿದ್ದರು.

ಅದು ದೊಡ್ಡ ಮನೆ. ನಾಲ್ಕು ಸುತ್ತಲೂ ಗೋಡೆ. ಮಧ್ಯದಲ್ಲಿ ದೊಡ್ಡ ಅಂಗಳ. ಪಡುದಿಕ್ಕಿನಲ್ಲಿ ದೊಡ್ಡ ಚಾವಡಿ. ಅದರ ಮೇಲೆ ಮಾಳಿಗೆ. ಚಾವಡಿಯ ಒಂದು ಬದಿಯಲ್ಲಿ ಭೂತಗಳ ಕೋಣೆ. ಅವಕ್ಕೆ ದಿನಾಲೂ

ದೀಪ ಉರಿಸಬೇಕಾಗಿತ್ತು. ಆದಕ್ಕೆ ಹಾಗಿ ತೆಂಕುದಿಕ್ಕಿಗೆ ಮುಖ ಮಾಡಿಕೊಂಡಿರುವುದು ಕೋಟಿಸೆಟ್ಟರ ಮನೆ. ಆದರೊಳಗೆ ಅಡಿಗೆಮನೆ, ಪಡಸಾಲೆ, ಜಮೆ ಉಗ್ರಾಣ—ಇವೆಲ್ಲ ಇದ್ದುವು. ಬಡಗು ದಿಕ್ಕಿನಲ್ಲಿ ಕೊಟ್ಟಿಗೆಗಳು. ಇವುಗಳು ಬೇಸಾಯದ ಕೆಲಸಕ್ಕೆ ಮೀಸಲಾಗಿಟ್ಟವುಗಳು. ಅಲ್ಲಿಯೇ ಭತ್ತದ ಜಮೆ. ಮೂಡು ದಿಕ್ಕಿನಲ್ಲಿ ಅಂಗಳದಿಂದ ಹೊರಗೆ ಹೋಗುವ ದೊಡ್ಡ ಬಾಗಿಲು. ಮನೆಯ ಹಿಂಭಾಗದಲ್ಲಿ ಹಟ್ಟಿ. ಅದರ ಬಳಿಯಲ್ಲೇ ಬಚ್ಚಲು ಕೊಟ್ಟಿಗೆ. ಸೆಟ್ಟರು ಮತ್ತು ಅವರ ಹೆಂಡತಿ ಯಾವಾಗಲೂ ಮಲಗುವುದು ಮನೆಯ ಪಡಸಾಲೆಯಲ್ಲಿ. ನಾರಾಯಣಸೆಟ್ಟರು ಮದುವೆಯಾಗುವ ಮೊದಲು ಚಾವಡಿಯ ಜಗುಲಿಯಲ್ಲೇ ಮಲಗುತಿದ್ದವರು, ಮದುವೆಯಾದ ಬಳಿಕ ಮಾಳಿಗೆಯ ಮೆಟ್ಟಲಿನ ಅಡಿಯ ಕೋಣೆಯನ್ನು ಅವರಿಗೆ ಕೋಟಿಸೆಟ್ಟರು ಬಿಟ್ಟಿದ್ದರು. ಲಿಂಗಮ್ಮ ಒಬ್ಬಳಿರುವಾಗ ಅಡುಗೆಯ ಕೋಣೆಯಲ್ಲೇ ಒಂದು ಮೂಲೆಯಲ್ಲಿ ಮಲಗುತಿದ್ದಳು.

ರಾತ್ರಿ ಮನೆ ಕಾಯಲು ಸೆಟ್ಟರೊಡನೆ ಎರಡು ನಾಯಿಗಳು ಹಿಂದೆ ಇದ್ದುವು. ಒಂದು ನಾಯಿ ಪ್ರಾಯವಾಗಿ ಸತ್ತುಹೋಯಿತು. ಇನ್ನೊಂದು ನಾಯಿಯನ್ನು ಹುಲಿ ಕೊಂಡು ಹೋಯಿತು. ಮತ್ತೆ ಒಂದು ಮರಿಯನ್ನು ನಾರಾಯಣಸೆಟ್ಟರು ತಂದು ಸಾಕಿದ್ದರು. ಅದು ಅವರು ದೂಮ ಪೂಜಾರಿಯಲ್ಲಿಗೆ ಹೊರಟು ಹೋಗುವಾಗ ಅವರ ಬೆನ್ನು ಹಿಡಿದುಕೊಂಡು ಹೋಗಿ ಕೊನೆಗೆ ಅಲ್ಲಿಂದ ದೇಜುಪೂಂಜರಲ್ಲಿಗೆ ತೆರಳಿ ಅಲ್ಲಿಯೇ ನೆಲೆಸಿತ್ತು.

ಹೀಗಾಗಿ ನಾರಾಯಣಸೆಟ್ಟರ ಯೋಜನೆಗೆ ಯಾವ ಆತಂಕವೂ ಬಂದೊದಗುವಂತಿರಲಿಲ್ಲ. ಮಧ್ಯರಾತ್ರಿಯಾಗುವಾಗ ಸೆಟ್ಟರು ಹೊರಗಿಂದ ಕೆಮ್ಮಿದರು. ಲಿಂಗಮ್ಮ ತುಸು ಹೊತ್ತು ಕಾದು ಮೆಲ್ಲಗೆ ಅಡುಗೆಕೋಣೆಯಿಂದೆದ್ದು ಹೊರಗೆ ಹೋಗಿ ಶಬ್ದವಾಗದಂತೆ ಹೊರಗಿನ ಬಾಗಿಲಿನ ಚಿಲಕ ತೆಗೆದು ಒಳಗೆ ಬಂದಳು. ಅವಳು ಒಳಗೆ ಬರುವಾಗ ಕೋಟಿಸೆಟ್ಟರು ಅರೆನಿದ್ದೆಯಲ್ಲಿ "ಯಾರದು?" ಎಂದರು. ಲಿಂಗಮ್ಮ ಇಳಿದ ದನಿಯಲ್ಲಿ "ನಾನು" ಎನ್ನುತ್ತ ಅಡುಗೆ ಕೋಣೆ ಸೇರಿದಳು.

ಅರ್ಧ ಗಂಟೆ ಕಳೆದಿರಬಹುದು. ನಾರಾಯಣಸೆಟ್ಟರು ಒಂದೊವರೆ ಕುಪ್ಪಿ ಶರಾಬು ಕುಡಿದಿದ್ದರೂ ಅವರ ಹೆದರಿಕೆ ಸಂಪೂರ್ಣವಾಗಿ ಮಾಯವಾಗಿ

ರಲಿಲ್ಲ. ಕೈಯಲ್ಲಿ ಮದ್ದು ತುಂಬಿಸಿದ ಕೋವಿಯಿತ್ತು. ಆದರೆ ಅದು ನಡು ಗುತಿತ್ತು. ದೂಮ ಪೂಜಾರಿಯೊಡನೆ ಒಂದೂವರೆ ಮೊಳ ಉದ್ದದ ನಾಲ್ಕು ಬೆರಳು ಅಗಲದ ಹರಿತವಾದ ಕತ್ತಿ ಇತ್ತು. ಕೋಚ ಬ್ಯಾರಿ ಕೈಯ್ಯಲ್ಲಿ ಉದ್ದವಾದ ಕಬ್ಬಿಣದ ಸರಳೊಂದಿತ್ತು. ದೇವು ಮೂಲ್ಯ ಮರದ ದೊಣ್ಣೆ ಯೊಂದನ್ನು ಹಿಡಿದುಕೊಂಡಿದ್ದ.

ದೂಮ ಪೂಜಾರಿ ಸೆಟ್ಟರನ್ನು ಹುರಿದುಂಬಿಸಿದ. "ನೀವು ಮುಂದೆ ಹೋಗಿ. ಬಾಕಿ ಎಲ್ಲ ನಾವು ನೋಡುತ್ತೇವೆ" ಎಂದು ಹೇಳಿದ.

ಕೊನೆಗೆ ಸೆಟ್ಟರು ಮನಸನ್ನು ಗಟ್ಟಿಮಾಡಿ ಮೆಲ್ಲನೆ ಅಂಗಳದ ಬಾಗಿ ಲನ್ನು ಹೊರಗಿನಿಂದ ನೂಕಿದರು. ಬಾಗಿಲು ತೆರೆಯುವಾಗ ಸ್ವಲ್ಪ ಸದ್ದಾ ಯಿತು. ಸೆಟ್ಟರು ಫಕ್ಕನೆ ಹಿಂದೆ ಸರಿದರು. ಮತ್ತೆ ಸ್ವಲ್ಪ ಹೊತ್ತು ಕಳೆದ ಮೇಲೆ ಅಂಗಳದ ಒಳಗೆ ಹೋದರು. ಅಲ್ಲಿರುವಾಗಲೇ ಮನೆಯ ಬಾಗಿಲನ್ನು ತೆರೆದ ಸದ್ದಾಯಿತು. ಸೆಟ್ಟರಾಗ ಕೊಟ್ಟಿಗೆಯೊಳಗೆ ಸೇರಿ ಅವಿತುಕೊಂಡರು. ಅದು ಬಂದುದು ಅವರ ಅತ್ತೆ. ಕೈಯಲ್ಲೊಂದು ಉರಿಯುವ ಚಿಮಣಿದೀಪ ವಿತ್ತು. ಅವಳು ನಾರಾಯಣಸೆಟ್ಟರಿರುವ ದಿಕ್ಕಿಗೇ ಬರುತ್ತಿರುವುದನ್ನು ಕಂಡು ಅವರು ಕಂಬದ ಮರೆಯಲ್ಲಿ ಕುಗ್ಗಿ ನಿಂತರು. ಆದರೆ ಅವಳು ಅಲ್ಲೇ ಬದಿ ಯಲ್ಲಿ ಮೂತ್ರಶಂಕೆ ಮಾಡಿ ಹಿಂದಿರುಗಿದಳು.

ಮನೆಯೊಳಗೆ ದೀಪ ನಂದಿಸಿ ಅತ್ತೆ ಮಲಗಿ ಸ್ವಲ್ಪ ಹೊತ್ತು ಕಳೆದಾಗ ಲಿಂಗಮ್ಮ ಹೊರಗೆ ಬಂದಳು. ನಾರಾಯಣಸೆಟ್ಟರು ಇದೇ ಉತ್ತಮ ಸಮ ಯವೆಂದು ತಾವು ಅವಿತಿದ್ದಲ್ಲಿಂದ ಹುಲಿಯಂತೆ ಕೆಳಗೆ ನೆಗೆದು ಮನೆಯೊಳಗೆ ನುಗ್ಗಿದರು. ಒಳಗೆ ಪೂರ್ಣ ಕತ್ತಲೆ. ಹೋದವರೇ ಕೋವಿಯ 'ಕುದುರೆ' ಯನ್ನು ಎಳೆದು ಅದರ ಕೀಲನ್ನು ಜಗ್ಗಿದರು. 'ಡಪ್' ಎಂದಿಷ್ಟೇ ಅದರ ಸಪ್ಪಳ ಬಂತಲ್ಲದೆ ಅದು ಸಿಡಿಯಲಿಲ್ಲ. ಮತ್ತೊಂದು 'ಕೇಪ'ನ್ನು ಕಿಸೆ ಯಿಂದ ತೆಗೆದು ಇಡುವುದರೊಳಗೆ ಅವರ ಅತ್ತೆ ಎಚ್ಚರವಾಗಿ ಹೊರಳಾಡುತ್ತಿ ದ್ದಳು. ಎರಡನೆಯ ಸಲ ಕೋವಿಯ ಮದ್ದು ಸಿಡಿಯಿತು. ಅವರ ಅತ್ತೆಯ ಬೊಬ್ಬೆಯಾಯಿತು. ಆದರೆ ಅವಳಿಗೆ ಏಳಲಾಗಲಿಲ್ಲ.

ಕೋಟಿಸೆಟ್ಟರು ಈ ಶಬ್ದಕ್ಕೆ ಬೆಚ್ಚಿಬಿದ್ದು ತನ್ನ ತಲೆದಿಂಬಿನ ಅಡಿಯ ಲ್ಲಿದ್ದ ತಲವಾರನ್ನು ತೆಗೆದುಕೊಂಡು ಎದ್ದುನಿಂತರು. ಅಷ್ಟರಲ್ಲೇ ದೂಮ

ಪೂಜಾರಿ ಮತ್ತು ಕೋಚ ಬ್ಯಾರಿ ಮನೆಯೊಳಗೆ ನುಗ್ಗಿದರು. ಲಿಂಗಮ್ಮ ಮೆಲ್ಲನೆ ಚಿಮಣಿ ದೀಪ ಹಿಡಿದುಕೊಂಡು ಹೊರಗಿಂದ ಬಂದಳು. ಆ ದೃಶ್ಯ ಭಯಾನಕವಾಗಿತ್ತು. ಕೋಟಿಸೆಟ್ಟರ ಹೆಂಡತಿಯ ಕುತ್ತಿಗೆಯಿಂದ ರಕ್ತ ಹೊರಗೆ ಚಿಮ್ಮುತಿತ್ತು. ಹಾಸಿಗೆಯೆಲ್ಲ ರಕ್ತಮಯವಾಗಿತ್ತು. ಕೋಟಿ ಸೆಟ್ಟರ ಮೈಮೇಲೂ ರಕ್ತ ಚೆಲ್ಲಿತ್ತು. ಅವರ ಕೈಯಲ್ಲಿದ್ದ ತಲವಾರು ಫಳ ಫಳನೆ ಹೊಳೆಯುತಿತ್ತು. ನಾರಾಯಣಸೆಟ್ಟರ ಕೋವಿ ಖಾಲಿ. ಆದರೆ ಅವರ ಸೊಂಟದಲ್ಲಿ ದೂಮ ಪೂಜಾರಿ ಕೊಟ್ಟಿದ್ದ ತಲವಾರೊಂದಿತ್ತು. ಕೋಟಿ ಸೆಟ್ಟರಿಗೆ ಈ ಮೂರೂ ಮಂದಿಯನ್ನು ಕಂಡು ರಕ್ತ ಹೆಪ್ಪುಗಟ್ಟಿತಾದರೂ ಅವರು ಸಾಹಸ ಮಾಡಿ ತಪ್ಪಿಸಿಕೊಳ್ಳಲು ಯತ್ನಿಸಿದರು. ಹೆಚ್ಚಿನ ಯೋಚ ನೆಗೆ ಅಲ್ಲಿ ಅವಕಾಶವಿರಲಿಲ್ಲ. ಅವರು ಒಮ್ಮೆಲೇ ನಾರಾಯಣಸೆಟ್ಟರ ಎದು ರಿಗೆ ನೆಗೆದು ತಲವಾರನ್ನು ಬೀಸಿದರು. ಅದರ ಬಾಯಿ ನಾರಾಯಣಸೆಟ್ಟರ ಭುಜವನ್ನು ಹಾಯ್ದು ಹೋಯಿತು. ಅಷ್ಟರಲ್ಲಿ ನಾರಾಯಣಸೆಟ್ಟರೂ ಜೀವ ದಾಶೆ ಬಿಟ್ಟು ಅವರ ತಲವಾರನ್ನು ಬೀಸಿದರು. ಅದು ಕೋಟಿಸೆಟ್ಟರ ರಟ್ಟೆಗೆ ಬಿತ್ತು. ಗಾಯದಿಂದ ರಕ್ತ ಸುರಿಯುತಿದ್ದಂತೆಯೇ ಕೋಟಿಸೆಟ್ಟರು ಮುಂದೆ ಮುಂದೆ ಬರುತ್ತ ತಲವಾರನ್ನು ಬೀಸಿದರು. ಅಷ್ಟರಲ್ಲಿ ಹೊರಗೆ ನಿಂತಿದ್ದ ದೇವು ಮೂಲ್ಯ ಕಿಟಕಿಯ ಸರಳುಗಳೆಡೆಯಿಂದ ದೊಣ್ಣೆಯಲ್ಲಿ ಅವರ ತಲೆ ಗೊಂದು ಏಟಿಟ್ಟ. ಸೆಟ್ಟರಿಗೆ ಕಣ್ಣು ಕತ್ತಲೆ ಹೋದಂತಾಯಿತು. ಆಗ ದೂಮ ಪೂಜಾರಿ ಒಮ್ಮೆಯೇ ಹಾರಿ ಅವರ ಕುತ್ತಿಗೆಯನ್ನು ಅವರ ಕತ್ತಿ ಯಿಂದ ಕಡಿದ. ಕೋಚ ಬ್ಯಾರಿಯ ಸರಳು ಅಷ್ಟರಲ್ಲಿ ಕೋಟಿಸೆಟ್ಟರ ತಲೆ ಯನ್ನು ಒಡೆಯಿತು.

ಕೋಟಿಸೆಟ್ಟರ ಹೆಂಡತಿಯ ಕಣ್ಣು ಇನ್ನೂ ತೆರೆದೇ ಇತ್ತು. ಅವಳು ಇನ್ನೂ ಜೀವದಲ್ಲಿದ್ದಾಳೆಂದು ಕೋಚ ಬ್ಯಾರಿ ಅವಳ ಮುಖಕ್ಕೊಂದು ಏಟ ನ್ನಿತ್ತ. ಅವಳ ಬಾಯಿಯಿಂದ ಏನೊಂದೂ ಶಬ್ದ ಹೊರಡಲಿಲ್ಲ. ಈ ಶವ ಗಳೆರಡನ್ನು ನೋಡಿ ದೂಮ ಪೂಜಾರಿಯ ಹುರುಪು ನೆತ್ತಿಗೇರಿತು. ಅವನ ಕತ್ತಿಯನ್ನು ತೆಗೆದುಕೊಂಡು ಕೋಟಿಸೆಟ್ಟರ ದೇಹವನ್ನು ಚನ್ನಾಗಿ ಕೊಚ್ಚಿದ. ಕೋಚ ಬ್ಯಾರಿ ಕೋಟಿಸೆಟ್ಟರ ಹೆಂಡತಿಯ ಸೀರೆ ರವಕೆಗಳನ್ನು ಬಿಚ್ಚಿ ಅವಳ ಕಿವಿಗಳಲ್ಲಿ, ಕುತ್ತಿಗೆಯಲ್ಲಿ ಮತ್ತು ಕೈಗಳಲ್ಲಿದ್ದ ಚಿನ್ನಾಭರಣಗಳನ್ನು ಕಿತ್ತು

ತೆಗೆದ. ಕೋಟಿಸೆಟ್ಟರ ಸೊಂಟದಲ್ಲಿದ್ದ ಭಂಗಾರದ ನೂಲು ದೂಮ ಪೂಜಾರಿಯ ಸೊಂಟಕ್ಕೆ ಹೋಯಿತು. ಅವರ ಕಿವಿಯಲ್ಲಿದ್ದ ವಜ್ರದ 'ಒಂಟಿ' ಗಳನ್ನು ದೇವು ಮೂಲ್ಯ ಕಿಸೆಗೆ ಹಾಕಿದ.

ಲಿಂಗಮ್ಮ ಎಲ್ಲವನ್ನೂ ಅಡುಗೆ ಕೋಣೆಯ ಕಿಟಕಿಯ ಅಂಚಿನಿಂದ ನೋಡುತಿದ್ದಳು. ನಾರಾಯಣಸೆಟ್ಟರು ಮಾವನ ಹಾಸಿಗೆಯಡಿಯಿಂದ ಬೀಗದ ಕೈಗಳ ಗೊಂಚಲನ್ನು ತೆಗೆದು ಒಳಗೆ ಪೆಟ್ಟಿಗೆಗಳನ್ನು ಶೋಧಿಸಿ ಕಿಸೆ ತುಂಬ ಹಣವನ್ನು ತುಂಬಿಸಿದರು. ಮತ್ತೆ ಹೆಣಗಳನ್ನು ಮರೆ ಮಾಡುವ ಸಮಸ್ಯೆಯೊಂದೇ ಉಳಿಯಿತು

ದೂಮ ಪೂಜಾರಿ ಅದಕ್ಕೆ ಬೇಕಾದ ವ್ಯವಸ್ಥೆ ಮಾಡಿದ. ದೂರದ ಒಂದು ಬೆಟ್ಟುಗದ್ದೆಯಲ್ಲಿ ಐದು ಜನರೂ ಒಣಗಿದ ಕಟ್ಟಿಗೆಯನ್ನು ಕೊಂಡು ಹೋಗಿ ರಾಶಿ ಹಾಕಿದರು. ಅಲ್ಲಿಗೇ ಹೆಣಗಳನ್ನು ಸಾಗಿಸುವುದೆಂದು ಯೋಚಿಸುವಾಗ ಕೋಚ ಬ್ಯಾರಿ ಮತ್ತೊಂದು ಉಪಾಯ ಹೇಳಿದ: ಹೆಣಗಳಿಗೆ ಬಿಳೀ ಬಟ್ಟೆ ಹಾಕಿ ಹೊರಗೆ ಮಲಗಿಸಬೇಕಂತೆ. ಮುಖ ಮಾತ್ರ ಅರ್ಧಂಬರ್ಧ ಕಂಡರೆ ಸಾಕಂತೆ. ಬೆಳಿಗ್ಗೆ ಊರವರನ್ನು ತರಿಸಿ ವಾಂತಿಭೇದಿಯಲ್ಲಿ ಸತ್ತು ಹೋದರೆಂದು ಹೇಳಿದರಾಯಿತು. ಮತ್ತು ದಹನಕ್ಕೆ ಏನೂ ತೊಂದರೆಯಿಲ್ಲ.

ಕೋಚ ಬ್ಯಾರಿಯ ಯೋಜನೆಯನ್ನೇ ಉಳಿದವರೂ ಅಂಗೀಕರಿಸಿದರು, ಮರುದಿನ ನಾರಾಯಣಸೆಟ್ಟರು ಊರ ಜಾತಿ ಗೃಹಸ್ಥರಲ್ಲಿಗೆ ಹೊಲೆಯರ ಮೂಲಕ ಕೋಟಿಸೆಟ್ಟರು ಮತ್ತು ಅವರ ಹೆಂಡತಿ ವಿಪರೀತ ಕಾಹಿಲೆಯಲ್ಲಿರುವರೆಂದು ಹೇಳಿಕಳಿಸಿದರು. ಊರವರು ಬರುವಾಗ ಹೆಣಗಳನ್ನು ಮೀಯಿಸಿ ಬಿಳೀ ವಸ್ತ್ರಗಳನ್ನು ಮುಸುಕು ಹಾಕಿ ಹೊರಗೆ ಮಲಗಿಸಿದ್ದರು. ನಾರಾಯಣಸೆಟ್ಟರ ಮತ್ತು ಲಿಂಗಮ್ಮನ ಕೂಗಿಗೆ ದಿಕ್ಕೇ ಇಲ್ಲ. ಅವರು ರಕ್ತ ಬಿದ್ದ ಹಾಸಿಗೆ ವಸ್ತ್ರಗಳನ್ನು ಬೆಳಗಾಗುವುದರೊಳಗೇ ಸುಟ್ಟಾಗಿತ್ತು.

ದೇಜುಪೂಂಜರೂ ಹೆಣ ತೆಗೆಯುವ ವೇಳೆ ಬಂದಿದ್ದರು. ಎಲ್ಲರೂ ಕೂಡಿ ಹೆಣಗಳನ್ನು ಹೊತ್ತುಕೊಂಡು ಬೆಟ್ಟುಗದ್ದೆಗೆ ಕೊಂಡು ಹೋದರು. ಅಲ್ಲಿ ಹೊಲೆಯರು ಮೊದಲೇ ಕಟ್ಟಿಗೆಯ ಚಿತೆಗಳನ್ನೇರ್ಪಡಿಸಿದ್ದರು. ಹೆಣ

ಗಳೆರಡೂ ಸ್ವಲ್ಪ ನಾರುತಿದ್ದವು. ಆದರೆ ಬೆಂಕಿಯ ನಾಲಿಗೆಯಲ್ಲಿ ಅವೆರಡೂ ನಾಮಾವಶೇಷವಾದುವು.

ಊರ ಕೆಲವರಿಗೆ ಇಂಥ ಆಕಸ್ಮಿಕ ಮರಣ ಸಂಶಯವನ್ನುಂಟು ಮಾಡಿತು. ಸೆಟ್ಟರು ಸತ್ತ ಏಳೆಂಟು ದಿನಗಳಲ್ಲಿ ಪೋಲೀಸರು ಕೂಡಾ ಬಂದು ತನಿಖಿ ನಡಿಸಿದರು. ಆದರೆ ಖೂನಿ ನಡೆದಿತ್ತೆಂಬುದಕ್ಕೆ ಯಾವ ಆಧಾರವೂ ಅವರಿಗೆ ದೊರೆಯಲಿಲ್ಲ. ನಾರಾಯಣಸೆಟ್ಟರು ಆಗ ಬಹಳ ವಿವೇಕದಿಂದ ವರ್ತಿಸಿದರು. ಬಂದ ಬಂದ ಪೋಲೀಸರಿಗೆಲ್ಲ ಯೋಗ್ಯ ಉಪಚಾರ ನಡೆಸಿ, ಅವರು ಹೋಗುವಾಗ ಸ್ವಲ್ಪ ಹಣದ ಕಾಣಿಕೆಯನ್ನು ಕೂಡಾ ಕೊಡದಿರುತಿದ್ದಿಲ್ಲ. ಹೀಗಾಗಿ ಈ ಘಟನೆ ನಡೆದ ಒಂದು ತಿಂಗಳಲ್ಲೇ ಎಲ್ಲವೂ ಶಾಂತವಾಯಿತು. ಊರಿನ ಸಮಾಜ, ಸೆಟ್ಟರು ನೆರವೇರಿಸಿದ ದೊಡ ಬೊಜ್ಜದ ಸಂತರ್ಪಣೆಯನ್ನುಂಡು ಕೋಟಿಸೆಟ್ಟರನ್ನು ಕೊನೆಯ ಸಲ ನೆನೆಯಿತು.

ಮತ್ತೆ ನಾರಾಯಣ ಸೆಟ್ಟರು ತನ್ನಿಂದ ತಾನೇ ಯಜಮಾನರಾದರು.

—ಈ ಅದೃಷ್ಟ ಪರೀಕ್ಷೆಯ ಕತೆಯನ್ನು ಕೋಚಣ್ಣ ರೈಗಳು ಸಂಜೀವನಿಗೆ ಸವಿವರವಾಗಿ ಸ್ವಾರಸ್ಯಮಯವಾಗಿ ವರ್ಣಿಸಿದರು. ಸಂಜೀವ ಕೊನೆಯವರೆಗೂ ತಲೆದೂಗಿದ್ದನಲ್ಲದೆ ಪಿಟ್ಟೆಂದು ತುಟಿಯೆತ್ತಲಿಲ್ಲ.

"ಗಾಯದ ಕೋಳಿಗೆ ಗಾಳಿ ಹಾಕಿ ಪೌರುಷ ಬರಿಸುವಂತೆ, ನಿನಗೇನಾದರೂ ನಾನು ಪ್ರೇರೇಪಿಸುತ್ತೇನೆಂದು ತಿಳಿಯಬೇಡ ಸಂಜೀವ. ನಾನು ಲೋಕದ ಪರಿಸ್ಥಿತಿಯನ್ನು ಮಾತ್ರ ಹೇಳಿದ್ದಷ್ಟೆ. ನಾನು ಹೇಳಿದ ಕತೆ ಅಕ್ಷರಶಃ ಸತ್ಯ ಇದನ್ನು ಸೆಟ್ಟರಲ್ಲದೆ ಇತರರು ಕೂಡಾ ಹೇಳುವುದನ್ನು ಕೇಳಿದ್ದೇನೆ" ಎನ್ನುತ್ತ ರೈಗಳು ಇನ್ನೊಂದು ಬೀಡಿಯನ್ನು ತುಟಿಗಿಟ್ಟು ಬೆಂಕಿ ಹಚ್ಚಿಸಿದರು.

ಪಾರ್ವತಿ ಆಗ ಇಬ್ಬರಿಗೂ ಒಂದೊಂದು ಲೋಟ ಕಾಫಿ ತಂದಿಟ್ಟು, ಒಳಗೆ ಹೋದಳು. ದೂರದಲ್ಲಿ ನಿಂತುಕೊಂಡಿದ್ದ ಬಾಬು "ನನಗಿಲ್ಲವೇ?" ಎಂದು ಪಾರ್ವತಿಯನ್ನು ಪ್ರಶ್ನಿಸಿದುದು ಸಂಜೀವನಿಗೆ ಕೇಳಿಸಿತು. ಮರುಗಳಿಗೆಯಲ್ಲೇ ಆವಳು ಅವನಿಗೂ ಒಂದು ಲೋಟ ಕಾಫಿಯನ್ನು ಕೊಡುತ್ತಿರುವುದನ್ನು ಅವನು ಅವನ ಭಾರವಾದ ಕಣ್ಣುಗಳಿಂದ ನೋಡಿದ.

# ಅಧ್ಯಾಯ ಒಂಬತ್ತು.

ರಾಮಪ್ಪಸೆಟ್ಟರು ಪೂವಕ್ಕೆಯಲ್ಲಿಗೆ ಊರಿಗೆ ಬಂದ ಏಳೆಂಟು ದಿನಗಳ ಬಳಿಕ ಬಂದರು. ಪೂವಕ್ಕೆಯ ಮೇಲೆ ಹಿಂದೆ ಅವರಿಗೆ ತುಂಬ ಪ್ರೀತಿ. ಅವರಿಗೆ ಅವಳೊಬ್ಬಳೇ ತಂಗಿ. ಮುಂಬಯಿಯಿಂದ ಬರುವಾಗ ಅವಳಿಗೆ ಹೊಸ ನಮೂನೆಯ ಸೀರೆ-ರವಕೆಗಳನ್ನು ಪ್ರತಿಸಲ ಅವರು ತಾರದಿಲ್ಲ. ಅದರೊಟ್ಟಿಗೆ ಅವರ ಹೋಟೇಲಲ್ಲೇ ಸಿಂಧಿಯವರಿಂದ ತಯಾರಿಸಲ್ಪಟ್ಟ ರುಚಿಕರವಾದ ಸಿಹಿ ತಿಂಡಿಗಳನ್ನು ಡಬ್ಬಿಯಲ್ಲಿ ತರುತಿದ್ದರು. ಪೂವಕ್ಕೆಯ ಗಂಡ ಮಂಜಣ್ಣರೈಗಳು ಸತ್ತಾಗ ಪೂವಕ್ಕೆಗೆ ಆಸ್ತಿಯ ಆಡಳಿತೆಯಲ್ಲಿ ತುಂಬಾ ಸಹಾಯಮಾಡಿದ್ದರಲ್ಲದೆ ಅವಳಲ್ಲಿ ಸೋಮಾರಿಯಾಗಿ ತಿಂದುಕೊಂಡಿದ್ದ ಕೋಚಣ್ಣರೈಗಳನ್ನು ಅವರು ಮನೆಯಿಂದ ಓಡಿಸಿದ್ದರು. ಪೂವಕ್ಕೆಗೂ ರೈಗಳಿಗೂ ಒಳ್ಳೆಯದುಂಟೆಂದು ಕೆಲವರು ಹೇಳಿದರೂ ಅವರು ಆ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಅವಳ ನಡತೆಯ ಮೇಲೆ ಅವರಿಗೆ ಅಷ್ಟು ವಿಶ್ವಾಸವಿತ್ತು. ಆದರೆ ಸಂಜೀವನಿಗೆ ಪಾರ್ವತಿಯನ್ನು ಮದುವೆಯಾದ ಬಳಿಕ ಅವರ ಅನ್ಯೋನ್ಯತೆ ಕುಸಿದು ಹೋಯಿತು. ಆದುದರಿಂದಲೇ ಅವರು ಮುಂಬಯಿಯಿಂದ ಬಂದವರು ಎಂದಿನಂತೆ ನೇರವಾಗಿ ತಂಗಿಯ ಮನೆಗೆ ಹೋಗದೆ ಅವರ ಹೆಂಡತಿಯ ಕುಟುಂಬದ ಮನೆಗೆ ಹೋಗಿದ್ದರು.

ಪೂವಕ್ಕೆಯೊಡನೆ ಮೇಲಿಂದ ಮೇಲೆ ಉಪಚಾರದ ಮಾತುಗಳನ್ನಾಡಿ ಸೆಟ್ಟರು ಸಂಜೆಹಿಂದೆ ಹೊರಡಲನುವಾದರು. ಪೂವಕ್ಕ ಅವರನ್ನು ಕೆಲದಿನ ಉಳಕೊಳ್ಳಬೇಕೆಂದು ಎಷ್ಟು ಹೇಳಿದರೂ ಕೇಳಲಿಲ್ಲ. ಕೊನೆಗೆ ಅವಳು ತನ್ನ ಮಕ್ಕಳ ಕುರಿತಾಗಿ ಹೇಳುತ್ತ ಗೊಳೋ ಎಂದು ಅತ್ತಳು. ಸೆಟ್ಟರಿಗೆ ಆಗ ಮನಸ್ಸು ಕರಗಿತು. ಹಾಗೆಯೇ ಒಂದೆರಡು ದಿನಗಳ ಮಟ್ಟಿಗೆ ಮಾತ್ರ ಉಳಕೊಳ್ಳುತ್ತೇನೆಂದು ನಿಂತರು.

ಎಷ್ಟು ಮಾತಾಡಿದರೂ ಸೆಟ್ಟರು ಸಂಜೀವನು ಎಲ್ಲಿ ಹೋಗಿದ್ದಾನೆಂದು ಕೇಳಲಿಲ್ಲ. ಕೊನೆಗೆ ಪೂವಕ್ಕೆಯೇ ಅವನು ಹೆಂಡತಿಯನ್ನು ಕರೆದುಕೊಂಡು ಬರಲು ಮಾವನ ಮನೆಗೆ ಹೋಗಿದ್ದಾನೆಂದಳು.

"ಓಹೋ! ಒಳ್ಳೆಯದು, ಮಾವನ ಮನೆಗೆ ಹೋಗಿದ್ದಾನೆಯೆ? ನಾನೂ ಎಲ್ಲಿದ್ದಾನೆಂದು ಕೇಳಬೇಕೆಂದಿದ್ದೆ" ಎಂದು ಸೆಟ್ಟರು ನುಡಿದರು.

"ಅವನ ಮಾವ ಸ್ವಲ್ಪ ಪ್ರತಾಪದ ಮನುಷ್ಯ. ಆದರೆ ಹುಡುಗಿ ತೀರಾ ದಡ್ಡಿ. ಒಂದಿಷ್ಟೂ ಕೆಲಸ ಮಾಡಲು ತಿಳಿಯದವಳು."

"ಓಹೋ" ಎಂದು ಸೆಟ್ಟರು ಮಾತು ನಿಲ್ಲಿಸಿದರು.

ಅವರಿಗೆ ಪೂವಕ್ಕನು ಸೊಸೆಯರನ್ನು ಹೇಗೆ ಕಾಣುತಿದ್ದಳೆಂಬುದು ಈ ಹಿಂದೆಯೇ ಸ್ಪಷ್ಟವಾಗಿತ್ತು. ಅವರು ದೇವಪ್ಪನ ಮದುವೆಗೆ ಬಂದವರು ಎರಡು ತಿಂಗಳು ಪೂವಕ್ಕನ ಮನೆಯಲ್ಲೇ ಉಳಕೊಂಡಿದ್ದರು. ಆಗ ಅವಳು ಸೊಸೆಯ ವೇಷ ಬದಲಾಯಿಸಿ, ಹೇಗೆ ಅವಳನ್ನು ದುಡಿತದ ಆಳಿನಂತೆ ಮಾಡಿಕೊಂಡಳೆಂಬುದನ್ನು ಅವರು ಕಣ್ಣಾರೆ ಕಂಡಿದ್ದರು. ಅಲ್ಲದೆ ರುಕುಮಿ ಬಡವರ ಕುಟುಂಬದವಳೆಂದೂ ಅವರಿಗೆ ಗೊತ್ತಿತ್ತು.

ಸೆಟ್ಟರಿಗೆ ತನ್ನ ಮಗಳು ಪ್ರೇಮಕುಮಾರಿಯನ್ನು ಸಂಜೀವನಿಗೆ ಕೊಡಬೇಕೆಂಬ ಇಚ್ಛೆಯಿದ್ದರೂ ಅವರಿಗೆ ಪೂವಕ್ಕನ ವರ್ತನೆಯನ್ನು ಕಂಡು ತುಸು ಬೇಸರ ಹುಟ್ಟಿತ್ತು. ಆದರೂ ಮದುವೆಯಾದ ಬಳಿಕ ಸಂಜೀವನನ್ನು ಹೇಗಾದರೂ ಮುಂಬಯಿಗೆ ಬರುವಂತೆ ಪ್ರೇರೇಪಿಸಬಹುದೆಂದು ನೆನೆಸಿದ್ದರು. ಈ ಕುರಿತು ಪೂವಕ್ಕನೊಡನೆ ಪ್ರಸ್ತಾಪಿಸಿಯೂ ಆಗಿತ್ತು. ಆದರೆ ಪೂವಕ್ಕ ಕೋಚಣ್ಣಗೈಗಳ ಮಾತಿಗೆ ಮರುಳಾದಳು. ಅಲ್ಲದೆ ಪೇಟೆಯಲ್ಲಿ ಬೆಳೆದ ಹುಡುಗಿಯರ ವಿಚಾರದಲ್ಲಿ ಅವಳಿಗೆ ತುಂಬ ಹೆದರಿಕೆಯೂ ಇತ್ತು.

ಸಂಜೆಯಾಗುವಾಗ ದೇವಪ್ಪನು ರುಕುಮಿಯನ್ನು ಕರೆದುಕೊಂಡು ಬಂದ. ಅಪರೂಪದಲ್ಲಿ ಬಂದ ಮಾವನನ್ನು ಕಂಡು ಬಹಳ ವಿನಯದಿಂದ ಮಾತನಾಡಿದ. ಪೂವಕ್ಕ ಮಾತ್ರ ಒಳಗೆ ಗೊಣಗುಟ್ಟುತಿದ್ದುದು ಸೆಟ್ಟರಿಗೆ ಕೇಳಿಬರುತ್ತಿತ್ತು. ದೇವಪ್ಪ ಅತ್ತೆಯ ಮನೆಗೆ ಹೋಗಿ ದಿನಗಳು ನಾಲ್ಕು ಕಳೆದಿದ್ದುವಂತೆ. ಇಷ್ಟು ವಿಳಂಬ ಮಾಡಿದರೆ ಲೋಕ ಹೇಗಾದೀತು? ಎನ್ನುತಿದ್ದಳು.

ದೇವಪ್ಪನೊಡನೆ ಸೆಟ್ಟರು ಊರಿನ ವಿಚಾರವೆಲ್ಲ ಕೇಳಿ ತಿಳಿದುಕೊಂಡಾಯಿತು. ಮೇಲ್ಮನೆ ಪಟೇಲ ದೇವರಾಜ ಹೆಗ್ಗಡೆಯವರ ಮಾವ ಸತ್ತುಹೋದುದಕ್ಕೆ ಬಹಳ ದೊಡ್ಡ ಅಭಿಷೇಕ ಮಾಡಿಸಿದ್ದರಂತೆ. ಈಗ ಅವರ

ಕಾರಭಾರ ವರ್ಣಿಸಲಳವಲ್ಲಂತೆ. ಹಟ್ಟಿಯಲ್ಲಿದ್ದ ಒಂದು ಜತೆ ಕಟ್ಟಿ ಹಾಕಿದ ಕೋಣಗಳೆಂದರೆ ಪರ ಊರಿಂದಲೂ ಬಹುಮಾನಗಳನ್ನು ತರುತ್ತಿದ್ದುವಂತೆ. ಅವರ ಗಾಡಿ ಎತ್ತುಗಳಿಗೆ ಸರಿತೂಗುವ ಎತ್ತುಗಳು ಇಡೀ ಮಂಗಳೂರು ತಾಲೂಕಿನಲ್ಲಿಯೇ ಇಲ್ಲವಂತೆ. ಮೊಸಿನ್ಕುಂಡಿಯ ಸೇಕ್ ಬ್ಯಾರಿ ಮಕ್ಕಕ್ಕೆ ಹೋಗಿ ಬಂದರಂತೆ. ಆದರೆ ಅವರ ವ್ಯಾಪಾರ ಬಿದ್ದುಹೋಗಿ ದಿವಾಳಿ ಹೋಗಲಿದ್ದಾರಂತೆ. ಶ್ಯಾನುಭಾಗ ಎಳಚಿತ್ತಾಯರ ಮಗ ಸುಬ್ರಮಣ್ಯ ಎಳ ಚಿತ್ತಾಯರು ಒಬ್ಬನನ್ನು ಕೊಂದು ಕರಿಸೀರು ಶಿಕ್ಷೆಗೊಳಗಾದರಂತೆ. ಗಾಬ್ರು ಸೋಜರ ಕಿರಿಯ ಮಗಳು ಸರ್ಪಿನ ಮನೆಯಲ್ಲಿದ್ದ ಆಭರಣಗಳನ್ನೆಲ್ಲ ದೋಚಿ ಕೊಂಡು ಕುಂಡ ಮೂಲ್ಯನ ಮಗನೊಡನೆ ಗಟ್ಟಕ್ಕೆ ಓಡಿಹೋದಳಂತೆ. ಮುಂದಿನ ವರುಷ ಬಿಕಿಮೇಲು ಕಾಂತಪ್ಪ ಪೂಜಾರಿಗಳಲ್ಲಿ ಧರ್ಮನೇಮ ನಡೆ ಯಲಿರುವುದಂತೆ. —ಹೀಗೆ ದೇವಪ್ಪನೊಡನಿದ್ದ ಊರವರ ಸುದ್ದಿಗೆ ಲೆಕ್ಕ ವಿರಲಿಲ್ಲ.

ಅವನ ಮಾತಿನೆಡೆಯಲ್ಲಿ ಸೆಟ್ಟರು ಅವನ ಅತ್ತೆ ಮಾವಂದಿರು ಹೇಗಿ ದ್ದಾರೆಂದು ಕೇಳಿದರು. ದೇವಪ್ಪ ಆಗ ಒಮ್ಮೆಲೇ ನಿರ್ವಿಣ್ಣನಾಗಿ "ಹಾಗೆ ಇದ್ದಾರೆ" ಎಂದ.

ಮತ್ತೆ ಸೆಟ್ಟರು ನಾರಾಯಣಸೆಟ್ಟರ ಕುರಿತು ವಿಚಾರಿಸಿದರು. ದೇವಪ್ಪ ಅವರು ಬಹಳ ಒಳ್ಳೆಯವರೆನ್ನುತ್ತ ಅವರಿಗೆ ಇಂತಿಷ್ಟೇ ಮುಡಿ ಬಯಲುಗದ್ದೆ, ಇಂತಿಷ್ಟೇ ಮುಡಿ ಬೆಟ್ಟಗದ್ದೆ, ಇಂತಿಷ್ಟೇ ಮುಡಿ ಮಜಲು ಗದ್ದೆಗಳಿವೆಯೆಂದು ವಿವರಿಸಿದ. ಸೆಟ್ಟರು ಒಂದು ತರಹದ ಠೀವಿಯಲ್ಲಿ ಅವನೆಂದುದಕ್ಕೆ ತಲೆ ದೂಗಿದರು.

"ನಿಮ್ಮ ಮಾವ ಹಿಂದೆ ತುಂಬೆಯಲ್ಲಿ ಇದ್ದುದಲ್ಲ?" ಸೆಟ್ಟರು ಮತ್ತೆ ಕೇಳಿದರು "ಈಗ ವಿಟ್ಲದಲ್ಲಿದ್ದಾರೆನ್ನುತ್ತಿಯಲ್ಲ?"

ದೇವಪ್ಪನಿಗೆ ತನ್ನ ಹೆಂಡತಿಯ ಮನೆಯ ಕುರಿತಾಗಿ ಯಾರಾದರೂ ಕೇಳುವುದೆಂದರೆ ತುಂಬ ನಾಚಿಕೆ. ಈಗ ಸೆಟ್ಟರು ಪುನಃ ಅದನ್ನೇ ಕೇಳು ವಾಗ ಅವನಿಗೆ ಸಿಡಿಲು ಬಡೆದಂತಾಯಿತು. ಆದರೂ ಸಂಕೋಚದಿಂದ "ಅವರು ವಿಟ್ಲಕ್ಕೆ ಬಂದು ಎರಡು ವರುಷಗಳು ಕಳೆದವು" ಎಂದ.

ದೇವಪ್ಪನ ಮಾವ ಕೂಕ್ರಸೆಟ್ಟರು ದೊಡ್ಡವರ ಕುಟುಂಬಕ್ಕೆ ಸೇರಿದ್ದ ವರು. ಆದರೆ ಆ ಕುಟುಂಬದ ಆಸ್ತಿಯೆಲ್ಲ ಎಂದೋ ಕಳೆದು ಹೋಗಿತ್ತು. ಆಸ್ತಿ ಹೋದೊಡನೆ ಕುಟುಂಬವು ಹರಿಹಂಚಾಗಿ ಹೋಯಿತು. ಕೂಕ್ರಸೆಟ್ಟ ರಿಗೆ ಇಪ್ಪತ್ತು ವರುಷವಾಗುವಾಗ ಅವರ ಪಾಲಿಗೆ ಕುಟುಂಬದ ಲೆಕ್ಕದಿಂದ ದೊರೆತುದು ಎರಡು ಜೋಡು ಎತ್ತುಗಳು, ಆರೇಳು ನೊಗ ಮತ್ತು ನೇಗಿಲು ಗಳು, ನಾಲ್ಕೈದು ಅಡುಗೆಯ ಪಾತ್ರೆಗಳು. ಮತ್ತೆ ಇನ್ನೂರು ರೂಪಾಯಿ ನಗದಿ ಮಾತ್ರ. ಆ ವರುಷವೇ ಒಂದುಕಡೆ ಐನತ್ತು ರೂಪಾಯಿ ಮುಂಗಡ ಕೊಟ್ಟು ಎರಡು ಮುಡಿ ಜಾಗೆಯನ್ನು ಗೇಣಿಗೆ ವಹಿಸಿಕೊಂಡರು. ಗೇಣಿ ಮುಡಿಗೆ ಎಂಟರಂತೆ ಇತ್ತು. ಗದ್ದೆಗಳೂ ಒಳ್ಳೆಯ ಫಲವತ್ತಾದವುಗಳು. ಮತ್ತೆ ಸುಮಾರು ಇಪ್ಪತ್ತೈದು ತೆಂಗಿನ ಮರಗಳೂ ಇದ್ದವು. ಅವುಗಳ ಗೇಣಿ ವರುಷಕ್ಕೆ ನೂರೈವತ್ತು ತೆಂಗಿನಕಾಯಿ. ಅವರ ಧನಿ ಧರ್ಮರಾಜ ಪೂವಣಿಗಳು. ಮೊದಲಿನವರೂ ತುಂಬಾ ರಿಯಾಯಿತಿ ತೋರಿಸಿದರು. ಆದುದರಿಂದ ಕೂಕ್ರಸೆಟ್ಟರು ಮರುವರುಷವೇ ಮದುವೆಯಾದರು.

ಧರ್ಮರಾಜ ಪೂವಣಿಗಳಿಗೆ ಪುಂಡತನದಲ್ಲಿ ಬಹಳ ಇಷ್ಟ. ಅವರಾಗಿ ಎಲ್ಲಿಯೂ ಕದಿಯಲು ಇಲ್ಲವೇ ಖೂನಿ ಮಾಡಲು ಹೋಗುವಂತಿರಲಿಲ್ಲ. ಆದರೆ ಅವರ ಮನೆಯಲ್ಲಿ ಯಾವಾಗಲೂ ಧೃಡಕಾಯರಾದ ಯುವಕರಿಗೆ ಸ್ವಾಗತವಿತ್ತು. ಹೆಚ್ಚಾಗಿ ಅವರೆಲ್ಲ ರಾತ್ರೆ ಊರವರ ಸಿಂಯಾಳ ಕದಿಯುವ ವರು. ಪೂವಣಿಗಳು ಎಲ್ಲಿಗೆ ಹೋಗುವುದಾದರೂ ನಾಲ್ಕೈದು ಜನ ಧಾಂಡಿ ಗರು ಅವರ ಹಿಂದೆ ಬೇಕೇಬೇಕು. ಮೂಡಬಿದ್ರೆಯ ಸಾಮಾನ್ಯ ಎಲ್ಲ ಕಾಫಿ ಹೋಟೇಲುಗಳಲ್ಲಿಯೂ ಅವರ ಲೆಕ್ಕಾಚಾರವಿತ್ತು. ಆರು ತಿಂಗಳಿ ಗೊಮ್ಮೆ ಲೆಕ್ಕವನ್ನು ತೀರಿಸುವಾಗ ಅವರಿಗೆ ನೂರಾರು ರೂಪಾಯಿಗಳು ಬೇಕಾಗುತಿದ್ದುವು. ಮತ್ತೆ ಕೆಲವರಿಗೆ ಚಿಲ್ಲರೆ ಚಿಲ್ಲರೆ ಸಾಲವನ್ನು ಕೊಡುತಿ ದ್ದರು. ಬೀಡಿ, ಕಾಫಿ, ಊಟ—ಇವು ಎಲ್ಲರಿಗೂ ಅವರಲ್ಲಿ ದೊರೆಯುತಿ ದ್ದುವು.

ಕೂಕ್ರಸೆಟ್ಟರು ಹೀಗೆ ಮದುವೆಯಾದ ಒಂದೆರಡು ವರುಷ ಧನಿಗಳೊ ಡನೆ ಬಹಳ ಸಲುಗೆಯಲ್ಲೇ ಕಳೆದರು. ಆದರೆ ತನ್ಮಧ್ಯೆ ಬೇರೆ ತರುಣರೊ ಡನೆ ಬೆಳೆಸಿದ ಸಂಪರ್ಕದಿಂದಾಗಿ ಕುಡಿಯುವ ಮತ್ತು ಜುಗಾರಿ ಆಡುವ ಚಟ

ಗಳನ್ನು ಕಲಿತರು. ಅವರ ಮನೆಯಲ್ಲಿ ನೆಮ್ಮದಿ ತಪ್ಪಿತು. ಯಾವಾಗಲೂ ಗಂಡಹೆಂಡರಿಗೆ ಜಗಳವೇ ಜಗಳ. ಆಗ ರುಕುಮಿಯೂ ಹುಟ್ಟಿದಳು.

ಕೂಕ್ರುಸೆಟ್ಟರು ಆ ಬಳಿಕ ಬಹಳ ವಿಲಾಸಮಯ ರೀತಿಯಲ್ಲಿ ಜೀವನ ಸಾಗಿಸತೊಡಗಿದರು. ಬೆಳಿಗ್ಗೆ ಎದ್ದೊಡನೆ ತಂಗಳನ್ನ ಉಣ್ಣುವುದರ ಬದಲು ಒಂದು ಮೈಲು ದೂರದಲ್ಲಿದ್ದ ಶೀನ ಕಂಮ್ತಿಯರ ಹೋಟೇಲಿಗೆ ಹೋಗಿ ಚಹ ಕುಡಿಯಲಾರಂಭಿಸಿದರು. ಮೊಣಕಾಲವರೆಗೆ ಸಾದಾ ವಸ್ತ್ರವನ್ನುಡುತಿದ್ದ ಅವರಿಗೆ ಈಗ ಉಡಲಿಕ್ಕೆ ಕೆಂಪು ವಸ್ತ್ರ ತೊಡಲಿಕ್ಕೆ ಕಪ್ಪು ಅಂಗಿಗಳಾದುವು. ಕಾಲಿಗೆ ಒಂದೂವರೆ ಅಂಗುಲ ದಪ್ಪದ 'ಜಂಯ್ಕ್ ಜಂಯ್ಕ್' ಎಂದು ಸ್ವರ ಬರುವ ಮೆಟ್ಟುಗಳಾದುವು. ಕೈಯಲ್ಲಿ ಚರ್ಮ ಕಟ್ಟಿದ ಒಂದು ತುಂಡುಬೆತ್ತ. ಸೊಂಟದಲ್ಲಿ ಒಂದು ಗೇಣುದ್ದದ ಚೂರಿ. ತಲೆಯ ಉದ್ದವಾದ ಜುಟ್ಟು ಹೋಗಿ ಕ್ರಾಪು ಇಡಲಾರಂಭಿಸಿದರು. ಬೆಳಿಗ್ಗೆ ಶೀನ ಕಂಮ್ತಿಯರಲ್ಲಿ ಚಹ ಕುಡಿಯುವಾಗಲೇ ಅವರ ಇತರ ಸ್ನೇಹಿತರು ಬರುವರು. ಕೂಡಲೇ ಇಸ್ಪೀಟು ಆಟ ಪ್ರಾರಂಭವಾಗುವುದು. ಮೊದಮೊದಲು ಕಾಫಿಯನ್ನು ಪಣ ತೊಟ್ಟು "ಜುಗಿ" ಆಡುತಿದ್ದರು. ಆಮೇಲೆ "ಸೆಟ್" ಗೆ ಇಳಿದರು. ಮತ್ತೆ "ಕಡಿಯುವುದು" ಮತ್ತು 'ಪರೆಲ್' ಆಡತೊಡಗಿದರು. ಒಮ್ಮೊಮ್ಮೆ ಹಣ ಸಿಗುತಿತ್ತು. ಒಮ್ಮೊಮ್ಮೆ ಹೋಗುತಿತ್ತು. ಅವರು ಕೆಲವು ದಿನ ಬರೇ ಚಹ ಮತ್ತು ಶೀನ ಕಂಮ್ತಿಯರ ಚಕ್ಕುಲಿಗಳಲ್ಲೇ ಜೀವಿಸಿದ್ದೂ ಇತ್ತು. ಒಮ್ಮೆ 'ಜೀತು' ಎದ್ದಿತೆಂದರೆ ಮತ್ತೆ ಅಲ್ಲಿಂದ ಏಳಲಿಕ್ಕೆ ಅವರಿಗೆ ಮನಸ್ಸು ಬಾರದು. ಅದರ ಮಧ್ಯೆ ಒಂದು-ಒಂದೂವರೆ ಡ್ರಾಮು ಶರಾಬನ್ನು ಕುಡಿಯುತಿದ್ದರು. ಕೆಲವೊಮ್ಮೆ ಅದರ ಮಿತಿ ತಪ್ಪುವುದೂ ಇತ್ತು. ಅವರ ಇತರ ಸ್ನೇಹಿತರ ಪೈಕಿ ಪಕೀರ ಬಂಡಾರಿ ತುಂಬಾ ಹತ್ತಿರದವ. ಕ್ಷೌರ ಮಾಡುವ ಸಾಮಾನುಗಳ ಪೆಟ್ಟಿಗೆ ಅವನ ಕೈಯಲ್ಲಿ ಯಾವಾಗಲೂ ನೇತಾಡುತಿದ್ದರೂ, ಅವನು ಮನಸ್ಸಿದ್ದರೆಮಾತ್ರ ಆ ಕೆಲಸ ಮಾಡುವವನು, ಇಲ್ಲವಾದರೆ ಶೀನ ಕಂಮ್ತಿಯರ ಹೋಟೇಲಿನ ಹಿಂದಿನ ಕೋಣೆಯೇ ಅವನಿಗೆ ಗತಿ. ಇನ್ನೊಬ್ಬ ಸುಲೇಮಾನ್ ಸಾಹೇಬ. ಅವನು ಮಂಚಿ ಎತ್ತುಗಳ ಗಾಡಿಯನ್ನು ಹೊಡೆಯುತಿದ್ದವನಂತೆ. ಈಗ ಅವನಿಗೆ ಮನೆ-ಮಠಗಳಿಲ್ಲ. ಎಲ್ಲಿ ಸಂತೆ, ಎಲ್ಲಿ ಜಾತ್ರೆಗಳಾಗುವುವೋ ಅಲ್ಲಿ ಸ್ವಾಬನಿಲ್ಲದೆ ಇಲ್ಲ. ಹೆಚ್ಚುಕಡಿಮೆ ಊರಿನ ಯುವಕ

ರಿಗೆಲ್ಲ ಅವನೇ ಜುಗಾರಿ ಆಟ ಕಲಿಸಿದವನೆಂದು ಹೇಳಬಹುದು.

ಮತ್ತೆ ಕೂಕ್ರಸೆಟ್ಟರಿಗೆ ಕೋಳಿ ಜೂಜಿನ ಹುಚ್ಚೂ ಬಹಳವಾಗಿತ್ತು. ಎಲ್ಲಿ ಕೋಳಿ ಜೂಜು ನಡೆಯುವುದಾದರೂ ಒಂದು ಹುಂಜವನ್ನು ಹಿಡಿದುಕೊಂಡು ಅವರು ಹೋಗದಿಲ್ಲ. ಅಲ್ಲಿ ಕೋಳಿಯ ಅಂಕದಲ್ಲಿ ಹಣ ಕಟ್ಟುತಿದ್ದರು. ಆದರಲ್ಲಿ ಹೋದರೆ ಜುಗಾರಿ ಆಟಕ್ಕಿಂತಲೂ ಹೆಚ್ಚಿಗೆ, ಬಂದರೂ ಅಷ್ಟೆ. ಸೆಟ್ಟರು ಆಬಗ್ಗೆ ಕುಕ್ಕುಟ ಪಂಚಾಂಗ ಇತ್ಯಾದಿಗಳನ್ನು ಶಾಮುಭಟ್ಟರಿಂದ ಶೋಧಿಸಿ ಇಂಥಿಂಥ ದಿನ ಇಂಥಿಂಥ ವರ್ಣದ ಕೋಳಿಗಳು ಗೆಲ್ಲುವುವೆಂದು ಸಿದ್ಧಾಂತ ಮಾಡಿಸಿದ್ದರು. ಅವರೊಡನಿದ್ದ ಕೋಳಿಗಳೂ ಚಿಲ್ಲರೆಯವಲ್ಲ. ಊರ ಹುಡುಗರು ಅವರು ಹೋಗುವುದನ್ನು ನೋಡಿದಾಕ್ಷಣ ಅಲ್ಲಿ ನಿಂತು:

" ಕತ್ತಿ ಕಠಾರಿ
ಕೋಟಿ ಪೂಜಾರಿ
ಕಟ್ಟದ ಕೋಾರಿ*
ರೊಟ್ಟಿಗ್† ಮಾರಿ "

—ಎಂದು ಬೊಬ್ಬೆ ಹಾಕುವರು. ಅಂದರೆ ಅಂಕದಲ್ಲಿ ಸತ್ತ ಕೋಳಿ ಮತ್ತೆ ಪದಾರ್ಥಕ್ಕೆ ಮಾತ್ರ ಯೋಗ್ಯವಾದುದೆಂಬರ್ಥ.

ಒಮ್ಮೆ ಸೆಟ್ಟರು ಮುದ್ದಾಡಿ ಜಾತ್ರೆಗೆ ಅವರ ' ಮೈಪ ' ಕೋಳಿಯನ್ನು ಕೊಂಡು ಹೋಗಿದ್ದರು. ಅದು ಬಿಳಿ ಮತ್ತು ನೀಲ ಗರಿಗಳುಳ್ಳ ದೊಡ್ಡ ಚೆಲುವಾದ ಕೋಳಿ. ಅದರ ಪ್ರಾಯ ಆಗ ಎರಡು ವರುಷ ದಾಟಿತ್ತು. ಕಂಡಕಂಡವರು ಆ ಕೋಳಿಯನ್ನು ಹೊಗಳಿ ಸೆಟ್ಟರೊಡನೆ ಅದರ ಕ್ರಯ ಕೇಳದಿಲ್ಲ. ಒಬ್ಬ ಕೋಳಿಯ ಹುಚ್ಚ ಇಪ್ಪತ್ತು ರೂಪಾಯಿಗಳನ್ನು ಸೆಟ್ಟರ ಕೈಯಲ್ಲಿಟ್ಟು ಆ ಕೋಳಿಯನ್ನು ಕೇಳಿದನಂತೆ! ಆದರೂ ಕೋಳಿಯನ್ನು ಸೆಟ್ಟರು ಕೊಡಲಿಲ್ಲ.

---

* ತುಳು ಪದ. ಕೋಳಿ ಎಂದರ್ಥ.

† ' ರೊಟ್ಟಿಗೆ ' ಎನ್ನುವುದರ ತುಳು ರೂಪಾಂತರ.

ಸೆಟ್ಟರ ಕೋಳಿ ಬಂದೊಡನೆ ಜಾತ್ರೆಗೆ ಕೋಳಿ ಜೂಜಿಗೆ ಬಂದಿದ್ದ ಅವರ ಗೆಳೆಯರೆಲ್ಲ ಒಂದುಗೂಡಿ ಅವರನ್ನು ಶರಾಬಿನ ಅಂಗಡಿಗೆ ಕರೆದು ಕೊಂಡು ಹೋದರು. ಅಲ್ಲಿ ಚನ್ನಾಗಿ ಕುಡಿದು ಜೂಜಿಗೆ ಪ್ರಾರಂಭಿಸಿದರು.

ಮುದ್ದಾಡಿಯ ಜಾತ್ರೆಯೆಂದರೆ ಊರಿನಲ್ಲೆಲ್ಲ ಪ್ರಸಿದ್ಧ. ಸುಗ್ಗಿಯ ಹುಣ್ಣಿಮೆಗೆ ಅಲ್ಲಿ 'ಆಯನ'. ಆ ವೇಳೆ ಮೂರು ದಿನಗಳ ಕೋಳಿಕಟ್ಟ. ಮತ್ತೆ ಚೆಂಡಾಟ. ಆದರೆ ಹೆಚ್ಚಿನವರು ಅಲ್ಲಿಗೆ ಹೋಗುತಿದ್ದುದು ಕೋಳಿ ಕಟ್ಟಕ್ಕೆಂದೇ. ಪ್ರತಿಯೊಬ್ಬರೂ ಹೆಚ್ಚಾಗಿ ಒಂದು ಕೋಳಿಯನ್ನಾದರೂ ಅಂಕಕ್ಕೆ ತಾರದಿಲ್ಲ. ಮತ್ತೆ ಸೆಟ್ಟರಂಥ ಜೂಜಿನ ವೃತ್ತಿಯವರಂತೂ ಅಲ್ಲಿ ಎರಡು ಮೂರು ದಿನಗಳ ಮುಂಚಿತವಾಗಿಯೇ ಹಾಜರಾಗುವರು. ಅಂಕದ ದಿನಗಳಲ್ಲಿ ದೇವಸ್ಥಾನದ ಮುಂದಿದ್ದ ಇಡೀ ಗದ್ದೆಯಲ್ಲಿ ಕೋಳಿಗಳ ಸ್ವರ ಮಾತ್ರ ಕೇಳಬರುವುದು. ಮಧ್ಯಾಹ್ನಕ್ಕೆ ಪ್ರಾರಂಭವಾದ ಜೂಜು ರಾತ್ರಿಯ ವರೆಗೂ ಮುಗಿಯುವಂತಿಲ್ಲ.

ಸೆಟ್ಟರ 'ವೈಪ' ಮೂರು ಕೋಳಿಗಳನ್ನು ಕೊಂದಿತು. ಆದರೆ ಅಷ್ಟ ರಲ್ಲಿ ಅದಕ್ಕೂ ಗಾಯವಾಗಿತ್ತು. ಎರಡು ಸಲ ಅದರ ಗಾಯವಾದ ಹೊಟ್ಟೆ ಯನ್ನು ಹೊಲಿದು ಹಾಳೆಯಿಂದ ಗಾಳಿ ಹೊಡೆಯಬೇಕಾಯಿತು. ಅದು ಗೆದ್ದುದರಿಂದ ಸೆಟ್ಟರಿಗೆ ಸ್ವಲ್ಪ ಹಣವೂ ಸಿಕ್ಕಿತು. ಅವರಿಗೆ ಆಮೇಲೆ ಕುಡಿದ ಶರಾಬನಿಂದಾಗಿ ರಾತ್ರೆ-ಹಗಲುಗಳ ಪರಿವೆ ಉಳಿಯಲಿಲ್ಲ. ಕತ್ತಲಾದ ಬಳಿ ಕವೂ ಒಬ್ಬನ ಕೋಳಿಯನ್ನು ಅಂಕಕ್ಕೆ ಆಹ್ವಾನಿಸಿದರು. ಅವರ 'ವೈಪ' ನೋವಿನಿಂದ ನರಳುತಿತ್ತಾದರೂ ಅವರು ಅದನ್ನು ಗಣ್ಯ ಮಾಡಲಿಲ್ಲ. ಸರಿ. ಎರಡು ಕೋಳಿಗಳ ಕಾಲುಗಳಿಗೂ ಹರಿತವಾದ ಚೂರಿಗಳನ್ನು ಕಟ್ಟಿಯಾ ಯಿತು. ಸೆಟ್ಟರೇ ವೈಪನನ್ನು ಅಂಕಕ್ಕೆ ಬಿಟ್ಟರು. ಎರಡು ನಿಮಿಷ ಹೊಡೆ ದಾಟವಾಯಿತು. ಎದುರಾಳಿ ಕೋಳಿಗೆ ಸ್ವಲ್ಪ ಗಾಯವಾಗಿ ರಕ್ತ ಸುರಿಯ ತೊಡಗಿತು. ಅದರ ಯಜಮಾನ ಅದಕ್ಕೆ ಗಾಳಿ ಬೀಸಿ ಪುನಃ ಹುರಿದುಂಬಿ ಸಿದ. ಎರಡನೆಯ ಅಂಕ ಬಹಳ ಕಠಿಣವಾಗಿತ್ತು. ಸೆಟ್ಟರ ಕೋಳಿ ಎದು ರಾಳಿಯ ಮೇಲೆ ಬಿದ್ದಾಗ ಅದರ ಕಾಲಿನಲ್ಲಿದ್ದ ಚೂರಿ ಎದುರಾಳಿಯ ರೆಕ್ಕೆಗೆ ಮಾತ್ರ ತಗಲಿತು. ಆಗ ಎದುರಾಳಿಯ ಚೂರಿ ಸೆಟ್ಟರ ವೈಪನ ಎದೆಗೆ ಪರಚಿತು. ಕೂಡಲೇ ಸೆಟ್ಟರು ಕೋಳಿಯನ್ನು ಹಿಂದೆ ಎಳೆದುಕೊಂಡರು.

ನೆರೆದಿದ್ದವರೆಲ್ಲ ಬೊಬ್ಬೆ ಹಾಕುತ್ತಿದ್ದರು. ಅವರಲ್ಲಿ ಹೆಚ್ಚಿನವರು ಒಂದಲ್ಲ ಒಂದು ಕೋಳಿಯ ಮೇಲೆ ಪಣ ಕಟ್ಟಿದವರು. ಕೋಳಿಗಳು ಹೊಡೆದಾಡುತ್ತಿದ್ದಾಗ ಅವರ ಕುತೂಹಲದ ಪ್ರೇರೇಪಣೆಗೆ ಪಾರವೇ ಇಲ್ಲ. ಇಬ್ಬರು ಮರದ ಕೋಲುಗಳಿಗೆ ವಸ್ತ್ರ ಸುತ್ತಿ ಚಿಮಣಿ ಎಣ್ಣೆಯಲ್ಲಿ ಅದ್ದ ಪಂಜು ಗಳನ್ನು ಹಿಡಿದಿದ್ದರು.

ಎರಡನೆ ಅಂಕವಾದ ಬಳಿಕವೂ ಸೆಟ್ಟರು ಹಿಂದೆ ಜಾರಲಿಲ್ಲ. ಕೋಳಿಯ ಎದೆಯನ್ನು ಸೂಜಿ ಮತ್ತು ನೂಲಿನಿಂದ ಹೊಲಿದರು. ಗಾಳೀ ಬೀಸಿದರು ಕಾಲು ಗಂಟೆಯಲ್ಲಿ 'ವೈಪ' ಪುನಃ ಎದ್ದು ನಿಂತು ಎದುರಾಳಿಯನ್ನು ಆಹ್ವಾನಿ ಸಿತು.

ಎದುರಾಳಿ ಕೇಳಿ ಮೆಲ್ಲನೆ ನೋಡುತ್ತಲೇ ಇತ್ತು. ' ವೈಪ ' ಅದರ ಮೇಲೆ ಹಾರಿದೊಡನೆ ಸಂಚಿನಂತೆಯೋ ಅದು ವೈಪನ ಎದೆಯನ್ನು ಕುತ್ತಿತು. ಜನರೆಲ್ಲ "ವೈಪ ಬಿಡಬೇಡ", "ಹ್ಹಾಂ ಅಡಿಗೆ ಬಿದ್ದ", "ಸರಿ ಯಾಗಿ ಕುತ್ತು", "ಹ್ಹಾಂ ಹ್ಹೂಂ" ಇತ್ಯಾದಿಯಾಗಿ ಬೊಬ್ಬಿಡುತ್ತಿದ್ದರು. ಸೆಟ್ಟರ 'ವೈಪ' ನ ಮೈಯಿಂದ ರಕ್ತ ಹೊರಚಿಮ್ಮುತ್ತಿದ್ದರೂ ಅದು ಸ್ವಲ್ಪಹಿಂದೆ ಬಂದು ಪುನಃ ಎದುರಾಳಿಯ ಮೇಲೆ ನೆಗೆಯಿತು. ಕೋಳಿಯ ಗರ್ವವೆಂದರೆ ಅಂಥ ಗರ್ವ. ಆಗ ಸೆಟ್ಟರು ಅದನ್ನು ಹಿಡಿಯಲು ಅದರ ಮೇಲೆ ಬಗ್ಗಿದರು. ಅಷ್ಟರಲ್ಲಿ ಎದುರಾಳಿ ಕೋಳಿ ವೈಪನ ಮೇಲೆ ನೆಗೆಯಿತು. ಅದರ ಕಾಲಿಗೆ ಕಟ್ಟಿದ್ದ ಕತ್ತಿ ಸೆಟ್ಟರ ಕೈಗೆ ತಾಗಿತು.

ಮುಗಳಿಗೆಯಲ್ಲೇ ರಕ್ತ ಚಿಮ್ಮುತ್ತಿತ್ತು. ಸೆಟ್ಟರ ಮಣಿಕಟ್ಟಿನ ಒಂದು ನರ ತುಂಡಾಗಿತ್ತು. ಕೆಲವೇ ನಿಮಿಷದಲ್ಲಿ ಸೆಟ್ಟರು ಬಿದ್ದುಬಿಟ್ಟರು. 'ವೈಪ' ಅಲ್ಲಿ ಅದರ ಕೊನೆಯುಸಿರನ್ನು ನೆಲದಲ್ಲಿ ಹೊರಳಾಡುತ್ತ ಬಿಡುತ್ತಿತ್ತು. ಸೆಟ್ಟರನ್ನು ಕೂಡಲೇ ನೆರೆದವರೆಲ್ಲ ಹೊತ್ತುಕೊಂಡು ಹೋಗಿ ಗಾಯದಿಂದ ರಕ್ತ ಹೊರಬರುವುದನ್ನು ನಿಲ್ಲಿಸಲು ಅನೇಕ ಕೈಕಂಡ ಪ್ರಯೋಗಗಳನ್ನು ನಡೆಸಿ ಕೊನೆಗೆ ಕೃತಾರ್ಥರಾದರು. ಆದರೆ ಸೆಟ್ಟರನ್ನು ಅವರ ಎಂಟು ಮೈಲಿ ದೂರದ ಮನೆಗೆ ಹೊತ್ತುಕೊಂಡು ಹೋದ ಬಳಿಕವೂ ಅರ್ಧ ದಿನ ಸ್ಮೃತಿ ಇರಲಿಲ್ಲ. ಮತ್ತೆ ಕೋಳಿಯ ಕತ್ತಿಯ ಘಾಯಕ್ಕೆ ಮದ್ದು ಮಾಡುವುದರಲ್ಲಿ ನಿಷ್ಣಾತನೆಂದೆನಿಸಿಕೊಂಡಿದ್ದ ಒಬ್ಬ ಹಳ್ಳಿಯ ವೈದ್ಯನ ಮದ್ದು ನಡೆಯಿತು.

ಸೆಟ್ಟರು ಆಗ ಮೂರನೇ ಬೆಳೆಗೆ ಬೀಜ ಹಾಕಿದ್ದರು. ಗದ್ದೆಗೆ ನೀರು ಆ ಸಮಯದಲ್ಲಿ ಏತದಲ್ಲಿ ಎಳೆದೇ ಆಗಬೇಕಷ್ಟೆ ಯಾವಾಗಲೂ ಅವರು ನೀರು ಎತ್ತಲಿಕ್ಕೆ; ಅವರ ಹೆಂಡತಿ ಮತ್ತು ಒಬ್ಬ ಹೊಲತಿ ನೀರು ಎಳೆಯುಲಿಕ್ಕೆ ಇದ್ದವರು. ಈ ವರುಷ ಸೆಟ್ಟರಿಗೆ ಏತದಲ್ಲಿ ನೀರು ತೆಗೆಯುವ ಕೆಲಸ ಬಿಟ್ಟು ಮಲಗಿದ್ದಲ್ಲಿಂದ ಏಳಲಿಕ್ಕಾಗಲಿಲ್ಲ. ಗಾಯ ದಿನದಿಂದ ದಿನಕ್ಕೆ ವಿಷಮಾವಸ್ಥೆಯನ್ನೇರುತಿತ್ತೇ ವಿನಃ ಗುಣಮುಖವಾಗಲಿಲ್ಲ. ಅದರ ವೇದನೆ— ಉರಿ–ಸೆಳೆತಗಳಿಂದಾಗಿ ಅವರ ಹೆಂಡತಿಗೆ ಮನೆಯಿಂದ ಹೊರಡುವುದು ಸಹ ಅಸಾಧ್ಯವಾಯಿತು. ಗದ್ದೆಯಲ್ಲಿ ಬೆಳೆದಿದ್ದ ಭತ್ತದ ಸಸಿಗಳು ಮೆಲ್ಲಮೆಲ್ಲನೆ ಹಳದಿಯಾಗುತ್ತ ಬಂದುವು. ಮಣ್ಣಿನಲ್ಲಿ ನೀರಿನ ಪಸೆ ಆರಿತು. ಕೆಲವು ದಿನ ಸೆಟ್ಟರ ಹೆಂಡತಿ ಕೆಲವು ಹೊಲೆಯರಿಂದ ಹೇಗಾದರೂ ನೀರು ಬಿಡಿಸಿದರು ಮತ್ತೆ ಅವರಿಗೆ ಮಜೂರಿ ಕೊಡಲು ಮನೆಯಲ್ಲಿ ಅಕ್ಕಿ ಮುಗಿಯುತ್ತ ಬಂದದ್ದರಿಂದ ಪೈರು ಬೆಳೆಸುವ ಕೆಲಸವನ್ನು ಬಿಟ್ಟೇ ಬಿಡಬೇಕಾಯಿತು. ಆದರೂ ಕೆಲವು ಭಾಗಗಳಲ್ಲಿ ಅಡಿನೀರಿನ ಬಲದಿಂದ ತೆನೆ ಬಂತು. ತೆನೆ ಹಣ್ಣಾಗುವಾಗ ಮಂಗಗಳು ಗದ್ದೆಯನ್ನೇ ಮುತ್ತಿ ಇಡೀ ಪೈರನ್ನೇ ನಾಶಮಾಡಿದುವಲ್ಲದೆ ತೆಂಗಿನ ಮರಗಳಲ್ಲಿದ್ದ ಎಳೆಯ ಸಿಂಯಾಳಗಳನ್ನೂ ತಿಂದುವು

ಮಳೆ ಬಂತು. ಭತ್ತದ ಸಸಿಗಳನ್ನು ನೆಡಲು ಊರವರು ಆರಂಭಿಸುತಿದ್ದರು. ಕೂಕ್ರಸೆಟ್ಟರ ಕೈ ಸ್ವಲ್ಪ ವಾಸಿಯಾಗಿತ್ತು. ಆದರೆ ಅವರಿಗೆ ಹಾರೆ ಹಿಡಿದು ಕೆಲಸ ಮಾಡಲಿಕ್ಕಾಗುತಿದ್ದಿಲ್ಲ. ಹೊರಗಿನ ಆಳುಗಳಿಗೆ ಮಜೂರಿ ಕೊಡಲು ಧಾನ್ಯ ಒಳಗಿದ್ದಿಲ್ಲ. ಏಣೆಲು ಮತ್ತು ಸುಗ್ಗಿ ಬೆಳೆಯ ಅಕ್ಕಿಯಲ್ಲಿ ಸ್ವಲ್ಪ ಧನಿಗಳಿಗೆ ಕೊಟ್ಟು ಉಳಿದುದನ್ನು ಮಾರಾಟ ಮಾಡಿ ಖರ್ಚು ಮಾಡಿದ್ದರು. ಈಗ ದಿನದಿನವೂ ಉಪವಾಸ ಬೀಳುವ ಹೆದರಿಕೆ ಹೆಚ್ಚುತ್ತಲಿತ್ತು. ಅವರ ಮೂರನೆ ಬೆಳೆ ಎಣಿಸಿದಂತೆ ಆಗದಿದ್ದುದು ಇದಕ್ಕೆ ಕಾರಣ. ಕೆಲವು ಕಡೆ ಸಾಲ ಕೇಳಿದರು. ಒಂದೆರಡು ಮುಡಿ ಅಕ್ಕಿ ಸುಬ್ರಮಣ್ಯ ಸೃಷ್ಟಿಯ ವ್ಯಾದೆಗೆ ಸಿಕ್ಕಿತು. ಹೇಗಾದರೂ 'ನೇಜಿ' ನೆಡುವ ಕೆಲಸವನ್ನು ಪೂರೈಸಿ, ಧನಿಗಳೊಡನೆ ಸಾಲ ಕೇಳಿದರು. ಆದರೆ ಧನಿಗಳ ವರ್ತನೆ ಈಗ ಸೆಟ್ಟರ ಮಟ್ಟಿಗೆ ಸಂಪೂರ್ಣ ಬದಲಾಗಿತ್ತು. ಅವರು ಸೆಟ್ಟರಿಗೆ ಸಾಲ ಕೊಡುವ ಬದಲು ತನಗೆ ಬರಬೇಕಾಗಿದ್ದ ಗೇಣಿಬಾಕಿಯನ್ನು ಕೊಡಬೇಕೆಂದು ಒತ್ತಾಯ

ಪಡಿಸಿದರು. ಸೆಟ್ಟರು ಮನೆಯೊಳಗಿದ್ದ ಕೆಲವು ತಾಂಬ್ರದ ಪಾತ್ರೆಗಳನ್ನು ಒತ್ತೆಯಿಟ್ಟು ಹೆಚ್ಚು ಕ್ರಯದ ಅಕ್ಕಿ ಪಡೆದರು. ಅದು ಮುಗಿಯುವಾಗ ಅವರ ಹೆಂಡತಿಯು ಕಿವಿಗಳಲ್ಲಿದ್ದ ಅಶುದ್ಧ ಚಿನ್ನದ ಬೆಂಡೋಲೆಗಳನ್ನು ಅಡ ವಿಟ್ಟರು.

ಆದರೂ ಅವರ ಹಿಂದಿನ ದುಂದುಗಾರಿಕೆಯ ಅಭ್ಯಾಸ ಸಂಪೂರ್ಣ ನಿಂತಿ ರಲಿಲ್ಲ. ಶೀನ ಕಂಪ್ತಿಯವರ ಲೆಕ್ಕ ಹನುಮಂತನ ಬಾಲದಂತೆ ಬೆಳೆಯು ತ್ತಲೇ ಇತ್ತು. ವಾರಕ್ಕೆರಡು ಸಲವಾದರೂ ಶರಾಬು ಕುಡಿಯದಿಲ್ಲ. ದಿನಕ್ಕೆ ಇಪ್ಪತ್ತೈದು ಬೀಡಿಗಳಾದರೂ ಸೇದಲಿಕ್ಕೆ ಬೇಕು. ಇದರ ಫಲವಾಗಿ ಮನೆ ಯಲ್ಲಿ ಉಪ್ಪು–ಮೆಣಸು ಕೂಡ ಸರಿಯಾಗಿ ಇಲ್ಲದಂತಾಯಿತು. ಕೊನೆಗೆ ಹೆಂಡತಿಯು ಕರಿಮಣೆಯನ್ನು ತೆಗೆದು ಒತ್ತೆಯಿಟ್ಟರು. ಅದರಲ್ಲಿ ಚಿನ್ನ ಬಹಳ ಕಡಿಮೆಯಿದ್ದುದರಿಂದ ಬರೇ ಐದು ರೂಪಾಯಿಗಳನ್ನು ಮಾತ್ರ ಸರಾಫರು ಕೊಟ್ಟರು.

ಆ ಹಣವನ್ನು ಪಡಕೊಂಡು ಶೀನ ಕಂಪ್ತಿಯರ ಹೋಟೇಲಿಗೆ ಸೆಟ್ಟರು ಹೋಗುವಾಗ ಸುಲೇಮಾನ್ ಸಾಹೇಬ ಮತ್ತು ಪಕೀರ ಬಂಡಾರಿ ಅಲ್ಲಿ ತಯಾರಿದ್ದರು. ಸೆಟ್ಟರಿಗೆ ಈಗ ನಿಜವಾಗಿಯೂ ಹಣ ಗಳಿಸಬೇಕೆಂಬ ಲವ ಲವಿಕೆಯಿತ್ತು. ಪರೀಲ್ ಆಡಲಿಕ್ಕೆ ಕುಳಿತರು. ಒಂದು ಗಂಟೆಯ ಆಟ ದಲ್ಲಿ ಸೆಟ್ಟರಿಗೆ ಒಂಬತ್ತು ರೂಪಾಯಿಗಳು ಸಿಕ್ಕಿದುವು. ಸುಲೇಮಾನ್ ಸಾಹೇಬ ತನ್ನ ಹತ್ತರ ಹಣವಿಲ್ಲವೆಂದ. ಸೆಟ್ಟರು ಅವನಿಗೆ ಒಂದುರೂಪಾಯಿ ಸಾಲ ಕೊಟ್ಟರು. ಪುನಃ ಆಟ ಪ್ರಾರಂಭವಾಯಿತು. ಸುಲೇಮಾನ್ ಸಾಹೇ ಬನ ಕೈಯಲ್ಲಿ ನಾಲ್ಕು ರೂಪಾಯಿಗಳು ಜಮೆಯಾಗುವಾಗ ಪಕೀರ ಬಂಡಾರಿ ಸೆಟ್ಟರಿಂದ ಸಾಲ ಕೇಳಿದ. ಅವನಿಗೂ ಒಂದು ರೂಪಾಯಿ ಕೊಟ್ಟರು. ಮತ್ತೆ ಆಡಿದ ಎರಡು ಗಂಟೆ ಆಟದಲ್ಲಿ ಸೆಟ್ಟರೊಡನೆ ಉಳಿದುದು ಒಂದೇ ರೂಪಾಯಿ ಸುಲೇಮಾನ್ ಸಾಹೇಬ ಮತ್ತು ಪಕೀರ ಬಂಡಾರಿ ಅವರು ಸೆಟ್ಟರಿಂದ ಪಡೆದ ಸಾಲವನ್ನು ಹಿಂದೆ ಕೊಟ್ಟರು. ಮತ್ತೆ ಸೆಟ್ಟರು ಅವರಿಬ್ಬ ರಿಗೂ ಒಂದೊಂದು ಕಪ್ಪು ಚಹ ಕೊಡಿಸಿ ಮರಳಿ ಆಟವಾಡತೊಡಗಿದರು. ಸುಮಾರು ಅರ್ಧ ಗಂಟೆಯಾಗುವಾಗ ಸೆಟ್ಟರನ್ನು ಯಾರೋ ಹಿಂದಿನಿಂದ ಹಿಡ ಕೊಂಡಾಯಿತು. ಹಿಂತಿರುಗಿ ನೋಡುತ್ತಾರೆ, ನಾಲ್ಕು ಮಂದಿ ಪೋಲಿಸರು!

ಸುಲೇಮಾನ್ ಸಾಹೇಬ ಮತ್ತು ಪಕೀರ ಬಂಡಾರಿ ಒಂದೇಸವನೆ ಓಡತೊ ಡಗಿದರು. ಸೆಟ್ಟರೂ ಓಡಲಿಕ್ಕೆಂದು ಪ್ರಯತ್ನಿಸುತಿದ್ದಾಗ ಅವರಿಗೆ ಎರಡು ಏಟು ಬಿತ್ತು. ಆ ಏಟುಗಳಿಂದಾಗಿ ಅವರಿಗೊವ್ಮೆ ಕಣ್ಣು ಕತ್ತಲೆ ಹೋಯಿತು.

ಹಾಗೆ ಸಿಕ್ಕಿಬಿದ್ದ ಕೂಕ್ರಸೆಟ್ಟರು ಊರಿಗೆ ಮರಳಿದರು ಒಂದು ವರ್ಷ ಆರು ತಿಂಗಳಿನ ಬಳಿಕ ಅವರ ಮೇಲೆ ಖಟ್ಲೆ ನಡೆಯುವಾಗಲೂ ಅವರಿಗೆ ಯಾರೂ ಜಾಮೀನು ನಿಲ್ಲಲಿಲ್ಲ. ಒಂದು ವರ್ಷ ಶಿಕ್ಷೆಯಾಯಿತು. ಇವೆಲ್ಲ ತೀರಿ ಮನೆಗೆ ಬರುವಾಗ ಅವರ ಮನೆಯಲ್ಲಿ ಶುಕ್ರ ಪೂಜಾರಿ ವಾಸವಾಗಿದ್ದ. ಹಾಗೆಯೇ ನೆರೆಕರೆಯವರೊಡನೆ ವಿಚಾರಿಸಲು ಅವರ ಹೆಂಡತಿ ಮಕ್ಕಳು ಎಲ್ಲೋ ಸಿದ್ದನಕಟ್ಟೆಯ ಸಮೀಪ ಒಂದು ಒಕ್ಕಲಿನ ಮನೆಯಲ್ಲಿ ದುಡಿಯುತಿ ದ್ದಾರೆಯೆಂದು ತಿಳಿಯಿತು. ಅಸಲ ಧನಿಗಳಲ್ಲಿಗೆ ಹೋದಾಗ ಅವರಿಗೆ ಹೊಟ್ಟೆ ತುಂಬ ಒವ್ಮೆ ಊಟ ಸಿಕ್ಕಿತಲ್ಲದೆ ಮತ್ತೇನೂ ದೊರೆಯಲಿಲ್ಲ.

ಕೊನೆಗೆ ಹೆಂಡತಿ ಮಕ್ಕಳನ್ನು ಕರೆದುಕೊಂಡು ಪಾಣೆ ಮಂಗಳೂರಿಗೆ ಹೋಗಿ ನೆಲಸಿದರು. ಅಲ್ಲಿ ಅವರ ಹೆಂಡತಿ ಮುಸುರೆ ತಿಕ್ಕಲು ಒಂದು ಮನೆಗೆ ಹೋಗುತಿದ್ದಳು. ಅವರು ಒಂದು ಭಂಡಸಾಲೆಯಲ್ಲಿ ಸ್ವಲ್ಪ ಸಮಯ ಕೆಲಸ ಮಾಡಿದರು. ಆಮೇಲೆ ಗಾಡಿಯಿಂದ ಅಕ್ಕಿ ಕದಿಯುವ ಕಳ್ಳರೊಡನೆ ಸೇರಿ ಅಕ್ಕಿ ಕದ್ದು, ಪೋಲೀಸರ ಕೈಗೆ ಸಿಕ್ಕಿ ಪುನಃ ಎರಡು ವರುಷ ಕಣ್ಣಸೂರಿನ ಅನ್ನ ತಿಂದು ಬಂದರು. ಆಗ ಹೆಂಡತಿ ಸ್ವಲ್ಪ ದುಡಿದುದಿತ್ತು. ಅದನ್ನು ತೆಗೆದು ಮತ್ತೊಂದು ಕಡೆ ಗದ್ದೆ ವಹಿಸಿಕೊಂಡರು. ಅಲ್ಲಿ ಎರಡು ಮೂರು ವರ್ಷ ಸಾಗುವಳಿ ಮಾಡಿ ಪೂರಯಿಸದೆ ಘಟ್ಟಕ್ಕೆ ಹೋದರು. ಅಲ್ಲಿಯೂ ಸ್ವಲ್ಪ ಸಮಯ ಮೇಸ್ತ್ರಿ ಕೆಲಸ ನೋಡಿಕೊಂಡಿದ್ದು ಕೊನೆಗೆ ಕಾಫಿ ತೋಟ ದಿಂದ ಕಾಫಿ ಬೀಜವನ್ನು ಕದ್ದು ಮಾರಾಟ ಮಾಡುತಿದ್ದುದನ್ನು ತೋಟದ ಸಾಹುಕಾರರು ಕಂಡುಹಿಡಿದು ಫಿರ್ಯಾದು ಕೊಟ್ಟರು. ಅಪ್ಪರಲ್ಲಿ ಸೆಟ್ಟರು ರಾತ್ರೆಯೇ ಹೊರಟು ಪುನಃ ಊರಿಗೆ ಬಂದರು. ಆಬಳಿಕ ಅವರು ಊರಲ್ಲೇ ಸ್ವಲ್ಪ ಸಮಯ ಇಲ್ಲಿ—ಸ್ವಲ್ಪ ಸಮಯ ಅಲ್ಲಿ ಹೀಗೆಯೇ ಕಳೆಯತೊಡಗಿ ದರು.

ಈಗ ದೇವಪ್ಪನೂ ಕೂಕ್ರಸೆಟ್ಟರ ಅದೃಷ್ಟ ಚಕ್ರದೊಳಗೆ ಸೇರಿದ್ದ. ಅವ

ರಂದುದಕ್ಕೆ ಅವನು ಅಡ್ಡಿ ಬರುತಿದ್ದಿಲ್ಲ. ಈಗೀಗ ಅವನು ಅವರಿಗೆ ಬೇಕಾದ ವಸ್ತ್ರಗಳನ್ನು ಕೂಡಾ ವರದ ಬಾಳಿಗರಲ್ಲಿಂದ ಮನೆಯ ಲೆಕ್ಕಕ್ಕೆ ಬರೆಸಿ ತೆಗೆದು ಕೊಡುತಿದ್ದ. ಹಣಕ್ಕಂತೂ ಲೆಕ್ಕವಿರಲಿಲ್ಲ.

## ಅಧ್ಯಾಯ ಹತ್ತು.

ಸಂಜೀವನಿಗೆ ತನ್ನ ಮಾವ ನಾರಾಯಣಸೆಟ್ಟರ ಜೀವನ ಚರಿತ್ರೆಯು ಕೋಚಣ್ಣ ರೈಗಳಿಂದ ತಿಳಿದೊಡನೆ ಹಲವಾರು ಯೋಚನೆಗಳು ಮನಸಿನಲ್ಲಿ ಮೂಡಿದುವು. ನಾರಾಯಣಸೆಟ್ಟರಂತೆ ತಾನೂ ಒಂದು ಹತ್ಯಾಕಾಂಡವನ್ನು ನಡೆಸುವುದೇ ಎಂದೊಮ್ಮೆ ಆಲೋಚಿಸಿದ. ತಾನು ಕೊಲ್ಲುವುದಾದರೆ ತನ್ನ ತಾಯಿಯನ್ನೇ ಕೊಲ್ಲಬೇಕು. ಆಗ ಲೋಕ ಏನೆಂದೀತು? ಇಲ್ಲವೇ ಅಣ್ಣನನ್ನು ಕೊಲ್ಲಬೇಕು. ಆಗಲಾದರೂ ನೆಮ್ಮದಿಯಾದೀತೆಂದು ತಿಳಿಯುವ ಬಗೆ ಹೇಗೆ? ಒಬ್ಬನನ್ನು ಕೊಂದೊಡನೆ ಇನ್ನೊಬ್ಬನ ಕಷ್ಟಗಳು ನಿಜವಾಗಿಯೂ ಪರಿಹಾರವಾದಾವೆ? ಅವನೇ ಆಸ್ತಿಗಾಗಿ, ಹೆಣ್ಣಿಗಾಗಿ ಕೊಲೆ ಮಾಡಿದವರನ್ನು ಕಣ್ಣಾರೆ ಕಂಡಿದ್ದ. ಆದರೆ ಆ ಕೊಲೆ ನಡೆಸಿದುದರಿಂದಾಗಿ ಅವರೇನೂ ವಿಶಿಷ್ಟ ಪ್ರಯೋಜನವನ್ನು ಪಡೆಯಲಿಲ್ಲ. ಕೆಲವರಿಗೆ ಕರಿನೀರಿನ ಶಿಕ್ಷೆಯೋ ಫಾಶಿಯೋ ಆಗಿತ್ತು. ಕೆಲವರು ಹಾಗೆ ಸಿಕ್ಕಿದ ಪ್ರಯೋಜನವನ್ನು ತಾವೆಣಿಸಿದಂತೆ ಉಣ್ಣಲಾರದೆ ಅಪಮೃತ್ಯುವಿಗೀಡಾಗಿದ್ದರು. ಮತ್ತೆ ನಾರಾಯಣ ಸೆಟ್ಟರಂತಹ ವಿಷದಿಂದ ಅಮೃತ ತೆಗೆದ ಮಂದಿಯ ವಿಚಾರವೂ ಅವನಿಗೆ ಗೊತ್ತಿದ್ದುದೇ. 'ಹಾಲು ಕುಡಿಸಿದ ಮಗುವೇ ಮರಣಕ್ಕೀಡಾಗುವಾಗ ವಿಷ ಕುಡಿದ ಮಗು ಬದುಕೀತೇ?' ಎಂದು ಅವನೊಳಗೇ ಪ್ರಶ್ನಿಸಿದ.

ಅಂದು ರಾತ್ರೆ ಅವನಿಗೆ ಸೆಟ್ಟರಲ್ಲಿ ಚೆನ್ನಾಗಿ ಊಟ ಮಾಡಲಾಗಲಿಲ್ಲ. ಊಟದ ಬಳಿಕ ಕಿಟ್ಟು ಏನೋ ಸ್ವಲ್ಪ ತಮಾಷೆ ಮಾಡುತ್ತ ಒಂದು ಚಕ್ಕುಲಿಯ ಮಾಲೆಯನ್ನು ಕುತ್ತಿಗೆಗೆ ಹಾಕಿದ. ಆಮೇಲೆ ತುಸು ಹೊತ್ತು ಸೆಟ್ಟರ ಮತ್ತು ರೈಗಳ ಒತ್ತಾಯದಿಂದ 'ಇಂಳ' ಇಸ್ಪೇಟು ಆಡಿದ. ಇಷ್ಟಾದರೂ ಅವನ ಮನಸ್ಸು ಬೇರೆ ಕಡೆಯಲ್ಲೇ ಇತ್ತು.

ಮತ್ತೆ ಅವನು ಮದುವೆಯಾದ ಮೊದಲಿನ ದಿನ ಪಾರ್ವತಿಯೊಡನೆ ಮಲಗಿದ ಕೋಣೆಯಲ್ಲೇ ಮಲಗಿದ. ಪಾರ್ವತಿಯು ನೆಲದ ಮೇಲೆಯೇ ಮಲಗಿ ಅವನು ಕೋಣೆಯೊಳಗೆ ಹೋಗುವಾಗ ನಿದ್ರಿಸಿಬಿಟ್ಟಿದ್ದಳು. ಅವಳ ಬಳಿ ಅವನು ಎರಡು ಸಲ ಹೋದ. ಅವಳ ಮುಖ ಹೊಳೆಯುತ್ತಿತ್ತು. ಎರಡು ಸಲವೂ ಹಿಂದೆಯೇ ಬಂದು ಕೊನೆಗೆ ಅವಳನ್ನು ಎಬ್ಬಿಸುವುದು ಬೇಡ ವೆಂದು ಎಣಿಸಿ ಅಲ್ಲೇ ಒರಗಿದ.

‘ ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ ’ ಎಂದೊಮ್ಮೆ ಅವನಿಗೆ ತೋರಿತು. ಇಲ್ಲ. ತನಗೆ ಶಿಕ್ಷಿಸುವಂಥ ಮಾವಂದಿರಿಲ್ಲ, ಆದರೆ ಹುಟ್ಟಿಸಿದ ತಾಯಿಯೇ ಅವರ ಪಾತ್ರವನ್ನು ವಹಿಸಿಕೊಂಡಿದ್ದಾಳೆ. ದೇವಪ್ಪನೇ ಅವ ಳನ್ನು ತನಗೆ ವಿರೋಧಿಯನ್ನಾಗಿ ಮಾಡಿಸಿದವ. ಹೀಗೆ ಯೋಚಿಸುತ್ತ ಕೆಲವು ಹೊತ್ತು ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿದ. ಇಲ್ಲ. ನಿದ್ರೆ ಬಾರದು. ಅವನು ಎಷ್ಟು ಯತ್ನಿಸಿದರೂ ಯೋಚನೆಗಳ ಕೈಯೇ ಮಿಗಿಲು. ಅವನಿಗೆ ತೀರ ನೇರವಾದ ಕುರುಡು ದಾರಿಯನ್ನು ಹಿಡಿಯಲು ಸಾಧ್ಯವಿರಲಿಲ್ಲ. ಅವನು ಭಾವನೆಯುಳ್ಳವ, ತಿಳುವಳಿಕೆಯುಳ್ಳವ. ಯುಕ್ತಾಯುಕ್ತತೆಗಳ ಪರಿಚಯ ವುಳ್ಳವ. ಯಾವೊಂದು ಕೆಲಸವನ್ನು ಮಾಡಬೇಕಾದರೂ ಅದರ ಆಗು-ಹೋಗುಗಳನ್ನು ಚೆನ್ನಾಗಿ ತುಲನೆ ಮಾಡಿ ನೋಡುವನು.

ಆದುದರಿಂದಲೇ ಅವನ ದೃಷ್ಟಿಯಲ್ಲಿ ಕೊಲೆಗೆ ಎಂದೂ ಪೂಜ್ಯ ಸ್ಥಾನ ವಿರಲಿಲ್ಲ. ಏಕೆಂದರೆ ಅದರ ದುಷ್ಪರಿಣಾಮಗಳನ್ನು ಅವನು ಚೆನ್ನಾಗಿಮೊದಲೇ ತಿಳಿಯಬಲ್ಲ. ಒಂದು ವೇಳೆ ಎಲ್ಲವೂ ಅವನೆಣಿಕೆಯಂತೆ ನಡೆದುಹೋದರೂ ಅವನು ಲೋಕದಲ್ಲಿ ಸದಾ ಸುಖವನ್ನೇ ಅನುಭವಿಸುತ್ತಿರಬಹುದೇ? ಅವ ನಿಗೂ ಒಬ್ಬಳು ತಂಗಿಯಿದ್ದಾಳೆ. ಅವಳ ಮಕ್ಕಳು ದೊಡ್ಡವರಾದ ಮೇಲೆ ನಾರಾಯಣಸೆಟ್ಟರು ಕೋಟೆಸೆಟ್ಟರಿಗೆ ಎದುರು ನಿಂತಂತೆ, ಅವನಿಗೆ ಎದುರು ನಿಲ್ಲಲಿಕ್ಕಿಲ್ಲವೇ ? ನಾರಾಯಣಸೆಟ್ಟರಲ್ಲೇ ಅವರಳಿಯ ಬಾಬುವಿನ ಮನಸ್ಸಿನ ರೀತಿಯನ್ನು ಸಂಜೀವ ಮೇಲಿಂದ ಮೇಲೆ ಪರಿಶೀಲಿಸಿದ್ದ. ಬಾಬು ಸಿಡಿ ಯಲು ತಯಾರಾದ ಜ್ವಾಲಾಮುಖಿಯಂತೆ ಅವನಿಗೆ ಕಾಣುತ್ತಿದ್ದ. ನಾರಾ ಯಣಸೆಟ್ಟರಿಗೆ ಒಂದಿಲ್ಲ ಒಂದು ದಿನ ಅವನು ಬುದ್ಧಿ ಕಲಿಸದೆ ಇದ್ದಾನೇ?

ಸಂಜೀವನಿಗೆ ಈ ವಿಚಾರಗಳನ್ನೆಲ್ಲ ಯೋಚಿಸಿದಷ್ಟು ತಳ ಸಿಗಲಿಲ್ಲ. ತಾನೀಗ ಹೀಗೆಯೇ ಇದ್ದರೆ ದೇವಪ್ಪನು ಆಸ್ತಿಯನ್ನೆಲ್ಲ ಕಸಿದು ಬಿಡುವನೆಂಬುದು ಶತಸ್ಸಿದ್ಧ. ಆಮೇಲೆ ತನ್ನ ಗತಿಯೇನು ? ತಾನು ಮತ್ತೆ ಹೇಗೆ ಜೀವಿಸಬೇಕು, ಯಾವ ಜೀವನೋಪಾಯವನ್ನು ಕೈಗೊಳ್ಳಬೇಕು ? ಕೂಲಿ ಕೆಲಸ ಇಲ್ಲವೇ ಇತರರ ಒಕ್ಕಲಾಗಲು ಇಷ್ಟು ದೊಡ್ಡ ಮನೆತನದಲ್ಲಿ ಈತನಕ ಬೆಳೆದವನಿಗೆ ಸಾಧ್ಯವೇ ? ಅಲ್ಲದೆ ಲೋಕವು ತನನ್ನು ಹೇಡಿ ಎಂದು ಭಾವಿಸದಿರಲಿಕ್ಕಿಲ್ಲ. ಮತ್ತೆ ಕೋರ್ಟು ಕಚೇರಿಗಳ ವ್ಯವಹಾರವನ್ನು ನಡೆಸಲು ಕೋಚಣ್ಣ ರೈಗಳಂಥವರು ಬೇಕೇಬೇಕು. ಅದೂ ಕೊನೆಗೆ ಅವನಿಗೆ ಜಯಪ್ರದವಾಗಿಯೇ ಪರಿಣಮಿಸೀತೆಂದು ಹೇಳಲು ಅಸಾಧ್ಯ. ನ್ಯಾಯಾಧೀಶರು ಅವನಿಗೆ ಬರೇ ಕೆಲವು ಮುಡಿ ಅಕ್ಕಿಯ ಜೀವನಾಂಶ ಕೊಡಿಸಬಹುದು, ಇಲ್ಲವೇ ಅವನ ದೂರನ್ನೇ ತೆಗೆದುಹಾಕಬಹುದು.

ಇಂಥ ಅನಿಶ್ಚಯ-ಅನುಮಾನದ ಪರಿಸ್ಥಿತಿಗೆ ಸಂಜೀವನು ಪ್ರಯೋಜನವಿಲ್ಲದವನೇ. ಅದಕ್ಕೆ ಒಂದೋ ನಾರಾಯಣಸೆಟ್ಟರಂಥ ಅಂಧ ಶಕ್ತಿಪೂಜಕರು ಬೇಕು, ಇಲ್ಲವೆ ಕೋಚಣ್ಣ ರೈಗಳಂಥ ತಂತ್ರಶಾಲಿಗಳು ಬೇಕು. ಇವೆರಡು ದಾರಿಗಳನ್ನು ಸಂಜೀವ ಅಂಗೀಕರಿಸಲಿಲ್ಲ. ಕೊಲೆ ಮಾಡುವುದು ಅವನಿಗೆ ಅಷ್ಟೊಂದು ಕಠಿನವಲ್ಲ. ಎಲ್ಲರೂ ಉಣ್ಣುತ್ತಿರುವ ಅನ್ನದಪಾತ್ರೆಗೆ ವಿಷ ಸೇರಿಸಬಹುದು. ಇಲ್ಲವಾದರೆ ಪುಂಡರ ಸ್ನೇಹದಿಂದ ತಾಯಿ ಮತ್ತು ದೇವಪ್ಪರಿಬ್ಬರೇ ಇದ್ದಾಗ ಮನೆಗೆ ಬೆಂಕಿಕೊಟ್ಟು ಹೊತ್ತಿಸಬಹುದು. ಇವೆರಡಿಲ್ಲದಿದ್ದರೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಇಬ್ಬರನ್ನೂ ನಡುರಾತ್ರಿಯಲ್ಲಿ ಕೊಂದುಬಿಡಬಹುದು.

ಸಂಜೀವ ಯೋಚಿಸಿ ಯೋಚಿಸಿ ಸೋತು ಹೋದ. ಪಾರ್ವತಿ ಒಂದೇ ಸವನೆ ಗೊರಕೆ ಹೊಡೆಯುತಿದ್ದಳು. ಸಂಜೀವ ಅವಳನ್ನು ಇನ್ನೊಮ್ಮೆ ನೋಡಿದ.

ಅವಳ ಮುಡಿಯಿಂದ ಸಂಪಿಗೆಯ ಹೂವಿನ ಪರಿಮಳ ಹೊರಡುತಿತ್ತು.

ಅದೇ ಪರಿಮಳವನ್ನು ಅವನು ಕೆಲವು ತಿಂಗಳ ಹಿಂದೆ ಅದೇ ಕೋಣೆಯಲ್ಲಿ ಮೂಸಿ ಆನಂದವನ್ನು ಹೊಂದಿದ್ದ.

ಇಂದೂ ಆ ಕ್ಷಣವನ್ನು ನೆನೆಯುವಾಗ ಒಮ್ಮೆ ಅವನ ರೋಮಗಳೆಲ್ಲ ಎದ್ದು ನಿಂತುವು.

* * *

ರಾಮಪ್ಪಸೆಟ್ಟರು ಅಂದು ರಾತ್ರೆ ತಂಗಿಯೊಡನೆ ತನ್ನ ಹೃದಯ ಬಿಚ್ಚಿ ಮಾತನಾಡಿದರು. ಅವರಿಗೆ ಅವಳೊಡನೆ ಎಷ್ಟೋ ಮಾತನಾಡಬೇಕೆಂಬ ಬಯಕೆ ಹಲವು ಸಮಯದಿಂದ ಇತ್ತು. ಪೂವಕ್ಕ ಅಣ್ಣನಿಗಾಗಿ ಕೋಳಿ ಮೊಟ್ಟೆಯ ದೋಸೆ ಮಾಡಿದ್ದಳು. ಮೀನನ್ನು ಹುರಿದಿದ್ದಳು. ಇವನ್ನು ತಿಂದು ಅರ್ಧ ಬಾಟ್ಲ ಶರಾಬು ಕುಡಿದ ಮೇಲೆ ಸೆಟ್ಟರ ನಾಲಿಗೆ ಸರಿಯಾಗಿ ಚಲಿಸತೊಡಗಿತು.

ಮೊದಲು ಸೆಟ್ಟರು ತನ್ನ ಮುಂಬಯಿಯ ಮನೆಯ ಕುರಿತಾಗಿ ಹೇಳಿದರು. ಅವರ ಮನೆಯಿರುವುದು ನಾಲ್ಕನೆಯ ಮಾಳಿಗೆಯಲ್ಲಂತೆ. ಐದು ಕೋಣೆಗಳು ಅದಕ್ಕೆ ಇವೆಯಂತೆ. ನೀರು ಪೈಪಿನಲ್ಲಿ ಬರುವುದು. ಬಾವಿ-ಹಗ್ಗದ ಪಂಚಾತಿಕೆ ಇಲ್ಲ. ಬೆಳಗ್ಗೆ ನಾಲ್ಕು ತಾಸು ನೀರು ಬರುವುದಂತೆ. ಸಂಜೆ ಮೂರು ತಾಸು ಮಾತ್ರ. ಬಚ್ಚಲು ಕೊಟ್ಟೆಗೆ, ಪಾಯಖಾನೆ—ಎಲ್ಲ ಒಳಗೇ ಅಂತೆ. ಮುಂಜಾನೆ ಐದು ಗಂಟೆಗೇ 'ಭೈಯ್ಯಾ' ಹಾಲು ತರುತ್ತಾನಂತೆ. ಆಮೇಲೆ ಆರು ಗಂಟೆಗೆ ಬ್ರೆಡ್. ಅವರ ಮಗ ಶೇಖರ ಎಂಟನೇ ಕ್ಲಾಸಿನಲ್ಲಿ ಕಲಿಯುತಿದ್ದಾನಂತೆ. ಮಗಳು ಪ್ರೇಮಕುಮಾರಿ ಒಂಬತ್ತನೇ ಕ್ಲಾಸಿನಲ್ಲಿ. ಮತ್ತೊಬ್ಬ ಮಗಳು ಲಲಿತ ಮೂರನೆಯ ತರಗತಿಯಲ್ಲಿರುವಳಂತೆ. ಹೆಂಡತಿಗೆ ಆರು ತಿಂಗಳಂತೆ.

"ಈಗ ಊರಿನಲ್ಲಿ ಒಂದು ಆಸ್ತಿ ತೆಗೆದು ಮನೆ ಕಟ್ಟಿಸಬೇಕೆಂದಿದ್ದೇನೆ", ಸೆಟ್ಟರು ಪಿಲಾತಿ ಸಿಗರೇಟನ್ನು ಸೇದಿ ಅದರ ಹೊಗೆಯನ್ನು ಬಿಡುತ್ತ ಹೇಳಿದರು. "ಮಕ್ಕಳು ಎಷ್ಟೆಂದರೂ ನನ್ನಂತೆ ಕಷ್ಟಪಡಲಾರರು. ಶೇಖರನಿಗೆ ಒಂದು ದಿನ ಕೂಡಾ ದುಡಿಯಲಾಗುವುದಿಲ್ಲ. ಅವನನ್ನು ಹಣ ತೆಗೆದುಕೊಳ್ಳಲಿಕ್ಕೆ ಹೋಟೇಲಿನಲ್ಲಿ ಕೂತುಕೊಳ್ಳಿಸಿ ನಾನು ಮನೆಗೆ ಹೋದರೆ ಅವನು ಅವನಷ್ಟಕ್ಕೇ ಚೌಪಾಟಿಗೋ, ಮೆರಿನ್ ಡ್ರೈವಿಗೋ, ಮಲಬಾರ್ ಗುಡ್ಡೆಗೋ

ಹೋಗಿಬಿಡುತ್ತಾನೆ. ಒಬ್ಬ ಗಿರಾಕಿಯೊಡನೆ ಅವನಿಗೆ ಮಾತನಾಡಲು ಸಾಧ್ಯವಿಲ್ಲ. ಸಿನೇಮಾ ಒಂದು ಕೂಡಾ ಬಿಡಲಾರ."

"ನಮ್ಮ ಸಂಜೀವನೂ ಹಾಗೆಯೇ ಸಾಲೆಗೆ ಹೋದದ್ದು. ಮಂಗಳೂರಲ್ಲಿ ಇದ್ದ ಸಿನೇಮಗಳನ್ನೆಲ್ಲ ನೋಡಿದ್ದನಂತೆ ಅವನು. ಈಗಿನ ಮಕ್ಕಳೇ ಹಾಗೆ" ಪೂವಕ್ಕ ನಡುವೆ ಬಾಯಿ ಹಾಕಿದಳು.

"ಛೆ! ಅಲ್ಲಲ್ಲ. ಈ ಕಾಲವೇ ಹಾಗೆ. ಹಣದಲ್ಲಿ ಕುಳಿತುಕೊಳ್ಳಬೇಕು, ಹಣದಲ್ಲಿ ಏಳಬೇಕು. ಹುಡುಗರನ್ನು-ಹುಡುಗಿಯರನ್ನು ಈಗಿನ ಕಾಲಕ್ಕೆ ಸರಿಯಾಗಿಯೇ ನಡೆಸಬೇಕಷ್ಟೆ. ಮುಂಬಯಿಯಲ್ಲಿ ನೀನು ದೊರೆಗಳ ಮಕ್ಕಳನ್ನು ನೋಡಬೇಕು ಹ್ಞಾ! ಅವರ ಘನಸ್ಥಿಕೆಯೇನು! ಒಂದೊಂದು ಮನೆಯಲ್ಲಿ ನಾಲ್ಕಾರು ಮೋಟಾರು ಕಾರುಗಳು! ಮಕ್ಕಳೆಲ್ಲ ಸ್ವಲ್ಪ ದೊಡ್ಡವರಾದೊಡನೆ ಮೋಟಾರು ಕಾರಿನಲ್ಲೇ ತಿರುಗಾಡುವುದು! ನಾವೂ ಅವರೊಡನಿರುವಾಗ ಅವರಂತೆಯೇ ಇರಬೇಕಲ್ಲ? ಪೂವು, ನೀನು ನಂಬಲಾರೆ, ನನಗೆ ಮನೆಯ ಖರ್ಚಿಗೆ ತಿಂಗಳಿಗೆ ಆರು ನೂರು ರೂಪಾಯಿ ಸಾಕಾಗುವುದಿಲ್ಲ. ಮುಂಬಯಿಯೆಂದರೆ ಹಾಗೆಯೇ. ಒಂದೆಡೆ ಆದಾಯ, ಇನ್ನೊಂದೆಡೆ ಖರ್ಚು. ನಾವೆಲ್ಲ ಹಣವನ್ನು ಚಲಾಯಿಸುವ ಸಾಧನಗಳು ಮಾತ್ರ."

ಅಷ್ಟರಲ್ಲಿ ಅಡುಗೆ ಕೋಣೆಯಲ್ಲಿ "ಫಡಕ್" ಎಂಬ ಶಬ್ದ ಕೇಳಿತು. ಪೂವಕ್ಕ ಅಲ್ಲೇ ಕುಳಿತಿದ್ದ ಶಂಕರಿಯನ್ನು ಕರೆದು "ಒಳಗೆ ಬೆಕ್ಕು ಬಂದಿದೆಯೋ ನೋಡು" ಎಂದು ಹೇಳಿದಳು. ಶಂಕರಿ ಒಳಗಿಂದ ಬಂದು ಹಾಲಿನ ಪಾತ್ರೆಯನ್ನು ಬೆಕ್ಕು ದೂಡಿ ಹಾಕಿತೆಂದಳು. ಪೂವಕ್ಕ ಬೆಕ್ಕಿಗೆ ಶಾಪ ಕೊಟ್ಟಳು.

"ಆ ಹೊಲೆಯರ ಬೆಕ್ಕಾಗಿರಬೇಕು. ತಮಗೇ ಅನ್ನವಿಲ್ಲದ ಅಧಮರು ಬೆಕ್ಕು ಸಾಕುವುದು! ಯಾರ್ಯಾರ ಮನೆಯನ್ನು ಬೋಳಿಸಲಿಕ್ಕೆ ಈ ಬೆಕ್ಕುಗಳು!"

ರಾಮಪ್ಪಸೆಟ್ಟರ ಮಾತು ನಿಲ್ಲಲಿಲ್ಲ.

"ನೀನು ಸಂಜೀವನನ್ನು ಇಷ್ಟೆಲ್ಲ ಏಕೆ ದೂರುತ್ತೀ? ಅವನಿಗೆ ಚೆನ್ನಾಗಿ ಬರಹ ಬರುತ್ತದೆ. ಒಬ್ಬ ಗುಮಾಸ್ತನ ಕೆಲಸ ನೋಡಿದರೂ ಅವನಿಗೆ ಕೂತಲ್ಲಿ ಅನ್ನ ಸಿಗುವುದರಲ್ಲಿ ಅಡ್ಡಿಯಿಲ್ಲ. ನಿನ್ನ ದೊಡ್ಡ ಮಗನ ಹಾಗೆ ಅವ

ನೇನಾದರೂ ಬೆಪ್ಪನಲ್ಲ."

"ಹ್ಞಂ!" ಪೂವಕ್ಕ ಒಮ್ಮೆಯೇ ನೆಟ್ಟಗಾದಳು. "ನಿನಗೆ ಗೊತ್ತಿಲ್ಲಣ್ಣ. ("ಅಣ್ಣ" ಎಂದು ಪೂವಕ್ಕ ಯಾವಾಗಲೂ ಸೆಟ್ಟರನ್ನು ಕರೆಯುತ್ತಿದ್ದಿಲ್ಲ) ದೇವಪ್ಪ ಒಂದು ಕಾಸನ್ನೂ ಖರ್ಚು ಮಾಡಲಾರ. ಏನಾದರೂ ಮನೆಗೇ ತರುವನು. ಸಂಜೀವ! ಸಂಜೀವ ದೊಡ್ಡ ಖದೀಮ! ಒಂದು ಪೈಗೆ ನಾನು ಅವನನ್ನು ನಂಬಲಾರೆ. ಮಂಗಳೂರಿನಲ್ಲಿ ಅವನು ನನ್ನನ್ನು ಖರ್ಚು ಮಾಡಿಸಿದುದು ಸಾಕು. ಒಂದು ಮಾತು ಕೂಡ ಅವನು ಸತ್ಯ ಹೇಳಲಿಕ್ಕಿಲ್ಲ. ಮತ್ತೆ ಅವನ ಹೆಂಡತಿ ಶುದ್ಧ ಬಣ್ಣದ ಬೀಸಣಿಗೆ."

"ಪೂವು, ನಿನಗೆ ಇದೆಲ್ಲ ಏನೆಂದು ತಿಳಿಯದು. ದೇವು ನಿನಗೆ ಏನನ್ನು ಹೆಚ್ಚು ತರುತ್ತಾನೆ? ಅವನ ತಲೆ ತೀರ ಬೋಡ್ಡು. ಆ ದಿನ ಅವನು ಅಂಥ ಹುಡುಗಿಯನ್ನು ಹೇಗೆ ಮದುವೆಯಾದನೆಂದು ನನಗೆ ಗೊತ್ತಿಲ್ಲವೆ? ಅವನ ಮಾವ ಶುದ್ಧ ಕಿಲಾಡಿ. ಕದ್ದು ಹಲವು ಸಲ ಜೈಲಿಗೆ ಹೋದವ. ಈಗ ವರುಷ ವರುಷ ಧನಿಗಳ ಗಂಟು ತಿಂದು ಇಂದು ತುಂಬೆ, ನಾಳೆ ವಿಟ್ಲ, ನಾಡದು ಮಾಣಿ ಹೀಗೆ ಅಲೆದಾಡುತ್ತಿರುವವ. ದೇವುಗೆ ಒಂದಿಷ್ಟಾದರೂ ತಲೆಯಿರುತಿದ್ದರೆ ಅವನು ಆ ಕುರೂಪಿ ಹೆಣ್ಣಿಗೆ ಮರುಳಾಗುತಿದ್ದಿಲ್ಲ. ಈಗಲೂ ಅವನ ಮಾವನಿಗೆ ಸ್ವಲ್ಪ ಸ್ವಲ್ಪವೇ ನಿನ್ನ ಹಣವನ್ನು ಕೊಡುತ್ತಾನೆಂದು ಮೊನ್ನೆ ಕೇಳಿದೆ."

ಪೂವಕ್ಕ ಮತ್ತೆ ಮಾತನಾಡಲಿಲ್ಲ.

"ಸಂಜೀವನಿಗೆ ಪ್ರೇಮಳನ್ನು ಕೊಡಬೇಕೆಂದಿದ್ದೆ. ಆದರೆ ನೀನು ಮುಂದುವರಿಸಿ ಬಿಟ್ಟೆ. ಆ ಮೂರುಕಾಸಿನ ಕೋಚ ಇನ್ನೂ ನಿನ್ನ ಕೈಬಿಟ್ಟಿಲ್ಲ. ಅವನ ಮಾತಿಗೆ ನೀನು ಮರುಳಾದೆ. ಆದರೂ ಚಿಂತಿಲ್ಲ. ನಾರಾಯಣ ಸೆಟ್ಟರು ಒಳ್ಳೇ ಮರ್ಯಾದಸ್ಥರು, ಶ್ರೀಮಂತರು."

ಪೂವಕ್ಕ "ಹ್ಹಾಯ್" ಎಂದು ಆಕಳಿಸುತ್ತ "ಇನ್ನು ನಿದ್ದೆಮಾಡುವ" ಎಂದು ಅಲ್ಲಿಂದೆದ್ದಳು. ಸೆಟ್ಟರೂ ಚಾವಡಿಗೆ ಹೋದರು. ದೇವಪ್ಪ ಆವನ ಕೋಣೆಯಲ್ಲಿ ಗೊರಕೆ ಹೊಡೆಯುತಿದ್ದ.

* * *

ಬಾಬುವಿಗೆ ರಾತ್ರಿ ನಿದ್ದೆ ಬಂದಿರಲಿಲ್ಲ. ಅವನ ಹಳೆಯ ಚಾಪೆಯಲ್ಲಿ ತುಂಬ ತಗಣೆಗಳಿದ್ದುವು. ದೀಪ ಹಚ್ಚಿಸಿ ಮೇಲೆ ಕಾಣಸಿಕ್ಕಿದವುಗಳನ್ನೆಲ್ಲ ಬೆರಳಿನಲ್ಲಿ ಒತ್ತಿ, ಅಂಗೈಯಲ್ಲಿ ಹೊಡೆದು ಕೊಂದ. ತಲೆದಿಂಬಂತೂ ಬೆವರಿನಿಂದ ನಾರುತಿತ್ತು.

ಮೊದಲ ಜಾವದ ಕೋಳಿ ಕೂಗಿತು. ಆಗ ಮಾಳಿಗೆಯ ಕೋಣೆಯ ಬಾಗಿಲು ತೆರೆದ ಸದ್ದಾಯಿತು. ಬಾಬು ಎದ್ದು ಕುಳಿತುಕೊಂಡ. ಅವನ ಎದೆ ಜೋರಾಗಿ ಬಡೆಯಿತು. ಕಾಲಸರಪಳಿಯ ಶಬ್ದ ಕೇಳಿಯಂತೂ ಅವನಿಗೆ ಆನಂದ ಹಿಡಿಸದಾಯಿತು.

ಅವನ ಚಾಪೆಯ ಬಳಿಯಿಂದಲೇ ಪಾರ್ವತಿ ಹಾದು ಹೋಗುತಿದ್ದಾಳೆ. ಅವನು ಮೆಲ್ಲನೆದ್ದು ಮಾಳಿಗೆಯ ಮೆಟ್ಟಲುಗಳನ್ನು ಹತ್ತಿ ಅವಳು ತೆರೆದು ಬಂದ ಬಾಗಿಲನ್ನು ಹೊರಗಿನಿಂದ ಮುಚ್ಚಿ ಸರಪಳಿಯನ್ನು ಗೂಟಕ್ಕೆ ಸಿಕ್ಕಿಸಿದ.

ಬಾಬು ಹಿಂತಿರುಗುವಾಗ ಪಾರ್ವತಿ ಅಂಗಳದಿಂದ ಮೇಲೆ ಬರುತಿದ್ದಳಷ್ಟೆ. ಅವಳು ಹೋಗುವಾಗ ಅವನನ್ನು ಗಮನಿಸಿರಲಿಲ್ಲ. ಈಗ ಅವನು ನಿಂತುಕೊಂಡಿದ್ದ.

ಅವಳಿಗೆ ಗುರುತು ಸಿಕ್ಕಿತು. ನಾಲ್ಕು ತೋಳುಗಳೂ ಒಮ್ಮೆಯೇ ಒಂದಾದುವು.

ಮಾಳಿಗೆಯಿಂದ ಏನೋ ಸದ್ದು ಕೇಳಬರುತಿತ್ತು. ಆದರೆ ಬಾಬು ಅದನ್ನು ಗಮನಿಸಲಿಲ್ಲ. ಅವನು ಅವಳ ಮುಖವನ್ನಿಡೀ ಕ್ಷಣಕಾಲದಲ್ಲೇ ಮುದ್ದಿಸಿಯಾಗಿತ್ತು.

" ಅವರಿಗೆ ಎಚ್ಚರಿಕೆಯಾಯಿತು. ಎಲ್ಲಾದರೂ ಕೆಳಗೆ ಬಂದರೆ ? " ಪಾರ್ವತಿ ಬಾಬುವಿನ ಕಿವಿಗೆ ತುಟಿಗಳನ್ನು ಮುಟ್ಟಿಸಿ ಹೇಳಿದಳು.

" ನೀನು ಹೆದರಬೇಡ. ನಾನೆಲ್ಲ ತಕ್ಕ ಬಂದೋಬಸ್ತು ಅದಕ್ಕೆ ಮಾಡಿದ್ದೇನೆ " ಬಾಬು ನುಡಿದ. " ನಿನ್ನ ಗಂಡನಿಗೆ ನಿನ್ನಪ್ಪ ಹೇಳಿದ್ದು ಕೇಳಿ ಸಾಕಾಗಿದೆ. ಅವರ ಮೇಲೆ ರೈಗಳ ರೈಲು ಅವನನ್ನು ಹುಚ್ಚನನ್ನಾಗಿ ಮಾಡಿದೆ. "

ಪಾರ್ವತಿ ಬಾಬುವಿನ ರೋಮ ತುಂಬಿದ್ದ ಪುಷ್ಟವಾದ ಎದೆಯುನ್ನೊಮ್ಮೆ ನೋಡಿದಳು. ಮತ್ತೊಮ್ಮೆ ಅವನ ಕುಡಿಮೀಸೆಯ ಮುಖದ ಮೇಲೆ ಮೃದು

ವಾಗಿ ಕೈಯಾಡಿಸಿದಳು.

ಅಷ್ಟರಲ್ಲಿ ಆಕಾಶ ಒಮ್ಮೆಲೇ ಕತ್ತಲಾಯಿತು. ಎಲ್ಲಿಲ್ಲದ ಸಿಡಿಲು ಮಳೆ ಬರತೊಡಗಿತು.

ಸಂಜೀವ ಬೆಳಿಗ್ಗೆ ಎದ್ದು ಕೆಳಗೆ ಬರುವಾಗ ಬಾಬು ಇನ್ನೂ ಮುಸುಕು ಹಾಕಿ ಮಲಗಿದ್ದ. ಪಾರ್ವತಿ ಒಳಗೆ ನೀರು ಕೊಂಡು ಹೋಗುತಿದ್ದಳು.

ಬಾಬುವಿನ ತಲೆದಿಂಬಿನ ಮೇಲೆ ಬಿದ್ದಿದ್ದ ಬಾಡಿದ ಸಂಪಿಗೆ ಹೂಗಳ ಎಸಳುಗಳು ಸಂಜೀವನನ್ನೇ ನೋಡುವಂತಿದ್ದುವು.

## ಅಧ್ಯಾಯ ಹನ್ನೊಂದು.

ಕೋಚಣ್ಣ ರೈಗಳು ಪುತ್ತೂರಿಗೆ ಸೆಟ್ಟರ ಕೆಲಸದಲ್ಲಿ ಹೋದವರು ಮರಳುವಾಗ ಪೂವಕ್ಕೆಯ ಮನೆಗೆ ಬಂದರು. ಅವರಿಗೆ ರಾಮಪ್ಪಸೆಟ್ಟರು ಊರಿಗೆ ಬಂದುದು ತಿಳಿದಿರಲಿಲ್ಲ. ಹಾಗೆಯೇ ಪೂವಕ್ಕೆಯ ಅತಿಥಿಸತ್ಕಾರಗಳನ್ನು ಸ್ವೀಕರಿಸುತ್ತಿರುವ ವೇಳೆ ರಾಮಪ್ಪಸೆಟ್ಟರು ಶರಾಬು ಅಂಗಡಿಗೆ ಹೋಗಿದ್ದವರು ಅಂಗಳದಲ್ಲಿ ಕಾಣಿಸಿಕೊಂಡರು. ರೈಗಳು ಸಾರಿನಲ್ಲಿ ಊಟಮಾಡಿ, ಉಳಿದ ಅನ್ನಕ್ಕೆ ಮಜ್ಜಿಗೆ ಹಾಕಿಸಿಕೊಂಡು ಒಂದು ತುತ್ತು ಅನ್ನವನ್ನು ಬಾಯಿಗಿಡುತಿದ್ದರಷ್ಟೆ. ಒಮ್ಮೆಲೇ ಅವರ ಕೈ ನಡುಗಲಾರಂಭಿಸಿ ಅನ್ನದ ಮುದ್ದೆ ಎಲೆಮೇಲೆ ಬಿದ್ದಿತು. ಪೂವಕ್ಕ ಅಲ್ಲೇ ಕುಳಿತುಕೊಂಡಿದ್ದಳು. ಶಂಕರಿ ಅಡುಗೆಯ ಕೋಣೆಯೊಳಗಿದ್ದಳು. ಪಾರ್ವತಿ ಹೊರಗೆ ಗುಡ್ಡೆಯಿಂದ ಬರುತಿದ್ದಳಷ್ಟೆ.

ರೈಗಳು ಅನ್ನ ಸಾಕೆಂದು ಹೇಳಿ ಏಳುತಿದ್ದಂತೆಯೇ ರಾಮಪ್ಪಸೆಟ್ಟರು ಒಳಗೆ ಬಂದೇ ಬಿಟ್ಟರು. ರೈಗಳು ಅತ್ತಿತ್ತ ನೋಡಿದರು. ಎಲ್ಲಿಯೂ ಅವರಿಗೆ ಸರಿಯಾದ ಬಾಗಿಲು ಕಾಣಿಸಲಿಲ್ಲ. ಕೊನೆಗೆ ಉಪಾಯವಿಲ್ಲದೆ,

" ಹೋ, ಸೆಟ್ಟರೋ ! ಯಾವಾಗ ಬಂದಿರಿ ನೀವು ? ನನಗೆ ಗೊತ್ತೇ ಇಲ್ಲವಲ್ಲ ! ಇವರು ಯಾರೂ ಹೇಳಲೂ ಇಲ್ಲ ! " ಎಂದರು.

ಸೆಟ್ಟರ ಕಣ್ಣುಗಳು ಶರಾಬಿನ ಮದದಿಂದ ಕೆಂಪು ಕೆಂಪಾಗಿದ್ದುವು. ಅವರ ಗಂಟಲಿನ ನರ ಜಿಗಿದುಬೀಳುವುದು ರೈಗಳಿಗೂ ಕಾಣಿಸುತಿತ್ತು. ಒಂದು

ಕೈಯನ್ನು ಸೊಂಟಕ್ಕಿಟ್ಟುಕೊಂಡಿದ್ದರು. ಇನ್ನೊಂದು ಕೈ ಅವರ ಮೀಸೆಯ ಮೇಲಿತ್ತು.

ತುಸು ಹೊತ್ತು ಅವರು ಮಾತನಾಡಲಿಲ್ಲ. ರೈಗಳನ್ನೇ ಕಣ್ಣರಳಿಸಿ ನೋಡಿದರು. ರೈಗಳ ದೇಹವಿಡೀ ನಡುಗುತಿತ್ತು.

"ಹೌದು ಬೋಳಿಮಗನೇ, ನಾನು ಬಂದಿದ್ದೇನೆಂದು ನೀನು ಮುಂದಾಗಿ ತಿಳಿದಿದ್ದರೆ ಇಲ್ಲಿಗೆ ನೀನು ಬರುತ್ತಲೇ ಇದ್ದಿಲ್ಲ. ಮೋಸವಾಯಿತು."

ರೈಗಳಿಗೆ ಸೆಟ್ಟರ ಮಾತಿನ ಧಾಟಿ ಸ್ಪಷ್ಟವಾಯಿತು. ಹೆಂಗಸರೆದುರು ಅವರು ಸೆಟ್ಟರಿಗೆ ಮಣಿಯಲು ಸಿದ್ಧವಿರಲಿಲ್ಲ.

"ಹೌದು ಹೌದು, ಗೊತ್ತಿದೆ. ನಿನ್ನ ಬೊಂಬಾಯಿಯ ಪೋರ್ಸು ಇಲ್ಲಿ ತೋರಿಸಬೇಡ ತಿಳಿಯಿತೇ ? ನಿನ್ನ ಮನೆಗೆ ನಾನು ಬಂದಿಲ್ಲ." ಎನ್ನು ವಾಗ ರೈಗಳ ಸ್ವರ ನಡುಗಲಾರಂಭಿಸಿತು. "ನಿ ನ್ನಿ ನ್ನಿ ನ್ನಿ ನ ಗೆ ಈಗ್ ಗ್ಗ........"

"ಬಾಯಿ ಮುಚ್ಚು, ನಾಯಿ. ಇದೇನು ನಿನ್ನ ಮನೆಯೆಂದು ತಿಳಿದಿರುವೆಯಾ ? ನಿನ್ನ ಆ ಉಳಿದ ನಾಲ್ಕು ಹಲ್ಲುಗಳನ್ನೂ ಈಗಲೇ ಉದುರಿಸುತ್ತೇನೆ" ಎಂದು ಸೆಟ್ಟರು ಮುಷ್ಟಿ ಹಿಡಿದು ಮುಂದೆ ಬಂದರು. ಆವರನ್ನು ಹಿಂದಿನಿಂದ ಸಂಜೀವ ಬಂದವನು ಹಿಡಿದುಕೊಂಡ. ಸೆಟ್ಟರ ಮತ್ತು ರೈಗಳ ಮಧ್ಯೆ ಪೂವಕ್ಕ ನಿಂತು ಅಳತೊಡಗಿದಳು. ಪಾರ್ವತಿ, ಶಂಕರಿ, ರುಕುಮಿ—ಇವರೆಲ್ಲ ಅಡುಗೆ ಕೋಣೆಯಲ್ಲಿ ಸುದ್ದಿ ಮಾತನಾಡದೆ ಕುಳಿತರು.

ರೈಗಳಿಗೆ ಕುಳಿತಲ್ಲಿಂದ ಏಳಲು ಧೈರ್ಯವಿರಲಿಲ್ಲ. ಆದರೂ ಅವರು ಪರಿಸ್ಥಿತಿಗನುಸಾರಿಸಿ ಬಟ್ಟಲಲ್ಲಿದ್ದ ಅನ್ನವನ್ನು ಪುನಃ ಉಣ್ಣತೊಡಗಿದರು,

"ಯಾರ ಯಾರ ಮನೆಯನ್ನು ಹಾಳು ಮಾಡಿ ಇಲ್ಲಿಗೆ ನೀನು ತಲೆ ಹಾಕಿದ್ದೀ! ಮುಂಬಯಿಯಲ್ಲಾದರೆ ಪಠಾಣರು ನಿನ್ನ ಮಂಡೆ ಒಡೆದು ನಿನ್ನನ್ನು ಚರಂಡಿಯೊಳಗೆ ತೇಲಬಿಡುತಿದ್ದರು ಘಟಿಂಗ."

"ನಾನು ನಿನ್ನ ಹಾಗೆ ಊರಿಂದ ಓಡಲಿಲ್ಲ" ರೈಗಳು ಸ್ವಲ್ಪ ಗಟ್ಟಿಯಾಗಿಯೇ ಹೇಳಿದರು. ಅವರಿಗೆ ಸಂಜೀವ, ದೇವಪ್ಪ ಎಲ್ಲರೂ ಅಲ್ಲೇ ಇದ್ದುದರಿಂದ ಧೈರ್ಯ ಸ್ವಲ್ಪ ಹೆಚ್ಚಿತು. "ಆಮೇಲೆ ಬೊಂಬಾಯಿಯ ಮಾರ್ವಾರಿಗಳ ತಲೆ ಒಡೆದು ಸ್ವಲ್ಪ ಹಣ ಮಾಡಿದ್ದೀಯೆಂದು ಇಲ್ಲಿ ನಡುಗಿಸಬೇಡ."

“ಬಾಯಿ ಮುಚ್ಚು ನಾಯಿ. ನಿನ್ನ ನಾಲಿಗೆ ಚರ್ಮದ್ದೋ, ಅಲ್ಲ ಮೆಟ್ಟಿನ ತೊಗಲಿನದ್ದೋ? ಎಷ್ಟು ಚಂದವಾಗಿ ಮಾತನಾಡುತಿದ್ದೀ! ಎಲ್ಲಾದರೂ ಮದುವೆಯಾದ ಹೆಂಗಸರನ್ನು ಹುಡುಕಿಕೊಂಡು ಹೋಗು.”

“ಓಹೋ ಹೋ, ತಾವು ಬಹಳ ಸತ್ಯವಂತರು ಮಹಾ ಸ್ವಾಮಿ! ಈ ಊರಿನಿಂದ ಬೊಂಬಾಯಿಗೆ ಎಷ್ಟು ಮಂದಿ ಹೆಂಗಸರನ್ನು ಕರೆದುಕೊಂಡು ಹೋಗಿ ಅಲ್ಲಿ ಮಾರಾಟ ಮಾಡಿದಿರಿ ಪ್ರಭೋ? ಅದರ ಮೇಲೆ ನನಗೆ ಬಯ್ಯುವಿರಲ್ಲ!”

ರೈಗಳ ಈ ಮೂದಲಿಕೆಯನ್ನು ಕೇಳಿ ಸೆಟ್ಟರಿಗೆ ತಡೆಯಲಾಗಲಿಲ್ಲ. ಅದೂ ತನ್ನ ಬಂಧುಗಳೆದುರು ಈ ಮಾತುಗಳು! ಸೆಟ್ಟರು ಸಂಜೀವನ ಹಿಡಿತವನ್ನು ತಪ್ಪಿಸಲು ಹೆಣಗಾಡಿದರು. ಪೂವಕ್ಕ ಅವರನ್ನು ಅಡ್ಡಗಟ್ಟಿದಳು.

“ನೀನೇನು ಕುಡಿದದ್ದಲ್ಲದೆ ತಲೆಗೂ ಹೊಯ್ದುಕೊಂಡಿರುವೆಯಾ? ಸ್ವಲ್ಪ ಸಮಾಧಾನ ಮಾಡು. ಕಟ್ಟಿದ ಕೋಣನಂತೆ ಮುಂದೆ ನೆಗೆಯಬೇಡ”

“ಅಯ್ಯೋ ನಿನ್ನ ಬಾಯಿಯನ್ನು ಮುಚ್ಚೆಂದರೆ ನೀನು ಕೇಳುವುದಿಲ್ಲ ವಲ್ಲ. ನಿನ್ನ ನಾಲಿಗೆಯನ್ನೇ ಈಗ ಕೊಯ್ಯುತ್ತೇನೆ ಅನ್ಯಾಯ ಮೂರ್ತಿ!”

“ಸುಮ್ಮನೆ ಒದರಬೇಡಿ ಸೆಟ್ಟರೆ, ನಿಮ್ಮ ಪೌರುಷ ನಿಮಗೆ ಗೊತ್ತಿದೆ. ನನ್ನದು ನನಗೆ ಗೊತ್ತಿದೆ. ಮತ್ತೆ ಹಲ್ಲು ತೆಗೆಯುವುದು, ನಾಲಿಗೆ ಕಡಿಯುವುದು ಇವಕ್ಕೆಲ್ಲ ನಿಮ್ಮ ರಾಜ್ಯ ಬರಬೇಕು. ಈಗ ನನ್ನ ಮೈ ಮುಟ್ಟಿದರೆ ನೀವು ಇನ್ನು ಬೊಂಬಾಯಿ ಪಟ್ಣ ನೋಡುವ ಹಾಗಿಲ್ಲ.”

“ನಿನ್ನಂಥ ನಾಯಿ ನನಗೆ ಮಾಡುವುದೇನು?”

“ನಿನ್ನಂಥ ನಾಯಿಗಳು ಬೊಗಳುವುದನ್ನು ಅನೇಕ ವೇಳೆ ನಾನು ಕೇಳಿದ್ದೇನೆ. ನಿನ್ನ ಬೊಗಳಿಕೆಗೆ ನಾನು ಹೆದರುವೆನೆಂದೆಣಿಸಬೇಡ. ಇದು ಬೊಂಬಾಯಿಯಲ್ಲ ತಿಳಿಯಿತೇ? ನಾಳೆ ನಿನ್ನನ್ನು ಕೋಣೆಗೆ ಹಾಕಿಸುತ್ತೇನೆ. ಹುಂ!”

“ನಿನ್ನ ಅಪ್ಪನ ಸರಕಾರವೇ ಇಲ್ಲಿ? ಎಂಥೆಂಥ ಕಿಲಾಡಿಗಳನ್ನು ನಾನು ನೋಡಿದ್ದೇನೆ! ಮತ್ತೆ ನೀನೊಂದು ಏನು?”

“ನಾನು ಏನೆಂದು ತಿಳಿಯಲೇ ಬೇಕೆ ನಿನಗೆ? ಹೆಚ್ಚೆಂದರೆ ನೀನೀಗ ನನ್ನ ಪ್ರಾಣ ತೆಗೆಯಬಹುದು. ಅಷ್ಟೆ ತಾನೆ? ಇಗೋ ನಿನ್ನ ಕುರಿತಾದ

ಮಾಹಿತಿಯನ್ನು ನಾನು ಪೋಲೀಸರಿಗೆ ಕೊಟ್ಟು ವರ್ಷ ಎರಡಾಯಿತು. ಇಂತಿಷ್ಟೇ ಹುಡುಗಿಯರನ್ನು ಮುಂಬಯಿಗೆ ಸಾಗಿಸಿ ಅಲ್ಲಿ ನಿನ್ನ ಮೀನಾಕ್ಷಿಗೆ ಕೊಟ್ಟಿದ್ದೀಯೆಂದು ಲೆಕ್ಕ ತೆಗೆದಾಗಿದೆ. ಈಗ ತಾನೇ ಪೋಲೀಸರು ನಿನ್ನನ್ನು ಹುಡುಕಿಕೊಂಡು ನಿನ್ನ ಹೆಂಡತಿ ಮನೆಗೆ ಹೋದರು. ಅವರು ಇನ್ನು ಇಲ್ಲಿ ಬರುವ ಒಳಗೆ ನೀನು ಬೇಕಾದ್ದನ್ನು ಮಾಡಬಹುದು. "

ರೈಗಳು ಈ ತಾಂಬ್ರದ ಗುಡಾಣದ ಒಳಗಿಂದ ಹೊರಡುವ ಸ್ವರದಲ್ಲಿ ಆಡಿದ ಕೊನೆಯ ಮಾತು ಸೆಟ್ಟರ ಮೇಲೆ ಎಣಿಸಲಾರದಷ್ಟು ಪರಿಣಾಮವ ನ್ನುಂಟು ಮಾಡಿತು ಅವರ ತಲೆಗೇರಿದ್ದ ಶರಾಬಿನ ಮದ ಇಳಿಯಿತು. ರೈಗಳ ಇಡೀ ಮಾತುಗಳಲ್ಲಿ ' ಮೀನಾಕ್ಷಿ ' ಎಂಬ ಪದ ಸೆಟ್ಟರ ಮನಸ್ಸನ್ನು ಚುಚ್ಚಿತು. ಒಮ್ಮೆಲೇ ಅವರಿಗೆ ಪೋಲೀಸರ ಬಂದಿಖಾನೆಯ ಹೆದರಿಕೆಯುಂಟಾಯಿತು. ತತ್ಪರಿಣಾಮವಾಗಿ ಅವರು ರೈಗಳು ಹೇಳಿದುದನ್ನೆಲ್ಲ ಅಕ್ಷರಶಃ ನಂಬಿದರು.

ಸೆಟ್ಟರು ಆಮೇಲೆ ಮಾತನಾಡಲಿಲ್ಲ. ಪೋಲೀಸರ ಹೆದರಿಕೆ ಅವರಿಗೆ ರೈಗಳ ಮೇಲಿದ್ದ ಕೋಪವನ್ನು ಸ್ವಲ್ಪ ತಣಿಸಿತು.

ರೈಗಳೂ ತನಗೆ ಹೀಗೆ ಸಿಕ್ಕಿದ ಅವಕಾಶವನ್ನು ದುರುಪಯೋಗ ಪಡಿಸಲಿಲ್ಲ. ಅವರು ಊಟ ತೀರಿಸಿ ಆದಷ್ಟು ಬೇಗ ಸಾವಧಾನದಲ್ಲಿಯೇ ಪೂವಕ್ಕೆಯ ಮನೆಯಿಂದ ಹೊರಬಿದ್ದರು. ಅವರಿಗೆ ಸೆಟ್ಟರ ಬಾಯಿಯಿಂದ ತಪ್ಪಿಸಿಕೊಂಡುದು ತುಂಬಾ ಆನಂದವನ್ನುಂಟು ಮಾಡಿದ್ದಿತು. ಇಲ್ಲವಾದರೆ ಸೆಟ್ಟರು ಅವರೊಡನೇನಾದರೂ ಜಗಳಕ್ಕೆ ನಿಂತಿದ್ದರೆ ರೈಗಳ ಒಂದೆರಡು ಎಲುಬುಗಳಾದರೂ ಮುರಿಯದಿರುತಿದ್ದಿಲ್ಲ.

ಮೀನಾಕ್ಷಿಯ ಹೆಸರನ್ನು ಹಿಂದೆ ರೈಗಳು ಸೆಟ್ಟರ ಬಾಯಿಯಿಂದಲೇ ಕೇಳಿದ್ದರು. ಸೆಟ್ಟರು ಕೊಟ್ಟ ಅವಳ ವಿವರಣೆ—ವರ್ಣನೆಗಳಲ್ಲೇ ರೈಗಳು, ಸೆಟ್ಟರ ಮತ್ತು ಅವಳ ಸಂಬಂಧ ಹೇಗಿರಬಹುದೆಂದು ಕಲ್ಪಿಸಿದ್ದರು. ಮತ್ತೆ ಸೆಟ್ಟರು ಹೆಂಗಸರನ್ನು ಮುಂಬಯಿಗೆ ಕೊಂಡು ಹೋಗುವ ವಿಚಾರವಂತೂ ಊರಿನಲ್ಲೆಲ್ಲ ಪ್ರಸಿದ್ಧವಾದ ಸಂಗತಿ. ಈ ಸತ್ಯ ಮತ್ತು ಕಲ್ಪನೆಗಳನ್ನು ಒಟ್ಟು ಸೇರಿಸಿ ರೈಗಳು ಸೆಟ್ಟರನ್ನು ಹೆದರಿಸುವುದರಲ್ಲಿ ಜಯಶೀಲರಾದರೆನ್ನುವುದರಲ್ಲಿ ಅಡ್ಡಿಯಿರಲಿಲ್ಲ. ಸೆಟ್ಟರ ಮನಸಿನಲ್ಲಿ ಮೀನಾಕ್ಷಿಗೆ ಮತ್ತು ಅವರಿಗೆ ಸಂಬಂಧ

ವಿದ್ದುದು ಊರಲ್ಲಿ ಯಾರಿಗೂ ಗೊತ್ತಿಲ್ಲವೆಂದೇ ನಂಬಿಕೆ. ಈಗ ರೈಗಳು ಒಮ್ಮೆಲೇ ಅದನ್ನು ಮುಂದೆ ತಂದುದು ಅವರ ಮೇಲೆ ಆಕಸ್ಮಿಕ ಪರಿಣಾಮವನ್ನುಂಟು ಮಾಡಿತು.

ಪೂವಕ್ಕೆಗೆ ಇದೊಂದೂ ಅರ್ಥವಾಗಲಿಲ್ಲ. ಅಂತೂ ಈ ಒಂದು ಪ್ರಮಾದ ತಪ್ಪಿತಲ್ಲ! ಎಂದು ಅವಳು ಒಳಗಿಂದೊಳಗೇ ಸಂತೋಷಪಡುತಿದ್ದಳು.

ಪಾರ್ವತಿ ಆಗ ಅನ್ನ ಬೇಯಿಸಿದ ಮಣ್ಣಿನ ಪಾತ್ರೆಯ ಮುಸುರೆ ತೊಳೆಯಲು ಹೋಗಿದ್ದಳು. ಅದನ್ನು ತೊಳೆಯುವಾಗ ಒಂದೆಡೆ ' ಲಟಕ್ ' ಎಂದು ಒಡೆಯಿತು. ಅಂಜುತ್ತಂಜುತ್ತ ಅದನ್ನು ತಂದು ಅತ್ತೆಗೆ ತೋರಿಸಿದಳು.

“ಹ್ಹಾ ಮುಂಡೇ! ಅಷ್ಟು ಒಳ್ಳೆಯ ಪಾತ್ರೆಯನ್ನು ಒಡೆದುಬಿಟ್ಟೆಯಲ್ಲ! ನಿನ್ನಪ್ಪ ಇನ್ನು ತಂದುಕೊಡುತ್ತಾನೆಯೆ?” ಎಂದು ಪೂವಕ್ಕ ಬೈಗಳ ಮಳೆಯನ್ನು ಸುರಿಸುತ್ತ ಕಸಬರಿಕೆ ಎತ್ತಿ ಪಾರ್ವತಿಯ ಬೆನ್ನಿಗೆ ಒಂದೇಟಿಟ್ಟಳು. ಪಾರ್ವತಿ ಗಟ್ಟಿಯಾಗಿ ರೋದಿಸಿದಳು.

“ಅಯ್ಯೋ ನsssನಗೆ ಯಾsಕೆ ಹೊssಡೆಯುತ್ತೀರಿ! ಮಣ್ಣಿನ ಪಾsssತ್ರೆ ಮೊದಲೇss ಒಡೆದಿತ್ತೋss ಏನೋ........ನಾsನೇsನಾsದರೂ ಬೇsಕೆಂದೇs ಅದನ್ನು ಒsಡೆsಯಲಿಲ್ಲ” ಎಂದು ಪಾರ್ವತಿ ಅಳುವಿನೆಡೆಯಲ್ಲಿ ಹೇಳುತಿದ್ದಳು.

ಸಂಜೀವ ಮತ್ತು ರಾಮುಪ್ಪಸೆಟ್ಟರು ಚಾವಡಿಯಲ್ಲಿದ್ದವರು ಇಬ್ಬರೂ ಪೂವಕ್ಕೆಯ ಬಳಿ ಬಂದರು. ರಾಮಪ್ಪಸೆಟ್ಟರು ಅವಳ ಕೈಯಿಂದ ಕಸಬರಿಕೆಯನ್ನೆಳೆದು:

“ಪಾಪ! ಅವಳು ನಿನ್ನ ಭಂಗಾರದ ಪಾತ್ರೆಯನ್ನು ಹಾಳು ಮಾಡಿದಳೆ? ಮಣ್ಣಿನ ಪಾತ್ರೆಯಲ್ಲಿ ಅನ್ನ ಬೇಯಿಸುವುದು ನಿನ್ನ ಆಸೆಯಿಂದಲ್ಲವೆ? ಇಲ್ಲವಾದರೆ ಒಳಗೆ ಹಿತ್ತಾಳೆಯ ಮತ್ತೆ ತಾಂಬ್ರದ ಪಾತ್ರೆಗಳಿಗೆ ಕಡಿಮೆಯಿಲ್ಲ. ನಿನ್ನ ಹಣೆಬರಹ ಇದು! ಒಬ್ಬ ಮಾಡಲಿಕ್ಕೆ ಇನ್ನೊಬ್ಬ ತಿನ್ನಲಿಕ್ಕೆ ಎಂದು ಗುಂಡೆಯೇ ಇದೆಯಲ್ಲ!”

—ಎಂದು ಕೋಪದಿಂದ ಹೇಳಿದರು. ದೇವಪ್ಪನು ದೂರದಲ್ಲಿ ನಿಂತು ಕೊಂಡಿದ್ದವ ಮಾತನಾಡುತಿದ್ದಿಲ್ಲ. ಅವನ ಹೆಂಡತಿ ರುಕುಮಿ ಮತ್ತು ತಂಗಿ ಶಂಕರಿ, ಪಾರ್ವತಿಗೆ ಹೊಡೆಯುವಾಗ ನಗುತಿದ್ದರು.

ಸಂಜೀವನಿಗೂ ಆಗ ಕೋಪವನ್ನು ತಡೆಯಲಿಕ್ಕಾಗಲಿಲ್ಲ. ತನ್ನ ತಾಯಿಯ ಕೃತ್ಯ ತೀರ ಅನ್ಯಾಯವಾದುದೆಂದು ಅವನಿಗೆ ಸ್ಪಷ್ಟವಾಗಿತ್ತು. ಅದರ ಮೇಲೆ ರಾಮಪ್ಪಸೆಟ್ಟರು ಪೂವಕ್ಕೆಗೆ ಹೇಳಿದ ಮಾತುಗಳು ಅವನನ್ನು ಇನ್ನೂ ಕೆಣಕಿದ್ದುವು.

“ಇಗೋ ನಿನ್ನನ್ನು ಇಂದಿನ ವರೆಗೆ ತಾಯಿ ಎಂದು ಕಂಡೆ” ಸಂಜೀವ ಹಲ್ಲು ಕಡೆದ. “ಹೀಗೆ ಮಾಡಿದರೆ ನೀನು ತಾಯಿಯಲ್ಲ, ನೀನು ಮನೆಗೆ ಮಾರಿ. ನಿನ್ನ ಅಧಿಕಾರವನ್ನು ತೋರಿಸುತಿದ್ದೀ! ಜಾಗ್ರತೆ.”

ಪೂವಕ್ಕ ಸೆಟ್ಟರ ಮಾತಿಗೆ ಏನನ್ನೂ ಉತ್ತರ ಕೊಡದಿದ್ದರೂ ಸಂಜೀವನ ಮಾತುಗಳನ್ನು ಕೇಳಿ ಅವಳು ಕಿಡಿಕಿಡಿಯಾದಳು.

“ನಿನ್ನ ಹೆಂಡತಿಯ ಕಡೆಯಲ್ಲಿ ವಕಾಲತು ವಹಿಸುತಿದ್ದೀಯಾ? ನಿನ್ನ ಬಲ ಅವಳಿಗೆ ಇಷ್ಟು ಇದ್ದರೆ ಮತ್ತೆ ಅವಳಿಗೇನು ಕಡಿಮೆ? ನನ್ನನ್ನಲ್ಲ ದೇಹ ರನ್ನು ಕೂಡಾ ಕಡೆಗಣಿಸಬಹುದು.”

“ನಾನು ಯಾರ ಕಡೆಯಲ್ಲಿಯೂ ವಕಾಲತ್ತು ನಡೆಸುವುದಿಲ್ಲ. ಇದ್ದು ದನ್ನು ಹೇಳುವಾಗ ನಿನಗೆ ಕೋಪ ಬರುವುದು. ನಿನಗೆ ನನ್ನ ಹೆಂಡತಿ ಏನು ಮಾಡಿದ್ದಾಳೆ? ಬೈದಿದ್ದಾಳೆಯೋ, ಹೊಡೆದಿದ್ದಾಳೆಯೇ, ಕದ್ದಿದ್ದಾಳೆಯೋ? ನೀನು ಅವಳಿಗೆ ಎಂಥ ಕಷ್ಟಗಳನ್ನು ಕೊಡುತಿದ್ದೀ ಎಂಬುದು ಎಲ್ಲರಿಗೂ ತಿಳಿದಿದೆ. ನಿನ್ನ ಯಜಮಾನಿಕೆಯ ಪ್ರಭಾವ ಇದು. ಲೋಕದಲ್ಲೆಲ್ಲ ಸೊಸೆ ಯರನ್ನು ಅತ್ತೆಂದಿರು ಹೀಗೆಯೇ ನೋಡುತಿದ್ದಾರೆಯೇ? ನಮ್ಮಷ್ಟು ಅನು ಕೂಲವುಳ್ಳವರು ಮನೆಯ ಹೆಂಗಸರನ್ನು ಗದ್ದೆಗಳಲ್ಲಿ ಆಳುಗಳಂತೆ ದುಡಿಸು ತ್ತಾರೆಯೇ? ನಿನ್ನ ಮಗಳನ್ನೇಕೆ ಆ ಕೆಲಸಕ್ಕೆ ಕಳಿಸುವುದಿಲ್ಲ? ನಿನ್ನ ದೊಡ್ಡ ಸೊಸೆಯನ್ನೇಕೆ ಗೊಬ್ಬರ ಹೊರಲು ಹೇಳುವುದಿಲ್ಲ?”

ಅಷ್ಟರಲ್ಲಿ ದೇವಪ್ಪ ಸಿಡಿದೆದ್ದ: “ಏ ನಾಯಿಮಗನೇ, ನನ್ನ ಸುದ್ದಿ ನಿನಗೆ ಬೇಡ. ನನ್ನ ಹೆಂಡತಿಯ ಕುರಿತು ಉಸಿರೆತ್ತಿದರೆ ಜಾಗ್ರತೆ!”

"ಹೌದು." ಸಂಜೀವ ಮುಂದರಿಸಿದ: "ನೀನೆಷ್ಟು ಬುದ್ಧಿವಂತ ನೆಂದು ನನಗೆ ಗೊತ್ತಿಲ್ಲವೆಂದು ಭಾವಿಸಿದೆಯಾ? ಇಲ್ಲಿಂದ ಎಷ್ಟು ಮುಡಿ ಅಕ್ಕಿ ನಿನ್ನ ಮಾವನ ಮನೆಗೆ ಸಾಗಿಸಿದ್ದೀ? ಎಷ್ಟು ರೂಪಾಯಿಯ ವಸ್ತ್ರ ಗಳನ್ನು ಅವರಿಗೆ ಇಲ್ಲಿಯ ಲೆಕ್ಕದಿಂದ ತೆಗೆಸಿಕೊಟ್ಟಿದ್ದೀ? ಈಗ ನೀನು ಮಹಾ ಸತ್ಯವಂತ, ಪ್ರಾಮಾಣಿಕ ಮನುಷ್ಯ."

ದೇವಪ್ಪ ಹಿಡಿದುಕೊಂಡು ಬರುತಿದ್ದ ದೊಣ್ಣೆಯನ್ನು ರಾಮಪ್ಪಸೆಟ್ಟರು ಎಳೆದು: "ಒಳ್ಳೆಯ ಮಾತಿನಲ್ಲಿ ಇಲ್ಲಿಂದ ನಡಿಯುತ್ತೀಯೋ ಇಲ್ಲವೋ?" ಎಂದು ಅದೇ ದೊಣ್ಣೆಯನ್ನು ಅವನ ತಲೆಯ ಮೇಲಕ್ಕೆತ್ತಿದರು. ಅದನ್ನು ಕಂಡು ಅವನು ದೂರಕ್ಕೆ ಓಡಿಹೋಗಿ ನಿಂತುಕೊಂಡ.

ಪೂವಕ್ಕ ಮತ್ತೆ ಗಟ್ಟಿಯಾಗಿ ಅಳತೊಡಗಿದಳು. ಪಾರ್ವತಿ ಅತ್ತು ಅತ್ತು ಶಾಂತಿ ಮಾಡಿದಳು.

ರಾಮಪ್ಪಸೆಟ್ಟರೆಂದರು: "ಪೂವು, ನಿನ್ನನ್ನು ಈತನಕ ತಂಗಿಯೆಂದು ಪ್ರೀತಿಸಿದೆ. ಆದರೆ ನಿನ್ನಂಥ ಕಪಟಿ, ವಂಚಕಿ ಯಾರೂ ಇಲ್ಲ. ನಿನಗೆ ಚಿಕ್ಕಂದಿನಿಂದ ಒಟ್ಟಿಗೆ ಬೆಳೆದ ನನಗಿಂತಲೂ ಆ ಕೋಚ ಹೆಚ್ಚಿಗೆ ಬೇಕಾದವ. ನಾವು ಬೇರೆ ಬೇರೆ ಇದ್ದರೂ ಒಟ್ಟಾಗಬೇಕೆಂದು ನಾನು ಬಯಸಿದ್ದಕ್ಕೆ ನೀನು ಎರಡು ಬಗೆದು ಅವನ ಮಾತನ್ನು ಕೇಳಿದೆ. ಈಗ ಇಲ್ಲಿ ನಿನ್ನ ಕಾರುಭಾರು ಆದೇ. ಆ ಕಳ್ಳ, ಆ ಪೋಲಿ ದೇವು ನಿನಗೆ ಮೆಚ್ಚುಗೆಯಾಗುವವ. ಈ ಹುಡುಗ ಪಾಪ ನಿನ್ನ ಶಿಕ್ಷೆಗಳನ್ನು ಹೆಂಡತಿಯೊಡನೆ ಅನುಭವಿಸುತ್ತಿರುವುದಕ್ಕೆ ನೀನು ಕೊಡುವ ಪ್ರತಿಫಲ ಇದೇ. ನೀನು ಸಾಯುವುದರೊಳಗೆ ನಿನ್ನ ದೊಡ್ಡ ಮಗ ಈ ಆಸ್ತಿಯನ್ನಿಡೀ ಮಾರಾಟ ಮಾಡದೆ ಬಿಟ್ಟಾನೆ?"

ಅಂದು ಮಧ್ಯಾಹ್ನ ಮನೆಯವರಿಗೆ ಯಾರಿಗೂ ಊಟವಿಲ್ಲ. ಹೆಂಗಸರೆಲ್ಲ ಅಳುವವರು. ಗಂಡಸರು ಕೋಪದಿಂದ ಕಿಡಿ ಕಾರುವವರು.

ಸೆಟ್ಟರು ಮರುಗಳಿಗೆಯಲ್ಲೇ ತನ್ನ ಅಂಗಿ ವಸ್ತ್ರಗಳನ್ನುಟ್ಟು ಮನೆ ಯಿಂದ ಹೊರಟರು. ಅವರ ಹಿಂದೆಯೇ ಸಂಜೀವ ತುಸು ದೂರ ಹೋದ.

ಸಂಜೆ ಪೂವಕ್ಕನ ಅಳು ನಿಂತಿತು. ಸೊಸೆಯರಿಬ್ಬರಿಗೂ ಅಡಿಗೆ ಸಾಮಾನುಗಳನ್ನು ಮುಟ್ಟಬಾರದೆಂದಳು. ಶಂಕರಿ ಮತ್ತೆ ಅವಳು ಇಬ್ಬರೇ ನೀರು ತಂದು, ಅಕ್ಕಿ ತೊಳೆದು ಒಲೆಗೆ ಬೆಂಕಿ ಉರಿಸಿದರು.

ಸಂಜೀವ ಅವನ ವಸ್ತ್ರಗಳನ್ನೆಲ್ಲ ಮಡಚಿ ಪೆಟ್ಟಿಗೆಯಲ್ಲಿ ಹಾಕುತಿದ್ದ. ಒಮ್ಮೆಲೇ ದೇವಪ್ಪ ಅವನ ಬಳಿ ಬಂದು “ನಾಯಿಮಗನೇ, ನನ್ನ ಕುರಿತಾಗಿ ಊರಲ್ಲೆಲ್ಲ ಚಾಡಿ ಹೇಳಿದ್ದೀಯಾ ? ನನ್ನ ನೆಂಟರು ಬಡವರೆಂದೂ, ನಾನು ಅವರಿಗೆ ಸಹಾಯ ಮಾಡುತಿದ್ದೇನೆಂದೂ ಎಲ್ಲರೊಡನೆ ಪ್ರಚಾರ ಮಾಡಿದ್ದೀ. ನಿನ್ನಪ್ಪನ ಗಂಟನ್ನು ನಾನು ಖರ್ಚು ಮಾಡಲಿಲ್ಲ ತಿಳಿಯಿತೇ ? ದೊಡ್ಡದೊಡ್ಡ ಜನಗಳು ನಿನ್ನ ಹಿಂದೆ ಇದ್ದಾರೆಂದು ನಿನ್ನ ಗರ್ವ ಬೇಡ. ನಿನ್ನ ಬೆನ್ನುಹುರಿಯನ್ನು ಹುಡಿಹುಡಿ ಮಾಡಿಯೇನು. ಹಂ ! ” ಎಂದ.

ಸಂಜೀವ ಮಾತನಾಡಲಿಲ್ಲ. ದೇವಪ್ಪನ ಮೇಲೆ ಒಮ್ಮೆಲೇ ನೆಗೆಯಬೇಕೆಂದು ಅವನ ಮನಸ್ಸು ಕಾತರಿಸುತಿದ್ದರೂ, ಅವನು ತನ್ನ ಕೆಲಸದಲ್ಲೇ ಮಗ್ನನಾದ. ದೇವಪ್ಪ ಇನ್ನೂ ಅರ್ಧ ಗಂಟೆ ಬೈದು ಸಂಜೀವ ಎದುರು ಮಾತನಾಡದಿದ್ದಕ್ಕಾಗಿ, ಒಂದೆಡೆಯಿಂದ ನಿರಾಶೆಹೊಂದಿ, ಇನ್ನೊಂದೆಡೆಯಿಂದ ತನ್ನ ಪೌರುಷ ಪ್ರದರ್ಶನಕ್ಕಾಗಿ ಹೆಮ್ಮೆಪಟ್ಟು ಹಿಂದೆ ಹೋದ.

ಮತ್ತೆ ಸಂಜೀವ ಪಾರ್ವತಿಯನ್ನು ಕರೆದ. ಅವಳು ಅಳುತ್ತ ಬಂದಳು.

“ನಿನ್ನ ಬಂಧನ ಇನ್ನು ಮುಗಿಯಿತು” ಸಂಜೀವನೆಂದ. “ನಾನಿನ್ನು ಬರಲಾರೆ. ನಿನ್ನ ನೋಡಸಿಕ್ಕಲಾರೆ. ನಿನಗೆ ಪೂರ್ಣ ಸ್ವಾತಂತ್ರ್ಯವಿದೆ. ಇಲ್ಲಿಂದ ನೀನು ಯಾವಾಗ ಬೇಕಾದರೂ ಹೋಗಬಹುದು.”

ಪಾರ್ವತಿ ಇದನ್ನು ಕೇಳಿ ಮತ್ತೂ ಜೋರಾಗಿ ಅಳುತಿದ್ದಂತೆಯೇ ಸಂಜೀವ ಪೆಟ್ಟಿಗೆಯನ್ನು ಹಿಡಿದುಕೊಂಡು ಹೊರಟ. ಅವಳು ಅವನ ಕಾಲಿಗೆ ಬಿದ್ದಳು.

ಸಂಜೀವ ಮತ್ತೆ ಅವಳ ಮುಖವನ್ನು ಕೂಡಾ ನೋಡಲಿಲ್ಲ.

## ಅಧ್ಯಾಯ ಹನ್ನೆರಡು.

ನಾರಾಯಣಶೆಟ್ಟರು ಮಧ್ಯಾಹ್ನ ಚಾವಡಿಯಲ್ಲಿ ಮಲಗಿಕೊಂಡಿದ್ದರು. ಆಗ ಗುಬ್ಬಚ್ಚಿಗಳ ಧ್ವನಿ ಬಹಳ ಜೋರಾಯಿತು. ಸೆಟ್ಟರು ಏನೆಂದು ಎದ್ದು

ನೋಡಿದರು. ಒಂದು ಉದ್ದದ ಕೇರೆಹಾವು ಗುಬ್ಬಚ್ಚಿಗಳ ಗೂಡಿನ ಸಮೀಪ ಹರಿಯುತಿತ್ತು. ಅವುಗಳ ಮರಿಗಳೂ ಗೂಡಿನೊಳಗಿಂದ 'ಚುಂಯ್ ಚುಂಯ್' ಎಂದು ಕೂಗುತಿದ್ದುವು

ಅವರು ನೋಡುತ್ತಿದ್ದಂತೆಯೇ ಕೇರೆಹಾವು ಹಕ್ಕಿಗಳ ಗೂಡಿನೊಳಗೆ ತಲೆಹಾಕಿತೇ ಹಾಕಿತು. ಗಂಡು ಮತ್ತು ಹೆಣ್ಣು ಗುಬ್ಬಚ್ಚಿಗಳು ಜೀವದಾಸೆ ಬಿಟ್ಟು ಕೇರೆ ಹಾವನ್ನು ಕಾಲಿನ ಉಗುರುಗಳಿಂದ ಪರಚುತ್ತ ಬೊಬ್ಬಿಡುತಿದ್ದುವು. ಒಳಗಿನ ಮರಿಗಳ ಚಿಲಿಪಿಲಿ ಬಹಳ ಜೋರಾಯಿತು.

ಸೆಟ್ಟರು ಒಂದು ಕೋಲನ್ನು ತೆಗೆದುಕೊಂಡು ಹೋಗಿ ಕೇರೆ ಹಾವಿನ ತಲೆಗೇ ಒಂದು ಪೆಟ್ಟು ಕೊಟ್ಟರು ಹಾವು ಒಮ್ಮೆಲೇ ಗಾಬರಿಯಿಂದ ತಲೆ ಎತ್ತಿ ಹಿಂದೆ ಸರಿಯಲು ನೋಡಿತು. ಬಹುಶಃ ಪೆಟ್ಟು ಬಲವಾಗಿರಬೇಕು. ಹುಲ್ಲಿನ ಪಕ್ಕಾಸುಗಳ ಅಂತರದಲ್ಲಿ ಹರಡಿದ್ದ ಅದರ ದೀರ್ಘವಾದ ದೇಹ ಒಮ್ಮೆಯೇ ಉರುಳಿ ಸೆಟ್ಟರ ಹೆಗಲಿಗೆ ಬಿದ್ದು ಕೆಳಗೆ ನೆಲಕ್ಕೆ ಅಪ್ಪಳಿಸಿತು.

ಒಂದು ಘಳಿಗೆ ಸೆಟ್ಟರಿಗೆ ಕೇರೆ ಹಾವನ್ನು ಕಂಡು ಹೇಸಿಗೆಯಾಯಿತು. ಅದರ ಹೊರಗಾದ ಮೈಯ ಚರ್ಮ ಅವರ ಹೆಗಲನ್ನು ಒರಸಿತ್ತು. ಈಗ ಅದರ ಮೈಯಿಂದ ದುರ್ಗಂಧಯುಕ್ತವಾದ ಸುಣ್ಣದಂತಹ ದ್ರವ ಸುರಿಯುತಿತ್ತು. ಬಾಯಿಯಿಂದ ಅದರ ಎರಡೆಳೆಯ ನಾಲಿಗೆಯನ್ನು ಹೊರಗೆ ಹಾಕಿ ಅದು ಹೊರಳಾಡುತಿತ್ತು. ಹಕ್ಕಿಗಳ ಗೌಜಿ ನಿಂತಿತು.

ಪ್ರತಿಯೊಂದು ವರುಷವೂ ಹಾಗೆಯೇ ಗುಬ್ಬಚ್ಚಿಗಳು ಅದೇ ಸ್ಥಳದಲ್ಲಿ ಹೈಹುಲ್ಲಿನ ಗೂಡುಗಳನ್ನು ಕಟ್ಟುತಿದ್ದುವು. ಅವುಗಳ ವಾಸ ಚಾವಡಿಯಲ್ಲೇ. ನಾರಾಯಣಸೆಟ್ಟರು ಸಣ್ಣವರಿದ್ದಾಗ ಒಮ್ಮೆ ಗುಬ್ಬಚ್ಚಿಗಳು ಕಸ ಮಾಡುವುವೆಂದು ಅವುಗಳ ಗೂಡನ್ನು ಕಸಬರಿಕೆಯಿಂದ ನೆಲಕ್ಕುರುಳಿಸಿದ್ದರು. ಆದರೆ ಅಷ್ಟರೊಳಗೇ ಹಕ್ಕಿ ಅದರೊಳಗೆ ಮೊಟ್ಟೆಗಳನ್ನಿಟ್ಟಿತ್ತು. ಮೂರು ಮೊಟ್ಟೆಗಳು ನೆಲಕ್ಕೆ ಬಿದ್ದು ಒಮ್ಮೆಲೇ ಒಡೆದು ಹೋದುವು. ಗುಬ್ಬಚ್ಚಿಗಳ ಗಲಾಟೆಗಂತೂ ತುದಿ ಮೊದಲಿಲ್ಲ. ಆಗ ಅವರ ಮಾವ ಕೋಟಿಸೆಟ್ಟರು ಹಿಂದಿನಿಂದ ಬಂದು ನಾರಾಯಣಸೆಟ್ಟರಿಗೆ ಬೆತ್ತದಿಂದ ನಾಲ್ಕು ಪೆಟ್ಟು ಎರಿಸಿದ್ದರು. ಅಂದಿನಿಂದ ಸೆಟ್ಟರಿಗೆ ಗುಬ್ಬಚ್ಚಿಗಳೆಂದರೆ ಬಹಳ ಪ್ರೀತಿ. ಅವುಗಳಲ್ಲಿ ಗಂಡುಹಕ್ಕಿಗೆ ಕಣ್ಣುಗಳ ಸುತ್ತು ಕಪ್ಪು ಬಣ್ಣವಿದೆಯೆಂದೂ ಹೆಣ್ಣುಹಕ್ಕಿಗೆ ಏನೊಂದೂ ಬಣ್ಣ

ವಿಲ್ಲೆಂದೂ ಅವರು ಇತರರಿಂದ ಕೇಳಿ ತಿಳಿದಿದ್ದರು. ಅವರು ಒಬ್ಬಂಟಿಗರಾಗಿ ಚಾವಡಿಯಲ್ಲಿ ಕುಳಿತಿದ್ದಾಗ ಅವುಗಳ ಜೀವನದ ವಿವಿಧ ಮುಖಗಳನ್ನು ಕಂಡಿದ್ದರು. ಹೆಣ್ಣು ಹಕ್ಕಿ ಗಂಡು ಹಕ್ಕಿಯನ್ನು ಕಾಡುವುದು, ಗಂಡುಹಕ್ಕಿ ಹೆಣ್ಣು ಹಕ್ಕಿಯನ್ನು ಕಾಡುವುದು, ಆಮೇಲೆ ಪರಸ್ಪರ ಪ್ರೀತಿಯಿಂದ ಎರಡು ಹಕ್ಕಿಗಳೂ ಒಟ್ಟಿಗೆ ಹೊರಗಿನಿಂದ ಹುಲ್ಲು ಮುಂತಾದ ಗೂಡು ಕಟ್ಟುವ ಸಾಮಗ್ರಿಗಳನ್ನು ತರುವುದು ಆಮೇಲೆ ಮರಿಗಳಿಗೆ ಆಹಾರ ತಂದುಕೊಟ್ಟು ಅವುಗಳಿಗೆ ಹಾರಲಿಕ್ಕೆ ಕಲಿಸುವುದು—ಇವನ್ನೆಲ್ಲ ವರುಷಗಟ್ಟಲೆಯಲ್ಲಿ ನೋಡಿ ಅವುಗಳ ಜೀವನದ ಮೇಲೆ ಅಸೂಯೆಪಟ್ಟಿದ್ದರು. ಅವರು ಒಮ್ಮೊಮ್ಮೆ ಎರಡೂ ಗುಬ್ಬಚ್ಚಿಗಳೂ ಹೊರಗೆ ಆಹಾರ ತರಲು ಹೋದಾಗ ಮರಿಗಳನ್ನು ಮೆಲ್ಲನೆ ಹೊರಗೆ ತೆಗೆದು ಅವುಗಳನ್ನು ಅಂಗೈಯಲ್ಲಿಟ್ಟು ನೋಡಿದ್ದೂ ಇತ್ತು. ಗೂಡಿನೊಳಗೆ ಇದ್ದ ಅವುಗಳ ಗರಿಗಳ ಹಾಸಿಗೆಯನ್ನು ಅನೇಕ ಸಲ ಮುಟ್ಟಿ ನೋಡಿದ್ದರು.

ಸೆಟ್ಟರಿಗೆ ಗುಬ್ಬಚ್ಚಿಗಳ ಸಂಸಾರದ ಮೇಲೆ ತುಂಬ ಜಿಜ್ಞಾಸೆ ಹುಟ್ಟಿತ್ತು. ಸುಖ–ದುಃಖ–ಮಮತೆಗಳನ್ನು ಅವರು ಅವುಗಳ ನಡತೆಯಲ್ಲಿ ನೋಡಿದ್ದರು. ವರುಷಕ್ಕೊಂದು ಬಾರಿ ಅವು ಲೋಕದಲ್ಲಿ ಹೊಸ ಜೀವಗಳನ್ನು ಸೃಷ್ಟಿಸುತಿದ್ದುವು. ಆ ಜೀವಗಳ ರಕ್ಷಣೆ ಲಾಲನೆ-ಪಾಲನೆಗಳನ್ನು ಅವುಗಳು ಬಹಳ ಅನ್ಯೋನ್ಯತೆಯಿಂದ ಮಾಡುತಿದ್ದುವು. ಅವುಗಳ ಆಹಾರವಾದರೋ ಚಿಕ್ಕ ಧಾನ್ಯಗಳ ಕವಳಗಳು, ಸಣ್ಣ ಹುಳಗಳು ಮಾತ್ರ. ಅವುಗಳಿಗೆ ತಮ್ಮ ರಕ್ಷಣೆಗಾಗಿ ಇಲ್ಲವೇ ಮರಿಗಳ ರಕ್ಷಣೆಗಾಗಿ ಆಸ್ತಿ-ಪಾಸ್ತಿ ಏನೂ ಇಲ್ಲ. ಅವುಗಳ ಗೂಡು ಬೆಂಕಿಯಲ್ಲಿ ಉರಿದು ಹೋಗಬಹುದು ಇಲ್ಲವೇ ಗಾಳಿಯಲ್ಲಿ ಹಾರಿ ಹೋಗಬಹುದು. ಅಲ್ಲದೆ ಬೆಕ್ಕು ಮತ್ತೆ ಕೇರೆ ಹಾವುಗಳು ಅವುಗಳ ನೈಸರ್ಗಿಕ ವೈರಿಗಳು. ಇಷ್ಟೆಲ್ಲ ಅಪಾಯಗಳ ಮಧ್ಯದಲ್ಲೂ ಅವುಗಳು ಒಂದೇ ಸಮನೆ ಜೀವಿಸುತಿದ್ದುವು.

ಸೆಟ್ಟರು ಎಷ್ಟೋ ಸಲ ಅವುಗಳ ಮರಿಗಳನ್ನು ಕೇರೆ ಹಾವುಗಳ ಬಾಯಿಯಿಂದ ರಕ್ಷಿಸಿದ್ದರು. ಒಮ್ಮೆ ಒಂದು ನಾಗರಹಾವನ್ನು ಕೂಡಾ ಅವರು ಕೊಂದು ಹಾಕಿ ಮತ್ತೆ ಹತ್ತಿಪ್ಪತ್ತು ರೂಪಾಯಿಗಳಷ್ಟು ಖರ್ಚುಮಾಡಿ ಅದಕ್ಕೆ ಬ್ರಾಹ್ಮಣರಿಂದ ಶಾಸ್ತ್ರೋಕ್ತವಾಗಿ ಶ್ರಾದ್ಧ ಮಾಡಿಸಿದ್ದರು. ಏನೋ ಕೆಲವು

ಸಲ ಅವರಿಲ್ಲದ ವೇಳೆಯಲ್ಲಿ ಬೆಕ್ಕೋ ಹಾವೋ ಹಕ್ಕಿಯ ಮರಿಗಳನ್ನು ಕಸಿದು ಕೊಂಡು ಹೋದುದಿತ್ತು. ಆಗ ಸೆಟ್ಟರು ಬಂದರೆಂದರೆ ಎರಡು ಗುಬ್ಬಚ್ಚಿಗಳೂ ಅವರೆದುರು ಬಂದು ಚಿಲಿಮಿಲಿ ಎಂದು ಕೂಗದಿಲ್ಲ. ಸೆಟ್ಟರ ಮನಸ್ಸು ಆಗ ಕರಗುವುದು.

ಕೆಳಗೆ ಬಿದ್ದಿದ್ದ ಕೇರೆ ಹಾವು ದೇಹವನ್ನು ಎಳೆಯುತ್ತ ಎಳೆಯುತ್ತ ಹರಿದು ಅಂಗಳದಲ್ಲಿದ್ದ ಒಂದು ಬಿಲವನ್ನು ಹೊಕ್ಕಿತು. ಗುಬ್ಬಚ್ಚಿಗಳು ಶಾಂತವಾದುವು. ಸೆಟ್ಟರಿಗೆ ಕೇರೆ ಹಾವಿನ ನಡಿಗೆಯನ್ನು ಕಂಡು ಜಿಗುಪ್ಸೆ ಹುಟ್ಟಿತು. ಅದರ ವಿಕಾರವಾದ ಬಣ್ಣ, ದೀರ್ಘವಾದ ದೇಹವನ್ನು ನೆನೆಸುವಾಗ ಸೆಟ್ಟರ ಮನಸಿನಲ್ಲಿ ಇಡೀ ಕೇರೆ ಹಾವುಗಳ ವರ್ಗಕ್ಕೇ ಶಾಪ ಕೊಟ್ಟುಬಿಡಬೇಕೆಂದೆನಿಸಿತು. ಆದರೂ ಅದಕ್ಕೆ ಹೆದರಿಕೆಯಿದೆ, ನೋವಿದೆ. ಆ ದೃಷ್ಟಿಯಿಂದಲಾದರೂ ಅದು ತನ್ನಂತಿದೆ ಎಂದು ಅವರು ಮನಗಂಡರು.

ಗುಬ್ಬಚ್ಚಿಗಳ ಚಿಲಿಪಿಲಿ ಇನ್ನೂ ಮುಗಿದಿರಲಿಲ್ಲ. ಒಳಗಿನ ಮರಿಗಳು ತಮ್ಮ ಕೆಂಪು ಕೆಂಪಾದ ಕೊಕ್ಕುಗಳನ್ನು ಗೂಡಿನ ಬಾಯಿಯಿಂದ ಹೊರಗೆ ಹಾಕುತಿದ್ದುವು. ಹೊರಗಿನಿಂದ ಹೆಣ್ಣು ಹಕ್ಕಿ ಏನನ್ನೋ ಅವುಗಳ ಚಿಕ್ಕ ಕೊಕ್ಕುಗಳೊಳಗೆ ಹಾಕುತಿತ್ತು. ಅಷ್ಟೊತ್ತಿಗೆ ಗಂಡು ಹಕ್ಕಿ ಬಂತು, ಹೆಣ್ಣು ಹಕ್ಕಿ ಹಾರಿತು. ಪುನಃ ಮರಿಗಳ ಚಿಲಿಪಿಲಿ ಹೆಚ್ಚಿತು. ಕೊಕ್ಕುಗಳನ್ನು ತೆರೆದು ಗಂಡು ಹಕ್ಕಿ ಸುರಿದ ಕಾಳುಗಳನ್ನು ನುಂಗತೊಡಗಿದವು. ಅದು ಹಾರಿ ಹೋಗುವಾಗ ಹೆಣ್ಣು ಗುಬ್ಬಚ್ಚಿ ಒಂದು ಎರೆಹುಳದೊಡನೆ ಸಿದ್ಧವಾಗಿತ್ತು. ಹೀಗೆಯೇ ಕೆಲಹೊತ್ತು ಈ ಆಹಾರ ಉಣ್ಣಿಸುವ ಕೆಲಸವಾಯಿತು. ಮರಿಗಳ ಬೊಬ್ಬೆ ನಿಂತಿತು. ಗಂಡು ಮತ್ತೆ ಹೆಣ್ಣು ಹಕ್ಕಿಗಳೆರಡೂ ದೂರ ಹೋಗಿ ಅವುಗಳ ಗರಿಗಳನ್ನು ಕೊಕ್ಕಿನಿಂದ ಮತ್ತು ಕಾಲುಗಳಿಂದ ಕುಕ್ಕಿ ಸರಿಪಡಿಸಿದುವು.

ಸೆಟ್ಟರು ಅವುಗಳನ್ನು ನೋಡುವುದರಲ್ಲೇ ಮಗ್ನರಾಗಿದ್ದರು.

ಆಗ ಕೋಚಣ್ಣ ರೈಗಳ ಸವಾರಿ ಬಂತು. ಅವರು ಸೆಟ್ಟರಿಗೆ ನಮಸ್ಕರಿಸಿ ಕಾಲು ತೊಳೆದು ಮೇಲೆ ಬಂದು ಸೆಟ್ಟರು ಬಿಡಿಸಿದ ಜಮಖಾನದಲ್ಲಿ ಕುಳಿತುಕೊಂಡರು. ಅವರು ಸೆಟ್ಟರೊಡನೆ ಪುತ್ತೂರು ಕೋರ್ಟಿನಲ್ಲಿ ದಾಖಲ ಮಾಡಿದ ವ್ಯಾಜ್ಯದ ಕುರಿತು ವಿವರಿಸಿದರು.

"ರೈಗಳಿಗೆ ಊಟವಾಯಿತೆ? ಆಗದಿದ್ದರೆ ಬನ್ನಿ" ಎಂದು ಲಿಂಗವ್ವ ಒಳಗಿನಿಂದಲೇ ಹೇಳಿದಳು.

ರೈಗಳು "ಊಟ ಆಗಿದೆ" ಎಂದರು.

ಸೆಟ್ಟರು ಆಗ ಎಲ್ಲಿ ಊಟವಾಯಿತೆಂದು ಕೇಳಲು, ರೈಗಳು ಪೂವಕ್ಕನ ಮನೆಯಲ್ಲೆಂದು ಉತ್ತರ ಕೊಟ್ಟರು.

"ಊಹೂಂ" ಸೆಟ್ಟರು ವ್ಯಂಗವಾಗಿ ನಕ್ಕರು. "ಇನ್ನೂ ನಿಮ್ಮ ಹಳೆಯ ಸಂಬಂಧವನ್ನು ಬಿಟ್ಟಿಲ್ಲವೇ? ಏನು ವಿಶೇಷ? ಪೂವಕ್ಕ ಹೇಗಿದ್ದಾಳೆ?"

"ಹಳೆಯ ಸಂಬಂಧವೇನು, ಹೊಸ ಸಂಬಂಧವೇನು ಸೆಟ್ಟರೆ? ನನ್ನಂಥವನಿಗೆ ನಿಮ್ಮಂತಹ ಯಾರಲ್ಲಾದರೂ ಹೊಟ್ಟೆ ತುಂಬಿಸಿದರೆ ಸೈ. ಇವತ್ತು ಮಕ್ಕಳು ಉಪವಾಸ ಬೀಳುತ್ತಾರೆ, ನಾಳೆ ಹೆಂಡತಿ ಪ್ರಸವಿಸಲಿದ್ದಾಳೆ. ನಾಡದು ಮಗಳನ್ನು ಮದುವೆ ಮಾಡಿ ಕೊಡಬೇಕು, ಇತ್ಯಾದಿ ತಾಪತ್ರಯಗಳೇನೂ ನನಗಿಲ್ಲ. ಬದುಕಿದಷ್ಟು ದಿನ ಬದುಕಿದ, ಸತ್ತರೆ ನರಿ-ನಾಯಿಗಳಾದರೂ ದೇಹವನ್ನು ತಿಂದು ಮಣ್ಣುಮುಕ್ಕಿಸದಿರಲಿಕ್ಕಿಲ್ಲವಷ್ಟೆ!"

ರೈಗಳಿಂದ ಸೆಟ್ಟರು ಇಂಥ ಯಥಾರ್ಥ ವಾದವನ್ನು ಕೇಳಿದುದು ಇದೇ ಮೊದಲು. ಬಾಕಿ ಸಮಯದಲ್ಲಿ ರೈಗಳು ಯಾವಾಗಲೂ ಲೋಕದ ಭಾಷೆಯಲ್ಲಿ ಮಾತನಾಡುತಿದ್ದರು ವಿನಃ ತನ್ನ ವೈಯ್ಯುಕ್ತಿಕ ಜೀವನದ ಕುರಿತಾಗಿ ಅದೂ ತನ್ನ ಬಾಳಿನ ನೀತಿಯ ಕುರಿತು ಈವರೆಗೆ ಅವರು ಮಾತನಾಡಿದ್ದಿಲ್ಲ. ಸೆಟ್ಟರು, ರೈಗಳು ಇನ್ನೂ ಸ್ವಲ್ಪ ಇದೇ ಧಾಟಿಯಲ್ಲಿ ಮಾತನಾಡುವಂತೆ ಪ್ರೇರೇಪಿಸಿದರು.

"ಹಾಗಾದರೆ ರೈಗಳೇ, ನೀವು ಇಷ್ಟೆಲ್ಲ ಹಣ ಮಾಡಿದ್ದೀರಲ್ಲ. ಇದು ಯಾರಿಗಾಗಿ? ನಾಳೆ ನೀವು ಸತ್ತನಂತರ ಯಾರು ಅದನ್ನು ತಿನ್ನಬೇಕು?"

"ಏನೋ" ರೈಗಳು ನೆಗಾಡಿದರು. "ನಾಳೆಯ ಕುರಿತೇ? ನಾಳೆಯೆಂಬುದು ನನಗಿಲ್ಲ. ನನಗೆ ಇಂದು ಮಾತ್ರ ಸಹಜವಾದುದು. ಮತ್ತೆ ನಾನೇಕೆ ಹಣ ಮಾಡಿದ್ದೇನೆನ್ನುವಿರಲ್ಲ! ಅದಕ್ಕೇ ಕೃಷ್ಣಪರಮಾತ್ಮನು ಗೀತೆಯಲ್ಲಿ ಹೀಗೆಂದಿದ್ದಾನೆ:

ಕರ್ಮಣ್ಯೇ ವಾಧಿಕಾರಸ್ತೇ ಮಾಫಲೇಷು ಕದಾಚನ: |
ಮಾ ಕರ್ಮಫಲಹೇತುರ್ಭೂ: ಮಾತೇಸಂಗೋಽಸ್ತ್ವಕರ್ಮಣಿ ||

( ಅಂದರೆ ಪ್ರತಿಫಲವನ್ನು ಬಯಸದೆ ನಿನ್ನ ಕೆಲಸವನ್ನು ಮಾಡು; ಕರ್ಮಫಲ ಉಂಟು ಮಾಡಿಕೊಳ್ಳಬೇಡ. ಕರ್ಮ ಮಾಡದವರನ್ನು ಓಲೈಸ ಬೇಡ, ಎಂದು. ಹಣ ಹೇಗೋ ಬರುತ್ತದೆ, ಇತರರ ಕೈಗೆ ಹೋಗುತ್ತದೆ. ಅಂತೂ ನಾವು ತಲೆ ಕೆಳಗೆ ಮಾಡಿ ಲಾಗ ಹಾಕಿದರೂ ನಮ್ಮ ಹತ್ತಿರ ಉಳಿ ಯುವ ಹಣ ನಮಗೆ ಯೋಗ್ಯತೆಯಿದ್ದಷ್ಟೇ ವಿನಃ ಹೆಚ್ಚಿಲ್ಲ. ಒಂದು ಕಡೆ ನೀರಿ ಗೆಂದು ಹೋದರೆ ನಾವು ಕೊಂಡು ಹೋಗುವ ಪಾತ್ರೆಯ ಗಾತ್ರದಷ್ಟೇ ನೀರನ್ನು ತರಬಲ್ಲೆವಲ್ಲದೆ ಹೆಚ್ಚನ್ನು ತರಲು ಸಾಧ್ಯವಿದೆಯೆ ? )

" ಹಣಕ್ಕೆ ಹೆಸರಿಲ್ಲ, ವ್ಯಕ್ತಿತ್ವವಿಲ್ಲ. ಅದರ ಮೇಲೆ ಇರುವುದು ರಾಜನ ಮೊಹರು. ಮತ್ತೆ ನನ್ನದು ಅವನದು ಎಂದು ಭೇದವೇನು ? "

" ಓಹೋ ! ಹಾಗಾದರೆ ನಿಮಗೆ ಹಣದ ಅವಶ್ಯಕತೆಯೇ ಇಲ್ಲವೆಂದು ತೋರುತ್ತದೆ " ಸೆಟ್ಟರೆಂದರು ವೀಳ್ಯದ ತಟ್ಟೆಯನ್ನು ಬಳಿಗೆಳೆಯುತ್ತ. ಕೈಗಳು ಒಂದು ಬೀಡಿಯನ್ನು ಹೊತ್ತಿಸಿ ಮುಂದುವರಿಸಿದರು:

" ಹಾಗಲ್ಲ. ಹಣ ನನಗೆ ಉತ್ಪತ್ತಿಯಾಗುತ್ತದೆ, ಹಾಗೆಯೇ ಖರ್ಚಾ ಗುತ್ತದೆ. ನನ್ನ ವಿಷಯದಲ್ಲಿ ಹೀಗಾಯಿತು. ಇನ್ನು ಕುಟುಂಬಗಳಲ್ಲಿ ಅಜ್ಜ ಮಾಡಿಟ್ಟ ಹಣ ಮೊಮ್ಮಗನ ವರೆಗೆ ಬರುವುದು ದುರ್ಲಭ. ಬಂದರೂ ಅವನ ಜೀವನಾಂತ್ಯದಲ್ಲಿ ಆ ಹಣ ಖಂಡಖಂಡವಾಗಿ ತುಂಡಾಗಿ ನಾಶವಾಗ ದಿಲ್ಲ.. ಯಾರಲ್ಲಿ ಐಶ್ವರ್ಯ ಚಿರಂಜೀವಿಯಾಗಿದೆ ? ನಮ್ಮ ಟಿಪ್ಪುಸುಲ್ತಾನ, ಹೈದರಾಲಿಗಳೇನು ಹಣದಲ್ಲಿ ಕಡಿಮೆಯವರೆ ? ಈಗ ಬ್ರಿಟಿಷರೇಕೆ ನಮ್ಮ ನ್ನಾಳುತಿದ್ದಾರೆ ? ಈಗ ಬ್ರಿಟಿಷರಿಗೂ ಒಂದು ಕಾಲ ಬರಲಿದೆ. ನೋಡಿ, ಗಾಂಧಿ ಈಗ ಉಪವಾಸ ಪ್ರಾರಂಭಿಸಿದ್ದಾನಂತೆ. ಇನ್ನು ಅವನಿಗೇ ರಾಜ್ಯ ಸಿಗಲೂ ಬಹುದು. ಯಾರವಸ್ಥೆ ಏನಾದೀತೆಂದು ಹೇಳಬಹುದು ಸೆಟ್ಟರೆ ? ನಾವೆಲ್ಲ ನೀರಿನ ಮೇಲಿನ ಗುಳ್ಳೆಗಳು. ನಾವು ಮಾಡಿದ ಹಣವನ್ನು ನಾವೇ ಖರ್ಚು ಮಾಡಬೇಕು. ಇಲ್ಲವಾದರೆ:

ಉಣ್ಣದೆ ಕೆಚ್ಚಲೊಳಿದ್ದ ಉಣ್ಣಿದದು ನೊರೆಹಾಲ |
ಉಣ್ಣದೇ ಮಾಡಿದವನೊಡವೆಯು

ಕಳ್ಳಗೆ ನೃಪಗೆ ಸರ್ವಜ್ಞ ||

ಸೆಟ್ಟರು ರೈಗಳ ವಾಕ್ಸರಣಿಗೆ ಬೆರಗಾಗಿ ತಲೆದೂಗಿದರು. ಅವರಿಗೆ ರೈಗಳ ಮೇಲೆ ಏನೂ ಅಭಿಮಾನ ಹಿಂದೆಯೂ ಇರಲಿಲ್ಲ, ಮುಂದೆಯೂ ಮೂಡಲಿಲ್ಲ. ಆದರೆ ಅವರ ನಾಲಿಗೆಯ ಹರಿತಕ್ಕೆ ಮೆಚ್ಚಿದರು.

"ನೀವಂದುದು ಸರಿ ರೈಗಳೇ. ಆದರೆ ಹುಟ್ಟಿದ ಮನುಷ್ಯನೊಮ್ಮೆ ಮದುವೆಯಾದರೂ ಆಗಬೇಕಲ್ಲ! ಬ್ರಾಹ್ಮಣರಲ್ಲಿ ಏನೋ ಒಂದು ಗಾದೆ ಯಿದೆಯಂತೆ: ಮಕ್ಕಳಿಲ್ಲದವನಿಗೆ ಸ್ವರ್ಗವಿಲ್ಲವೆಂದು, ಅಲ್ಲವೆ?"

"ಮದುವೆ! ನಿಮ್ಮ ಕೈಯನ್ನೇ ನೋಡಿ. ಐದು ಬೆರಳುಗಳೂ ಒಂದೇ ರೀತಿ ಇವೆಯೆ? ಎಲ್ಲರೂ ಒಂದೇ ರೀತಿಯಲ್ಲಿರಬೇಕೆಂಬುದು ಆಗದ ಮಾತು. ಆದುದರಿಂದ ನಾನು ಮದುವೆಯಾಗದಿದ್ದರೆ ಅದರಲ್ಲೇನೂ ವಿಶೇಷವಿಲ್ಲ. ಮದುವೆಯಾದವರು ಎಷ್ಟು ಸುಖ ಪಡುತ್ತಿದ್ದಾರೆಂದು ನನಗೆ ಗೊತ್ತಿಲ್ಲವೆ? ಉದಾಹರಣೆಗಾಗಿ ನಿಮ್ಮ ಮಗಳ ವಿಚಾರವನ್ನೇ ನೋಡಿ. ಅಲ್ಲ, ನನ್ನಮೇಲೇ ನಾದರೂ ಕೋಪ ಮಾಡಬೇಡಿ........"

"ಹೋ ಕೋಪವೇನು ರೈಗಳೆ, ಹೇಳಿ, ಹೇಳಿ" ಸೆಟ್ಟರೆಂದರು.

"ಈಗ ಪಾಪ ಆ ಸಂಜೀವ ನಿಮ್ಮ ಮಗಳನ್ನು ಮದುವೆಯಾಗಿದ್ದಾನೆ. ಅಲ್ಲಿಗೆ ಅವನ ಮಾವ ಆ ಬೊಂಬಾಯಿ ಕಳ್ಳ ಬಂದು ಹೊಕ್ಕಿದ್ದಾನೆ. ಅವನು ಇದ್ದುದನ್ನೆಲ್ಲ ದೋಚಿ ಹೋಗದೆ ಬಿಡುವವನೆ? ಮತ್ತೆ ಸಂಜೀವನಿಗೆ ಮದು ವೆಯ ಸುಖವೆಲ್ಲಿ?"

"ಯಾರು ರಾಮಪ್ಪನೇ?" ಸೆಟ್ಟರು ಕುತೂಹಲದಿಂದ ಪ್ರಶ್ನಿಸಿದರು. "ಅವನದೇನು ವಿಶೇಷ? ಯಾವಾಗ ಬಂದ?"

"ವಿಶೇಷವೇನು ಸೆಟ್ಟರೆ ನಿಮಗೊಂದು ಕೇಳುತ್ತೇನೆ: ಯಾರ್‍ಯಾರ ತಲೆ ಹೊಡೆದು ಎಷ್ಟು ಹಣ ಮಾಡಿಟ್ಟರೇನು? ನಾಯಿಯನ್ನು ಪಲ್ಲಕ್ಕಿಯಲ್ಲಿ ಕೂತುಕೊಳ್ಳಿಸಿದರೂ ಅದು ಅಮೇಧ್ಯ ಕಂಡಲ್ಲಿಗೇ ಹಾರುವುದಲ್ಲವೆ? ಶ್ರೀಮಂತನೆಂದರೆ ಅದಕ್ಕೆ ತಕ್ಕ ಘನಸ್ತಿಕೆ ಬೇಕು. ಅಂತೆಯೇ ಈ ಕಳ್ಳ ಯಾವಾಗಲೂ ಭಂಗಾರದ ಚೂರಿಯೇ ಸರಿ."

ರೈಗಳು ಸೆಟ್ಟರೊಡನೆ ಹಿಂದೆ ರಾಮಪ್ಪಸೆಟ್ಟರನ್ನು ತುಂಬಾ ಹೊಗಳಿ ದ್ದರು. ಆದರೆ ಮದುವೆ ತೀರಿದ ಬಳಿಕ ಅವರನ್ನು ದೂರತೊಡಗಿದ್ದರು.

ನಾರಾಯಣಸೆಟ್ಟರಿಗೆ ರಾಮಪ್ಪಸೆಟ್ಟರ ಪರಿಚಯ ಮೇಲಿಂದ ಮೇಲೆ ಮಾತ್ರ. ಆದರೂ ಈಗ ರೈಗಳ ಮಾತುಗಳನ್ನು ಕೇಳುವಾಗ ಸೆಟ್ಟರಿಗೆ ಅವರಂದುದು ಹೌದೆಂದೇ ತೋರಿತು. ಆದರೂ ಅವರು ರಾಮಪ್ಪಸೆಟ್ಟರ ಕುರಿತಾಗಿ ಹಿಂದೆ ರೈಗಳು ಅಷ್ಟು ಹೊಗಳಿದ್ದೇಕೆ ಎಂದು ಪ್ರಶ್ನಿಸಿದರು.

"ಸೆಟ್ಟರೆ, ಒಂದು ಕಲ್ಯಾಣ ಕಾರ್ಯದ ನಡುವೆ ಹಾಳು ವಿಷಯಗಳನ್ನು ಮಾತನಾಡಬಾರದು. ದುಷ್ಟತನ ಯಾರೊಡನೆ ಇಲ್ಲ? ದೇವರಲ್ಲಿ ಕೂಡಾ ಇಲ್ಲದೆ ಇಲ್ಲ. ಸೃಷ್ಟಿಕರ್ತನಾದ ಬ್ರಹ್ಮ ತನ್ನ ಮಗಳಾದ ಸರಸ್ವತಿಯನ್ನೇ ಮೋಹಿಸಿದ! ಅಂಥ ದೇವೇಂದ್ರನು ಅಗಸ್ತ್ಯ ಮುನಿಗೆ ಮೋಸ ಮಾಡಲಿಲ್ಲವೆ? ನ್ಯಾಯಪರಿಪಾಲಕನಾದ ಶ್ರೀರಾಮದೇವರು ಅಗಸನ ಮಾತನ್ನು ಕೇಳಿ ಹೆಂಡತಿಯನ್ನು ಕಾಡಿಗಟ್ಟಲಿಲ್ಲವೆ? ಮತ್ತೆ ನರಮನುಷ್ಯರಾದ 'ನಮ್ಮಲ್ಲೇನು? ಪ್ರತಿಯೊಬ್ಬನಲ್ಲೂ ದುರ್ಗುಣವಿಲ್ಲದೆ ಇಲ್ಲ. ಉಪಾಯವಂತ ಮನುಷ್ಯನು ಬೇರೆ ಬೇರೆ ಜನರಿಂದ ಅವರ ಸುಗುಣಗಳನ್ನೇ ಆರಿಸುತ್ತಾನೆ. ಅವರ ದುರ್ಗುಣಗಳಿಗೆ ಅವಿವೇಕಿಗಳು ಮಾತ್ರ ಬಲಿಯಾಗಬೇಕಷ್ಟೆ."

ನಾರಾಯಣಸೆಟ್ಟರಿಗೆ ರೈಗಳ ಹಾಗೆ ಶ್ಲೋಕಾಧಾರ ಪುರಾಣಾಧಾರಗಳ ಮೂಲಕ ತನ್ನ ವಾದವನ್ನು ಸಮರ್ಥಿಸಲು ಸಾಧ್ಯವಿರಲಿಲ್ಲವಾದರೂ, ಅವರು ಸುಮ್ಮನಾಗಲಿಲ್ಲ. ರೈಗಳ ಕತೆಯೆಲ್ಲ ಅವರಿಗೆ ಚೆನ್ನಾಗಿ ಗೊತ್ತಿತ್ತು. ಅವರು ಎಷ್ಟು ಜನ ಹೆಂಗಸರನ್ನು ಹಾಳು ಮಾಡಿದ್ದರು, ಎಷ್ಟು ಮನೆಗಳನ್ನು ಸುಲಿಗೆ ಮಾಡಿದ್ದರೆಂಬುದು ಜನಜನಿತವಾದ ವಿಚಾರ. ಆದರೂ ಅವರ ಬಾಯಿಯಿಂದಲೇ ಅವರ ತತ್ವಗಳನ್ನು ಕೇಳುವುದೊಂದು ಸೆಟ್ಟರಿಗೆ ದೊಡ್ಡ ಮನರಂಜನೆಯಾಯಿತು.

"ರೈಗಳೆ ನೀವಿಷ್ಟು ತತ್ವಗಳನ್ನು ತಿಳಿದವರಾಗಿದ್ದು ನನಗೇಕೆ ಈತನಕ ಏನೊಂದನ್ನೂ ಹೇಳಿರಲಿಲ್ಲ?"

"ನನಗೆಂತಹ ತತ್ವ ಗೊತ್ತಿದೆ ಸೆಟ್ಟರೆ? ನಾನೂ ನಿಮ್ಮ ಹಾಗೆಯೇ ಒಬ್ಬ ಜೀವಿ ಅಷ್ಟೆ. ನಾನು ಅಷ್ಟೇನೂ ಕಲಿತಿಲ್ಲ. ಕೆಲವಂ ಬಲ್ಲವರಿಂದೆ ಕೆಲವಂ ಶಾಸ್ತ್ರಂಗಳನೋದಿ, ಕೆಲವಂ ಸ್ವಾನುಭವದಿಂದೆ ಕಲ್ತು ಎಂದು ಕವಿ ಹೇಳುವಂತೆ ನಾನು ಹೀಗೆ ಹೇಳುವುದು ವಿನಃ ಬೇರೇನಿಲ್ಲ. ನನಗೆ ಬುದ್ಧಿ

ಬರುವಾಗಲೇ ನಮ್ಮ ಕುಟುಂಬ ಹರಿಹಂಚಾಗಿ ಹೋಗಿತ್ತು. ನನಗೆ ಸಿಕ್ಕಿದುದು ಗೆರಟೆ ಮತ್ತು ಕೋಲು ಮಾತ್ರ. ಅದೂ ನಿಮ್ಮಂಥ ಭಾಗ್ಯಶಾಲಿಗಳಿಗೆ ನನ್ನಂಥವನಿಂದೇನಾಗಬಹುದು ? ನಾನು ತೀರ ಅಲ್ಪ. ನಿಮ್ಮ ಮನೆಯಲ್ಲಿ ಮಹಾಲಕ್ಷ್ಮಿಯೇ ವಾಸಿಸುತ್ತಿದ್ದಾಳೆ. ”

“ ನಿಮಗೇನು ರೈಗಳೆ ? ನೀವು ಸುಖ ಜೀವಿ ನಮ್ಮಂತೆ ಹಗಲು ರಾತ್ರಿ ಹನ್ನೆರಡು ತಿಂಗಳೂ ದುಡಿಯುವ ಕಷ್ಟ ನಿಮಗಿಲ್ಲ........ ”

“ ಅದೇ ನಾನು ಮೊದಲೇ ಹೇಳಿದೆನಲ್ಲ ನನಗೆ ನಿಮ್ಮಂಥವರ ಕೃಪೆಯಿಂದಲೇ ಜೀವನ ನಡೆಯುತ್ತದೆಂದು........”

“ ಛೆ! ರೈಗಳೆ ಹಾಗಲ್ಲ, ಹಾಗಲ್ಲ ನೀವು ಅಪಾರ್ಥ ಮಾಡಿಕೊಂಡಂತೆ ಕಾಣುತ್ತದೆ. ನಾನು ಹೇಳಿದುದು ಪರಿಗ್ರಹದ ಕುರಿತು. ನಮಗೆಷ್ಟು ಗೊಡವೆಗಳು ! ಹೆಂಡತಿಯೊಡನೆ ನಿದ್ರಿಸಿರುವಾಗಲೂ ಎಲ್ಲಿಂದ ಕಳ್ಳರು ಬಂದರೋ ಎಂಬ ಹೆದರಿಕೆ. ದೇವರನ್ನು ನೆನೆಯುತ್ತಿರುವಾಗಲೂ ಎಲ್ಲಿ ಸಾಲಗಾರರು ಮೋಸ ಮಾಡುವರೋ ಎಂಬ ಭಯ. ಹೀಗಾಗಿ ನಮ್ಮ ಜೀವನ ಹೀಗೆಯೇ ನಮಗೆ ತಿಳಿಯದೆಯೇ ಕಳೆದುಹೋಗುವುದು. ”

“ ಹೌದು ಸೆಟ್ಟರೆ, ನೀವಂದುದು ನಿಜ. ನಾನು ಮೊದಲೇ ಹೇಳಿದೆನಲ್ಲ. ಕೈಯ ಬೆರಳುಗಳು ಕೂಡಾ ಒಂದೇ ರೀತಿಯಲ್ಲಿಲ್ಲವೆಂದು ? ಒಬ್ಬ ಎಣ್ಣೆಯ ಪಾತ್ರೆಯನ್ನು ಕೆಳಗೆ ಹಾಕಿ ಎಣ್ಣೆ ಚೆಲ್ಲಿತೆಂದು ಕೂಗುತಿದ್ದಾಗ ಮತ್ತೊಬ್ಬ ಬೆಲ್ಲದ ಪಾತ್ರೆ ಕೆಳಗೆ ಬಿದ್ದುದಕ್ಕೆ ಅಳುತ್ತಿದ್ದನಂತೆ........ ”

ರೈಗಳು ಹೀಗೆನ್ನುವಾಗ ಲಿಂಗಮ್ಮ ಒಳಗಿಂದ ಕಾಫಿ ತಂದಳು. ಅವರು ಆದರಿಂದ ಒಂದು ಲೋಟ ಕಾಫಿಯನ್ನು ಕುಡಿದು, ತಲೆದಿಂಬಿಗೆ ಒರಗಿದರು.

ಸೆಟ್ಟರು ತಾನೀಗ ಬರುತ್ತೇನೆಂದು ಹೇಳಿ ಹೊರಗೆ ಹೋದರು.

## ಅಧ್ಯಾಯ ಹದಿಮೂರು.

ಸಂಜೀವನು ರಾಮಪ್ಪಸೆಟ್ಟರೊಡನೆ ಬೋರಿಬಂದರ ಸ್ಟೇಶನಿನಲ್ಲಿ ರೈಲಿನಿಂದಿಳಿದ. ಅಲ್ಲಿಯ ರೇಲ್ವೇ ಸ್ಟೇಶನನ್ನು ನೋಡಿ ಅವನಿಗೊಮ್ಮೆ ಗಾಬರಿ

ಯಾಯಿತು. ಹತ್ತು ಹನ್ನೆರಡು ಬಂಡಿಗಳು ನಿಲ್ಲಲಿಕ್ಕೆ ಅಲ್ಲಿ ಸ್ಥಳವಿದೆ. "ಕೂಲಿ ಸೇಟ್, ಕೂಲಿ" ಎಂದು ಕೂಲಿಯಾಳುಗಳು ಬೊಬ್ಬಿಡುತಿದ್ದರು. ಒಂದು ಬಂಡಿ ಬರುತ್ತದೆ, ಇನ್ನೊಂದಕ್ಕೆ ಗಂಟೆಯಾಗುತ್ತಿದೆ, ಮತ್ತೊಂದು ಹೋಗುತ್ತದೆ. ಕಾಫಿ ಚಹ ಹೋಟೇಲುಗಳ ವ್ಯಾಪಾರವೇನು, ಅಲ್ಲಿ! ಸೆಟ್ಟರು ತನಗೆ ಓದಲು ಬಾರದಿದ್ದರೂ ಒಂದು 'ಟೈಮ್ಸ್' ಪತ್ರಿಕೆಯನ್ನು ಶೀವಿಯಿಂದ ಪಡಕೊಂಡು ಅಳಿಯನೊಡನೆ ಕೊಟ್ಟರು. ಅವರಿಗೆ ತನ್ನೊಡನೆ ಇಂಗ್ಲಿಷ್ ಬರುವವನೊಬ್ಬನಿದ್ದಾನೆಂದು ಇತರರಿಗೆ ತೋರಿಸಬೇಕಿತ್ತು.

ನಿಲ್ದಾಣದ ಹೊರಗೆ ಬಂದೊಡನೆಯೇ ರಾಮಪ್ಪಸೆಟ್ಟರು 'ಸೇಟ್' ರಾದರು ಅವರ ಮಗ ಅಲ್ಲೇ ತಯಾರಿದ್ದ.

"ಸ್ವಲ್ಪ ತಡವಾಯಿತಪ್ಪ! ಆದರೂ ಓಡಿಯೋಡಿ ಬಂದೆ" ಎಂದು ಅವನು ಉದ್ವೇಗದಿಂದ ಹೇಳಿದ.

"ಒಂದು ಟೇಕ್ಸಿ ಕರೆಯೋ" ಎಂದು ಸೆಟ್ಟರು ಮಗನಿಗೆ ಆಜ್ಞಾಪಿಸಿ ದರು.

ಟ್ಯಾಕ್ಸಿವಾಲರೆಲ್ಲ ಶೇಖರನನ್ನು ಮುತ್ತಿದರು. "ವೈ ಆತಾ ಹೂಂ ಜೀ" "ಮೇರಾ ಟ್ಯಾಕ್ಸಿ ಅಚ್ಛಾ ಹೈ ಸಾಬ್" "ಇಧರ್ ಆಯಿಯೇ, ಹಮಾರಾ ಗಾಡಿ ಮಜಬೂತ್ ಹೈ" ಹೀಗೆಲ್ಲ ಟೇಕ್ಸಿವಾಲರು ಬೊಬ್ಬಿಡುತಿದ್ದಾಗ ಸೆಟ್ಟರು ಅವರ ಹಳೆ ಗೆಳೆಯ ಮುಂಡಪ್ಪನನ್ನು ಆ ಗುಂಪಿನಲ್ಲಿಯೂ ಗುರುತಿಸಿ ಅವನಿಗೆ ಸನ್ನೆ ಮಾಡಿದರು. ಕೂಡಲೆ ಅವನು ಬಂದು: "ಹ್ಞೋ ಸೆಟ್ಟರೇ" ಎನ್ನುತ್ತ ಅವರ ಪೆಟ್ಟಿಗೆಗಳನ್ನೆಲ್ಲ ಟ್ಯಾಕ್ಸಿಯ ಹಿಂದಿನ ಭಾಗದಲ್ಲಿ ಇಟ್ಟು ಬೀಗಹಾಕಿ, ಸೆಟ್ಟರನ್ನೂ ಸಂಜೀವನನ್ನೂ ಮತ್ತು ಶೇಖರನನ್ನೂ ಒಳಗೆ ಕೂತುಕೊಳ್ಳ ಹೇಳಿ ಟೇಕ್ಸಿ ಬಿಟ್ಟ.

ಸಂಜೀವನಿಗೆ ಇದೆಲ್ಲ ಏನೆಂದು ಅರ್ಥವಾಗಲಿಲ್ಲ. ಎಷ್ಟು ಕಟ್ಟೋಣಗಳು, ಎಷ್ಟು ಎತ್ತರ! ಅಲ್ಲೊಂದು ಮಾರ್ಗ, ಇಲ್ಲಿ ಎರಡು ಮಾರ್ಗಗಳು, ಹೀಗೆ ಮಾರ್ಗಗಳನ್ನು ಲೆಕ್ಕ ಮಾಡಿ ಮಾಡಿ ಸಂಜೀವನಿಗೆ ಸಾಕಾಯಿತು. ಸೆಟ್ಟರು ಅವನಿಗೆ "ಇದು ಟ್ರಾಮು, ಇದು ಮೋಟಾರು, ಅದು ಟೈಮ್ಸ್ ಕಟ್ಟಡ, ಇದು ಮುನಿಸಿಪಾಲಿಟಿ, ಇದು ಮೆಟ್ರೋ ಸಿನೇಮ........" ಹೀಗೆ ಅನೇಕ ವಿವರಣೆಗಳನ್ನೀಯುತಿದ್ದರು ತನ್ಮಧ್ಯೆ ಶೇಖರನೊಡನೆ ವ್ಯಾಪಾರದ

ವಿಚಾರವನ್ನೂ ಅವರು ಕೇಳುತ್ತಲಿದ್ದರು. ಸಂಜೀವನಿಗೆ ಇದು ಲೋಕವೋ ಅಲ್ಲ ಬೇರೆ ಏನಾದರೂ ಗ್ರಹವೋ, ಎಂದು ಆಶ್ಚರ್ಯವಾಯಿತು. ಈತನಕ ಅವನು ಮಂಗಳೂರನ್ನೇ ಬಹಳ ದೊಡ್ಡ ಪಟ್ಟಣವೆಂದೆಣಿಸಿದ್ದ. ಹಂಪನಕಟ್ಟೆಗೆ ಸರಿಯಾದ ಅಂಗಡಿಗಳ ಸಾಲು ಬೇರೆಲ್ಲೂ ಇರಲಿಕ್ಕಿಲ್ಲವೆಂದು ಅವನ ಗ್ರಹಿಕೆ ಯಾಗಿತ್ತು ಅಲ್ಲಿಯಷ್ಟು ವಿಪರೀತ ವಾಹನ ಸಂಚಾರ ಎಲ್ಲಿಯೂ ಕಾಣ ಸಿಗಲಿಲ್ಲವೆಂದು ಅವನು ಇತರರೊಡನೆ ಕೂಡಾ ಹೇಳಿದ್ದ. ಆದರೆ ಈಗ ಅವನ ಗ್ರಹಿಕೆಗಳೆಲ್ಲ ಸುಳ್ಳಾದುವು. ಒಂದು ಕಡೆ ಅಡ್ಡ ರಸ್ತೆಯನ್ನು ದಾಟಲು ನಿಂತ ಟೇಕ್ಸಿಗೆ ಕಾಲು ಘಂಟೆಯ ತನಕ ಮುಂದರಿಸಲಾಗಲಿಲ್ಲ. ಅದರ ಮೇಲೆ ಮಾರ್ಗದಲ್ಲೆಷ್ಟು ಜನರು! ಮಾಳಿಗೆಯ ಮೋಟಾರುಗಳಾ ದರೂ ಎಲ್ಲಿಯೂ ಸ್ಥಳವಿಲ್ಲ ಜನರು ಇಕ್ಕಟ್ಟಿನಲ್ಲಿ ನಿಂತಿದ್ದಾರೆ. ಅವನು ಇಡೀ ಜನ್ಮದಲ್ಲಿ ಕಂಡ ಮೋಟರುಗಳ ಸಂಖ್ಯೆಗಿಂತ ಹೆಚ್ಚು ಮೋಟರು ಗಳನ್ನು ಈ ಮುಕ್ಕಾಲು ಗಂಟೆಯ ಪಯಣದಲ್ಲಿ ಕಂಡ.

ಸೆಟ್ಟರ ಮನೆ ದಾದರಿನಲ್ಲಿ. ಸಮುದ್ರಕ್ಕೆ ಅಲ್ಲಿಂದ ಬರೇ ಅರ್ಧಮೈಲು ದೂರ ಶಿವಾಜಿ ಪಾರ್ಕು ಅವರ ನಾಲ್ಕು ಮಹಡಿಯ ಮೇಲಿರುವ ಮನೆಗೆ ಚೆನ್ನಾಗಿ ಕಾಣುತಿತ್ತು. ಮನೆಯೊಳಗೆ ಸೆಟ್ಟರು ಹೋಗುವಾಗ ಅವರ ಹೆಂಡತಿ ಕಾದು ನಿಂತಿದ್ದಳು. ಅವರ ಮಗಳು ಪ್ರೇಮಕುಮಾರಿ ಸಾಲೆಯಿಂದ ಬಂದು ಕುಳಿತುಕೊಂಡಿದ್ದಳು. ಇನ್ನೊಬ್ಬ ಮಗಳು ಲಲಿತ ಸ್ಲೇಟಿನಲ್ಲಿ ಬರೆ ಯುತಿದ್ದಳು. ಸೆಟ್ಟರು ಬಂದೊಡನೆಯೇ ತನ್ನ ಅಳಿಯನನ್ನು ಎಲ್ಲರಿಗೂ ಪರಿ ಚಯ ಮಾಡಿಸಿದರು. ಆಮೇಲೆ ಸ್ನಾನ ತೀರಿಸಿ, ಫಲಹಾರ ಮಾಡಿ ಅವ ನನ್ನು ಕರೆದುಕೊಂಡು ಮಾತುಂಗಕ್ಕೆ ಹೊರಟರು. ಅವರು ದಾದರಿನ ಮತ್ತು ಕೊಲಾಬಾದ ಹೋಟೇಲುಗಳನ್ನು ಹದಿನೈದು ಸಾವಿರ ರೂಪಾಯಿಗಳಿಗೆ ಊರಿಗೆ ಹೋಗುವ ಮುಂಚಿನ ದಿನವೇ ಮಾರಾಟ ಮಾಡಿ ಹಣವನ್ನು ಬೇಂಕಿ ನಲ್ಲಿಟ್ಟದ್ದರು.

ಮಾತುಂಗದ ಅವರ ಹೋಟೇಲಿನಲ್ಲಿ ಸೋಮಪ್ಪನೆಂಬವನು ವ್ಯವಸ್ಥಾ ಪಕನಾಗಿದ್ದ. ಅವನ ಹುಟ್ಟೂರು ಮೂಲ್ಕಿ. ಜಾತಿಯಲ್ಲಿ ಬೆಸ್ತರವ. ಆದರೆ ಅವನು ಚಿಕ್ಕವನಿರುವಾಗಲೇ ಸೆಟ್ಟರಲ್ಲಿ ಕೆಲಸಕ್ಕೆ ಸೇರಿದ್ದ. ಬರಬರುತ್ತ ಸೆಟ್ಟ ರಿಗೆ ಅವನ ಮೇಲೆ ತುಂಬಾ ವಿಶ್ವಾಸ ಹುಟ್ಟಿತು. ಅವನನ್ನು ಕೊಲಾಬಾದ

ಹೋಟೇಲಿನಲ್ಲಿ ಕೊನೆಗೆ ವ್ಯವಸ್ಥಾಪಕನಾಗಿ ನೇಮಿಸಿದರು. ಅಲ್ಲಿಯ ವ್ಯಾಪಾರವೂ ಕಡಿಮೆ. ಹೆಚ್ಚಿನವರಿಗೆ ಮಾಂಸಾಹಾರ. ಸೆಟ್ಟರದು ಹಿಂದೂ ಹೋಟೇಲಾಗಿದ್ದುದರಿಂದ ಎಲ್ಲಾ ಸಸ್ಯಾಹಾರವೇ. ಅದುದರಿಂದಲೇ ಅವರು ಅದನ್ನು ಮಾರಾಟ ಮಾಡಲು ಕಾರಣ. ಆಬಳಿಕ ಮಾತುಂಗದಲ್ಲಿ ತಾನು ಕುಳಿತುಕೊಳ್ಳುವ ಸ್ಥಾನವನ್ನೇ ಸೋಮಪ್ಪನಿಗೆ ಬಿಟ್ಟುಕೊಟ್ಟರು. ಸೋಮಪ್ಪನ ಹೆಸರು ಈಗ ಸೋಮಪ್ಪ ಯು. ತಲ್ವಾರ್ ಎಂದು ಬದಲಾಗಿತ್ತು.

ಸಂಜೀವನಿಗೆ ಸೆಟ್ಟರ ಹೋಟೆಲಿನೊಳಗೆ ಹೊಕ್ಕುವಾಗ ತಾನು ಹೋಟೆಲಿನೊಳಗೆ ಕಾಲಿಡುತ್ತೇನೋ, ಅಲ್ಲ, ಅಂಗಡಿಯೊಳಗೆ ಕಾಲಿಡುತ್ತೇನೋ ಎಂದು ಮೊದಲು ತಿಳಿಯಲಿಲ್ಲ. ಹಾಗೆ ಕಪಾಟುಗಳನ್ನಿರಿಸಿದ್ದರು. ತಲೆಯೆಣ್ಣೆ, ಸಿಗರೇಟು, ಪಾತ್ರೆಗಳು—ಎಲ್ಲವೂ ಕಪಾಟಿನೊಳಗೆ ಮಾರಾಟಕ್ಕಿದ್ದುವು. ಒಳಗೆ ಕಾಪಿ ಕುಡಿಯುವವರಿಗೆಂದು ಕುರ್ಚಿ ಮೇಜುಗಳು ಇದ್ದುವು. ಸೆಟ್ಟರು ಆಗ 'ಪೇಂಟ್' ಹಾಕಿ, ಅಂಗಿಯನ್ನು ಒಳಗೆ ಸಿಕ್ಕಿಸಿದ್ದರು. ಸಂಜೀವನು ಸೆಟ್ಟರ ಒತ್ತಾಯಕ್ಕಾಗಿ ಕಚ್ಚೆ ಹಾಕಿದ್ದ. ಅವನಿಗೂ 'ಪೇಂಟ್' ಹಾಕಿ ಅನುಭವವಿಲ್ಲವೆಂದಲ್ಲ ಸಾಲೆಗೆ ಹೋಗುವಾಗ ನಾಲ್ಕೈದು ವರ್ಷ ಅದನ್ನೇ ಉಟ್ಟಿದ್ದ. ಆದರೆ ಆ ಬಳಿಕ ಮನೆಯಲ್ಲಿ ಅದನ್ನುಡಲು ಅವಕಾಶವಿರಲಿಲ್ಲ. ಹಿಂದೆ ಹೊಲಿಸಿದವುಗಳೆಲ್ಲ ಗೆದ್ದಲಿನ ಪಾಲಾಗಿದ್ದುವು.

ಸೆಟ್ಟರು ಒಳಗೆ ಹೋದೊಡನೆಯೇ ಸೋಮಪ್ಪ 'ಮಂಡ' ದಿಂದ ಎದ್ದು ಕೆಳಗೆ ನಿಂತುಕೊಂಡ. ಅವನು ತೆಳುವಾದ ವಸ್ತ್ರದ ಕಚ್ಚೆ, ತೆಳುವಾದ ಬಿಳಿ ಜುಬ್ಬ, ಕಾಲಿಗೆ ಕೊಲ್ಲಾಪುರದ ಚಪ್ಪಲಿಗಳನ್ನು ಧರಿಸಿದ್ದ. ಕ್ರಾಪನ್ನು ಹಿಂದಕ್ಕೆ ಬಾಚಿದ್ದ. ಸೆಟ್ಟರು 'ಮಂಡ' ದ ಮೇಲೆ ಕುಳಿತುಕೊಂಡು ಅಲ್ಲಿ ಬಳಸುತಿದ್ದ ಹುಡುಗನಿಗೆ "ಎರಡು ಐಸ್ ಹಾಕಿ ರೋಜರ್ಸ್ ತಾರೋ" ಎಂದರು.

ಹುಡುಗ ಎರಡು ಗ್ಲಾಸುಗಳಲ್ಲಿ ಜುರ್ ಜುರ್ರೆನ್ನುತ್ತಿರುವ ಪಾನೀಯವನ್ನು ತಂದು ಕೊಟ್ಟ. ಅದನ್ನು ಸ್ವಲ್ಪ ಚೀಪಿ: "ಏ ಬದ್ಮಾಷ್ ಇಲ್ಲಿ ಬಾ! ಇದು ರೋಜರ್ಸೋ? ಏನೇನು ತಂದುಕೊಡುತ್ತೀಯಲ್ಲ" ಎಂದು ಹುಡುಗನ ಮಂಡೆಗೊಂದು ಕುಟ್ಟಿದರು. ಹುಡುಗ ಅಳುತ್ತ ತಲೆ ತಿಕ್ಕಿಕೊಂಡು

ಒಳಗೆ ಹೋಗಿ ಖಾಲಿಯಾಗಿದ್ದ ಎರಡು ಕುಪ್ಪಿಗಳನ್ನು ಸೆಟ್ಟರಿಗೆ ತಂದು ತೋರಿಸಿದ.

ಸೆಟ್ಟರಿಗೆ ಎಲ್ಲಿಲ್ಲದ ಕೋಪ ಬಂತು. ಅವರಿಗೆ ಅದನ್ನೋದಲು ಬರಹ ಬರುವದಿಲ್ಲವೆಂದು ಆ ಹುಡುಗನಿಗೆ ಗೊತ್ತಿರಲಿಲ್ಲ. ಅವರು ಅವನನ್ನು ಕುತ್ತಿಗೆಗೆ ಕೈಹಾಕಿ ಅಡಿಗೆ ಕೋಣೆಯೊಳಗೆ ದಬ್ಬಿ ನಾಲ್ಕು ಒದೆ ಕೊಟ್ಟರು. ಸಂಜೀವ ಮಂಡದ ಬಳಿಯಲ್ಲಿಯೇ ಕುಳಿತುಕೊಂಡು ಗ್ಲಾಸಿನಲ್ಲಿದ್ದ ಹಿಮಗಡ್ಡೆಯ ತುಂಡನ್ನು ತುಟಿಯಲ್ಲಿ ದೂಡುತ್ತ ಪಾನೀಯವನ್ನು ಹೀರುತಿದ್ದ.

ಆಮೇಲೆ ಸೆಟ್ಟರು ಒಂದು 'ಬಾರ್ಕ್ಲೆ' ಸಿಗರೇಟಿನ ಡಬ್ಬಿಯನ್ನೊಡೆದು ಸಂಜೀವನಿಗೊಂದನ್ನು ಕೊಟ್ಟು ಸೋಮಪ್ಪನಿಗೊಂದನ್ನು ಅಲ್ಲಿಟ್ಟು ತಾನೊಂದನ್ನು ತುಟಿಗಳಲ್ಲಿ ಕಚ್ಚಿ ಬೆಂಕಿ ಹಚ್ಚಿಸಿ ಸಂಜೀವನಿಗೆ ಬೆಂಕಿ ಪೆಟ್ಟಿಗೆಯನ್ನು ಕೊಟ್ಟರು.

ಜನರು ಬರುತಿದ್ದರು, ಹೋಗುತಿದ್ದರು. ಸೋಮಪ್ಪ ಹಣ ತೆಗೆದುಕೊಂಡು ಸೆಟ್ಟರು ಕುಳಿತಿದ್ದ 'ಮಂಡ' ದ ಕುರ್ಚಿಯ ಎದುರಿನ ಮೇಜಿನೊಳಗೆ ಅದನ್ನು ಲೆಕ್ಕ ಮಾಡಿ ಸುರಿದು, ಬಿಲ್ಲನ್ನು ಒಂದು ಸರಿಗೆಯ ತುಂಡಿಗೆ ಕುತ್ತಿಡುತಿದ್ದ. ಬಂದದರಲ್ಲಿ ಕೆಲವರು 'ಓ ಮಹಾರಾಜ್' ಎಂದು ನಮಸ್ಕರಿಸಿ ಸೆಟ್ಟರೊಡನೆ ಹಿಂದುಸ್ಥಾನಿಯಲ್ಲಿ ಮಾತನಾಡುತಿದ್ದರು. ಸೆಟ್ಟರೂ ಅವರೊಡನೆ ಹಿಂದುಸ್ಥಾನಿಯಲ್ಲೇ ಸಂಭಾಷಣೆ ನಡಿಸುತಿದ್ದರು.

ಸ್ವಲ್ಪ ಹೊತ್ತಾದ ಬಳಿಕ ಸೋಮಪ್ಪನೊಡನೆ ಅವರು ಹಾಜರಿಲ್ಲದ ಸಮಯದಲ್ಲಾದ ವಿದ್ಯಮಾನಗಳನ್ನು ಕೇಳತೊಡಗಿದರು. ಎರಡು ಡಜನ್ ಕುರ್ಚಿಗಳನ್ನು ಅವನು ಪಡಕೊಂಡನಂತೆ. ಅವರು ಹೇಳಿದ ಪ್ರಕಾರ ಒಳಗೆಲ್ಲ ಬಣ್ಣ ಸಾರಿಸಿದನಂತೆ. ಎರಡು ಹಾಳಾದ ವಿದ್ಯುಚ್ಛಕ್ತಿಯ 'ಫೇನ್' ಗಳನ್ನು ರಿಪೇರಿ ಮಾಡಿಸಿದನಂತೆ. ಆರೋಗ್ಯಖಾತೆಯವರು ಎರಡು ಸಲ ಹೋಟೇಲನ್ನು ಸಂದರ್ಶಿಸಿದರಂತೆ. ಎರಡು ಸಲವೂ ಅವರಿಗೆ 'ಗಮ್ಮತ್ತು' ಮಾಡಿಸಿದನಂತೆ. ಇನ್‌ಕಮ್‌ಟೇಕ್ಸ ಖಾತೆಯವರು ನೋಟೀಸು ಕೊಟ್ಟಿದ್ದಾರಂತೆ. ಬೋರಿ ಬಂದರದ ಹೋಟೇಲಿನಿಂದ ಇಬ್ಬರು ಹುಡುಗರು ಓಡಿಹೋದರಂತೆ. ಮೂರು ಹುಡುಗರನ್ನು ಅವನು ಹೊಸದಾಗಿ ನೇಮಿಸಿದ್ದಾನಂತೆ. ಹೀಗೆ ಅನೇಕ ವೃತ್ತಾಂತಗಳನ್ನು ಸೋಮಪ್ಪ ಸೂಕ್ಷ್ಮವಾಗಿ ಅರ್ಥ

ಗಂಟಿಯೊಳಗಾಗಿ ಹೇಳಿದ.

ಸೆಟ್ಟರು ಮತ್ತೆ ಸ್ವಲ್ಪ ಸಮಯ ಅಲ್ಲಿದ್ದು ಸಂಜೀವನೊಡನೆ ಹಿಂದೆ ಹೊರಟರು. ಬರುವಾಗ ಅವರು ಮೋಟರಿನಲ್ಲಿ ಬಂದಿದ್ದರು. ಹೋಗುವಾಗ ನಡೆದುಕೊಂಡು ಹೋಗೋಣವೆಂದರು. ಸಂಜೀವನೂ ಆದೀತೆಂದ.

ಸೆಟ್ಟರಿಗೆ ಹೆಜ್ಜೆಹೆಜ್ಜೆಗೆ ಗೆಳೆಯರು ಸಿಕ್ಕಿ ಮಾತನಾಡಿಸತೊಡಗಿದರು. ಎಲ್ಲರಿಗೂ ಸಂಜೀವನ ಪರಿಚಯ ಮಾಡಿಸಿದರು. ಮತ್ತೆ ಅಲ್ಲೇ ಇದ್ದ ಒಂದು ವಸ್ತ್ರದ ಅಂಗಡಿಗೆ ಹೋಗಿ ಅಲ್ಲಿ ಸಂಜೀವನಿಗೆ ಆರು ಪೆಂಟು, ಆರು ಷರ್ಟು, ಎರಡು ಕೋಟುಗಳಿಗೆ ಬೇಕಾಗುವಷ್ಟು ವಸ್ತ್ರವನ್ನು ಪಡೆದು ದರ್ಜಿಗೆ ಹೊಲೆಯಲಿಕ್ಕೆ ಕೊಟ್ಟರು. ಸಂಜೀವ ಎಷ್ಟು ಅಡ್ಡಿ ಮಾಡಿದರೂ ಸೆಟ್ಟರು ಒಪ್ಪಲಿಲ್ಲ.

"ನಿನಗೆ ಗೊತ್ತಿಲ್ಲ. ಮುಂಬಯಿಯೆಂದರೆ ವಸ್ತ್ರ ಉಡಿಗೆಗಳ ಮೇಲೆ ಹೊಂದಿಕೊಂಡಿದೆ" ಅವರೆಂದರು.

ಮಾತುಂಗದಿಂದ ದಾದರಿಗೆ ಹೋಗಲು ಅರ್ಧ ಗಂಟೆಗಿಂತ ಹೆಚ್ಚು ಬೇಡವಾದರೂ ಸೆಟ್ಟರಿಗೆ ಒಂದೂವರೆ ಗಂಟೆಯೂ ಸಾಕಾಗಲಿಲ್ಲ. ಅಷ್ಟು ಮಂದಿ ಅವರ ಪರಿಚಿತರು. ಕೆಲವರು ಕನ್ನಡ ಮಾತಾಡುವವರು, ಕೆಲವರು ತುಳು ಬಲ್ಲವರು, ಉಳಿದವರು ಹಿಂದುಸ್ಥಾನಿ, ಮರಾಠಿ, ಗುಜರಾಥಿ—ಹೀಗೆ ವಿವಿಧ ಭಾಷೆಗಳನ್ನಾಡುವವರು. ಸಂಜೀವನಿಗೆ ಸೆಟ್ಟರನ್ನು ಕಾದು ಕಾದು ಸಾಕಾಯಿತು. ಅಂತೂ ಎಂಟು ಗಂಟೆ ರಾತ್ರಿಗೆ ಮನೆ ಸೇರಿದರು. ಅಲ್ಲಿ ಊಟ ಮಾಡಿ, ಸೆಟ್ಟರು ಸ್ವಲ್ಪ ಹೊತ್ತು ಕಳೆದು, ತಾನೀಗ ಬರುತ್ತೇನೆಂದು ಹೊರಗೆ ಹೋದರು.

ಸಂಜೀವನಿಗೆ ಸೆಟ್ಟರ ಕುಟುಂಬವೇ ತೀರ ಅಪರಿಚಿತ. ಅವರ ಮಗ ಶೇಖರ ಸಂಜೀವನನ್ನು ಆದಷ್ಟು ಮಾತನಾಡಿಸಿದ. ಅವರ ಹೆಂಡತಿಯೂ ಸಂಜೀವನ ಮನೆಯ ಕುರಿತಾಗಿ ಕೇಳಿದರು. ಸಂಜೀವ ಅರೆಸಂಕೋಚದಿಂದ ಅವರೊಡನೆ ಮಾತನಾಡಿದ. ಪ್ರೇಮಕುಮಾರಿ ಏನೋ ಓದುತಿದ್ದಳು. ಆ ಮೇಲೆ ಏನನ್ನೋ ಬರೆಯತೊಡಗಿದಳು.

ಹನ್ನೊಂದು ಗಂಟೆ ರಾತ್ರಿಯವರೆಗೂ ಯಾರೂ ಮಲಗಲಿಲ್ಲ. ಕೆಲ ಹೊತ್ತು ಶೇಖರ ರೇಡಿಯೋ ಇಟ್ಟ. ಆಮೇಲೆ ಅವನು ಪ್ರೇಮಕುಮಾರಿ

ಯೊಡನೆ ' ಕೇರಂ ' ಆಡತೊಡಗಿದ. ಸೆಟ್ಟರ ಹೆಂಡತಿ ಸಣ್ಣ ಮಗಳೊಡನೆ ಮಲಗಿದಳು. ಸಂಜೀವನಿಗೆ ಹಿಂದಿನ ಎರಡು ರಾತ್ರೆಗಳಲ್ಲಿ ನಿದ್ರೆಯಿಲ್ಲದಿದ್ದು ದರಿಂದಲೂ ಪ್ರಯಾಣದ ಆಯಾಸದಿಂದಲೂ ತೂಕಡಿಕೆ ಮೊದಲು ಹತ್ತಿತಾ ದರೂ ಆಟ ಸುರುವಾದೊಡನೆ ಅವನೂ ಅದನ್ನು ನೋಡತೊಡಗಿದ. ಸಂಜೀ ವನಿಗೆ ಆಡಲು ಗೊತ್ತುಂಟೆಂದು ಶೇಖರನಿಗೆ ತಿಳಿದಿರಲಿಲ್ಲ, ಬಹುಶಃ ಅವನು ಕೇಳಲೂ ಇಲ್ಲ.

ಶೇಖರ ಸಂಜೀವನಿಗೆ ತನ್ನ ಹಾಸಿಗೆಯ ಬಳಿಯಲ್ಲೇ ಹಾಸಿಗೆ ಹಾಕಿದ ಇಬ್ಬರೂ ಮಲಗಿದರು. ಸೆಟ್ಟರ ಕುರಿತು ಸಂಜೀವನಿಗೆ ಕೇಳಲು ಧೈರ್ಯ ಬರಲಿಲ್ಲ.

ಮೂರನೆಯ ದಿನ ಸೆಟ್ಟರು ಬೆಳಿಗ್ಗೆ ಬಂದರು. ಗೋದಿಯ ಚಪಾತಿ ಮತ್ತು ಚಹ ಕುಡಿದಾದ ಮೇಲೆ ಸಂಜೀವನನ್ನು ಕರೆದುಕೊಂಡು ದಾದರ್ ಸ್ಟೇಶನ್ನಿಗೆ ಹೋದರು. ಅಲ್ಲಿಯ ಜನಸಂದಣಿಯನ್ನು ನೋಡಿ ಸಂಜೀವನಿಗೆ ಆಶ್ಚರ್ಯವಾಯಿತು. ಗಂಡಸರು, ಹೆಂಗಸರು, ಮಕ್ಕಳು ಎಲ್ಲ ಒಟ್ಟಿಗೆ ನೆರೆದಿ ದ್ದಾರೆ. ಮುಕ್ಕಾಲು ಮೈಲಿನಷ್ಟು ಉದ್ದದ ಆ ಪ್ಲಾಟ್‌ಫೋರ್ಮಿನ ಇಕ್ಕೆಡೆ ಗಳಲ್ಲೂ ಸಾಸಿವೆ ಹಾಕಲು ಎಡೆಯಿಲ್ಲದಂತೆ ನಿಂತಿದ್ದಾರೆ. ಸಂಜೀವನು ಮಂಗಳೂರಿನ ಜಾತ್ರೆಗಳಲ್ಲಿ ಕೂಡ ಇಂಥ ಜನಸ್ತೋಮವನ್ನು ಕಂಡಿರಲಿಲ್ಲ. ಸೆಟ್ಟರು ಆ ದಿನವೂ ಒಂದು 'ಟೈಮ್ಸ್' ನ್ನು ಪಡೆದು ಸಂಜೀವನಿಗೆ ಕೊಟ್ಟರು. ಅಷ್ಟರಲ್ಲೇ ಒಂದು ರೈಲು ಬಂತು.

" ನಮಗೆ ಅದಲ್ಲ " ಎಂದರು ಸೆಟ್ಟರು. " ಅದು ಕುರ್ಲಾಕ್ಕೆ ಹೋಗುವ ಬಂಡಿ. "

ಸಂಜೀವ ಆ ರೈಲನ್ನು ನೋಡಿಯಂತೂ ಆಶ್ಚರ್ಯ ಹಿಡಿಸದಾಯಿತು. ಅದಕ್ಕೆ ಎದುರಿನಲ್ಲಿ ಹೊಗೆ ಬಿಡುವ ಎಂಜಿನು ಇಲ್ಲ. ಜನರು ಒಳಗೆ ಒಬ್ಬರ ನ್ನೊಬ್ಬರು ದೂಡುತ್ತ ನಿಂತಿದ್ದಾರೆ. ಕೆಲವರು ಬಂಡಿಯೊಳಗೆ ಹತ್ತುವ ಮೆಟ್ಟಲುಗಳ ಮೇಲೆ, ಕೆಲವರು ಕಿಟಕಿಯ ಸರಳುಗಳನ್ನು ಹಿಡಿದುಕೊಂಡು ನೇತಾಡುತಿದ್ದಾರೆ. ಕೂಡಲೇ ಗಂಟೆಯಾಯಿತು. ರೈಲು ಛೀಳಿಡುತ್ತ ' ರೊಂಯ್ ' ಎಂದು ಹೊರಟು ಹೋಯಿತು.

" ಅಗೋ ನಮ್ಮ ರೈಲು ಬಂತು. ಜಾಗ್ರತೆ. ಅತ್ತಿತ್ತ ನೋಡಬೇಡ "

ಎನ್ನುತ್ತ ಸೆಟ್ಟರು ಸಂಜೀವನನ್ನು ಒಂದು ಕೈಯಲ್ಲಿ ಹಿಡಿದು ಎಳೆದುಕೊಂಡು ಜನಸಂದಣಿಯನ್ನು ದೂಡಿ ದಾರಿ ಮಾಡಿಕೊಂಡು ಪ್ಲಾಟ್‌ಫಾರ್ಮಿನ ಅಂಚಿಗೆ ಬಂದರು. ಅಷ್ಟರಲ್ಲಿಯೇ ಕಂದುಬಣ್ಣದ ರೈಲು ಬಂದು ನಿಂತಾಗಿತ್ತು.

ಜನರ ನೂಕು-ನುಗ್ಗಾಟದಲ್ಲಿ ಸಂಜೀವನು ಸೆಟ್ಟರ ಕೈಯನ್ನು ಅಮುಕಿ ಹಿಡಿಯದಿರುತಿದ್ದರೆ ರೈಲು ಹತ್ತಲಿಕ್ಕೆ ಇರಲಿಲ್ಲ. ಗಂಡಸು ಹೆಂಗಸೆಂಬ ಭೇದ ವಿಲ್ಲದೆ ಜನರು ಬಂಡಿಯೊಳಗೆ ನುಗ್ಗುತ್ತಿದ್ದರು, ಕೆಲವರು ಬಯ್ಯುತಿದ್ದರು. ಕೆಲವರು ಕೋಪದಿಂದ ಒಬ್ಬರನ್ನೊಬ್ಬರು ನೋಡುತಿದ್ದರು. ಹೀಗೆ ಜನ ಹತ್ತುತ್ತಿರುವಾಗಲೇ ಗಂಟೆಯಾಯಿತು. ಬಂಡಿ ಮುಂದುವರೆಯಿತು.

" ಇದು ಇಲೆಕ್ಟ್ರಿಯಲ್ಲಿ ಹೋಗುವುದು " ಎಂದರು ಸೆಟ್ಟರು.

ಕೆಲ ನಿಮಿಷಗಳಲ್ಲೇ ರೈಲು ನಿಂತಿತು. ಪುನಃ ಒಳಗಿದ್ದವರು ನುಚ್ಚು ನೂರಾದರು. ಕೆಳಗಿಳಿಯುವವರು ಒಮ್ಮೆ ಹೋದರೆ ಸಾಕೆಂದು ಹೆಣ ಗಾಡುತಿದ್ದರು; ಒಳಗೆ ಬರುವವರು ಒಮ್ಮೆ ಒಳಸೇರಿದರೆ ಸಾಕೆಂದು ದೂಡುತಿದ್ದರು. ಅಷ್ಟರಲ್ಲೇ ಪುನಃ ಗಂಟೆ. ಬಂಡಿ ಮುಂದರೆಯಿತು. ಸೆಟ್ಟರು ಮತ್ತೆ ಸಂಜೀವ ಹೇಗೋ ಒಂದು ಸೀಟಿನಲ್ಲಿ ಕುಳಿತುಕೊಂಡಿದ್ದರು.

" ಇಗೋ ಇದು ಪರೇಲ್. ಇಲ್ಲಿಯೇ ಎಲ್ಲ ಕಾರ್ಖಾನೆಗಳು. ಇಲ್ಲಿ ವಸ್ತ್ರ ತಯಾರಾಗಿ ನಮ್ಮ ಊರಿಗೆ ಬರಬೇಕಷ್ಟೆ " ಹೀಗೆನ್ನುತ್ತ ಸೆಟ್ಟರು ಹೊಗೆ ಬಿಡುವ ದೊಡ್ಡ ದೊಡ್ಡ ಚಿಮಣಿಗಳಿಗೆ ಬೊಟ್ಟು ತೋರಿಸುತಿದ್ದರು.

ರೈಲು ಮತ್ತೂ ಕೆಲವು ಕಡೆ ನಿಂತು ಕೊನೆಗೆ ಬೋರಿಬಂದರ ನಿಲ್ದಾಣ ವನ್ನು ಸೇರಿತು. ಅಲ್ಲಿ ಆದರಲ್ಲಿದ್ದ ಜನರೆಲ್ಲ ಕೆಳಗಿಳಿದರು. ಅಲ್ಲಿಯ ಗಲಾಟೆ ಯನ್ನಂತೂ ಹೇಳತೀರದು. ಒಂದೆಡೆಯಿಂದ ಲೌಡ್‌ಸ್ಪೀಕರ್‌ಗಳಮೂಲಕ ಧ್ವನಿಗಳು ಕೇಳುತಿದ್ದುವು. ಇನ್ನೊಂದೆಡೆ ಉಗಿಬಂಡಿಗಳು ಘೀಳಿಡುತಿದ್ದುವು. ಈ ಶಬ್ದಗಳ ಒಟ್ಟಿಗೆ ಜನರ ಗಡಿಬಿಡಿ. ಅಲ್ಲಲ್ಲಿ ಟಿಕೇಟು ಪರಿಶೋಧಿಸುವ ವರು ನಿಂತಿದ್ದರು. ಸೆಟ್ಟರು ಸಂಜೀವನನ್ನು ಎಳೆದುಕೊಂಡು ಹೇಗಾದರೂ ನಿಲ್ದಾಣದಿಂದ ಹೊರಬಿದ್ದರು.

" ಇದಕ್ಕೆಲ್ಲ ಒಳ್ಳೆಯ ತರಬೇತಿ ಬೇಕು. ಇಲ್ಲವಾದರೆ ಕಿಸೆಕಳ್ಳರು ಕಿಸೆಯನ್ನೆಲ್ಲ ಖಾಲಿ ಮಾಡುತ್ತಾರೆ " ಹೀಗೆನ್ನುತ್ತ ಸೆಟ್ಟರು ನಿಲ್ದಾಣದ ಎದು

ರಿನ ರಸ್ತೆಯನ್ನು ಮೆಲ್ಲನೆ ದಾಟಿದರು. ಸಂಜೀವನಿಗೆ ಎರಡು ಮಾಳಿಗೆಯ ಬಸ್ಸುಗಳಲ್ಲಿ ಉರುಳಿ ಅಡ್ಡ ಬೀಳುತ್ತವೋ ಎಂದು ಹೆದರಿಕೆಯಾಯಿತು. ರಸ್ತೆಯನ್ನು ಅಡ್ಡ ದಾಟುವಾಗಲಂತೂ ಅವನಿಗೆ ಆದ ಹೆದರಿಕೆ ಅಷ್ಟಿಷ್ಟಲ್ಲ; ಒಂದು ಮೋಟಾರು ಅವನನ್ನು ಒರೆಸಿಕೊಂಡೇ ಹೋಯಿತು

ಸೆಟ್ಟರ ಬೋರಿಬಂದರಿನ ಹೋಟೀಲಿನ ಹೆಸರು "ಹೋಟೀಲ್ ಫೇಶನ್" ಎಂದು. ಅದು ಮಾತುಂಗದ ಹೋಟೀಲಿಗಿಂತಲೂ ಶೃಂಗಾರವಾದ ಕಟ್ಟಡ. ಅದರ ಬಳಸುವ ಆಳುಗಳಿಗೆ ಸಮವಸ್ತ್ರದ ಉಡಿಗೆಯಿತ್ತು. ಅಲ್ಲಿ ರಾಮಪ್ಪಸೆಟ್ಟರ ದೂರಿನ ಸಂಬಂಧಿಕನೊಬ್ಬನು ತತ್ಕಾಲಕ್ಕೆ ವ್ಯವಸ್ಥಾಪಕನಾಗಿದ್ದನು. ಆದರೆ ಅವನಿಗೆ ಇಂಗ್ಲಿಷ್ ಬರುತಿದ್ದಿಲ್ಲ. ಸೆಟ್ಟರಿಗೆ ಸಂಜೀವನನ್ನು ಅಲ್ಲಿ ನೇಮಿಸಬೇಕೆಂಬ ಇಚ್ಛೆ ಇತ್ತು. ಆ ಹೋಟೀಲಿಗೆ ದೊರೆಗಳು, ಸೈನಿಕರು ಎಲ್ಲ ಬರುತಿದ್ದರು. ಸಂಜೀವನಿಗೆ ಅಲ್ಲಿಯ ತಿಂಡಿ ತೀರ್ಥಗಳನ್ನು ಕಂಡು ಬಾಯಿಯಲ್ಲಿ ನೀರು ಬಂತು. 'ಕಟ್ಲೆಟ್' ಅಂತೆ, 'ಓಮ್ಲೆಟ್' ಅಂತೆ—ಎಲ್ಲವೂ ಕಣ್ಣಿಗೆ ಸೊಗಸಾಗಿ ಕಾಣುತಿದ್ದುವು.

ಸಂಜೀವ ಸೆಟ್ಟರ ಬಳಿಯಲ್ಲೇ ಒಂದು ಕುರ್ಚಿಯಲ್ಲಿ ಕುಳಿತುಕೊಂಡು 'ಟೈಮ್ಸ್' ಓದತೊಡಗಿದ. ಇಂಗ್ಲಿಷ್ ಅವನಿಗೆ ಈಗ ಸಾಧಾರಣ ಮರೆತುಹೋಗಿದ್ದರೂ ಪತ್ರಿಕೆಯ ತಲೆಬರಹಗಳನ್ನು ಓದಲಿಕ್ಕಾಯಿತು. ಒಂದೊಂದೇ ಪುಟಗಳನ್ನು ತಿರುವಿ ಹಾಕಿ ತನಗೆ ತಿಳಿದುದನ್ನು ಓದಿದ.

"ಇವತ್ತು ಓಪನಿಂಗ್ ಎಷ್ಟು?" ಎಂದು ಸೆಟ್ಟರು ಸಂಜೀವನನ್ನುದ್ದೇಶಿಸಿ ಕೇಳಿದರು.

ಸಂಜೀವನಿಗೆ ಇದು ಅರ್ಥವಾಗಲಿಲ್ಲ. ಆಮೇಲೆ ಸೆಟ್ಟರು ಅದು ಅಮೇರಿಕದಲ್ಲಿ ಹತ್ತಿಯ ಕ್ರಯದ ಸಂಖ್ಯೆಯೆಂದು ವಿವರಿಸಿದರು. ಆದರೂ ಸಂಜೀವನಿಗೆ ಅದನ್ನು ಕಂಡು ಹಿಡಿಯಲಾಗಲಿಲ್ಲ. ಸೆಟ್ಟರಿಗೆ ತುಸು ಕೋಪ ಬಂತು.

"ನೀನು ಕಲಿತುದುದು ಇಷ್ಟೆಯೋ?" ಎಂದು ಅವರು ನಿಟ್ಟುಸಿರು ಬಿಟ್ಟರು.

ಸಂಜೀವನಿಗೆ ಆಗ ಸ್ವಲ್ಪ ನಾಚುಗೆಯಾಯಿತು. ಅವನಿಗೆ ಇಂಗ್ಲಿಷ್ ಬರುತಿತ್ತೆಂಬುದರ ಕುರಿತು ಅವನಿಗೇನೂ ಸಂಶಯವಿರಲಿಲ್ಲ. ಆದರೆ ಈಗ ಪುಸ್ತಕ ಇಲ್ಲವೇ ಪತ್ರಿಕೆಯನ್ನು ಓದಿ ವರುಷಗಳು ಕಳೆದಿದ್ದುವು ಮಂಗಳೂರಿ

ನಲ್ಲಿರುವಾಗ ಅವನು ಏನಿಲ್ಲದಿದ್ದರೂ 'ಮೈಲ್' ಪತ್ರಿಕೆಯ ಕ್ರೀಡಾಪುಟ ಓದದಿದ್ದಿಲ್ಲ. 'ಟೈಮ್ಸ್' ನ ಕ್ರೀಡಾ ಪುಟದ ಪರಿಚಯವೂ ಈಗ ಅವನಿಗಾಗದಿರಲಿಲ್ಲ. ಅಲ್ಲದೆ "ಯುದ್ಧ", "ಹೇಳಿಕೆ", "ಜಪಾನು" ಇತ್ಯಾದಿ ತಿಳಿಯುವ ಶಬ್ದಗಳ ಮೂಲಕ ಅವನು ಸುದ್ದಿಯ ಪರಿಚಯ ಮಾಡಿಕೊಂಡ. (ಸೆಟ್ಟರ 'ಓಪನಿಂಗ್' ನ ಕುರಿತು ಅವನಿಗೆ ಒಂದು ವಾರದೊಳಗೇ ಗೊತ್ತಾಯಿತು.)

ಅಲ್ಲಿಯ ಲೆಕ್ಕ ಪುಸ್ತಕಗಳನ್ನೆಲ್ಲ ಬೀರುವಿನಿಂದ ಸೆಟ್ಟರು ತೆಗೆದು ಸಂಜೀವನಿಗೆ ನೋಡಲು ಕೊಟ್ಟರು. ಲೆಕ್ಕಗಳೆಲ್ಲ ಇಂಗ್ಲೀಷಿನಲ್ಲಿದ್ದುವು. ಕೆಲವು ಕನ್ನಡದಲ್ಲೂ ಇದ್ದುವು. ಆಮೇಲೆ ಅವರು ಸಂಜೀವನೊಡನೆ:

"ನೋಡು, ಈ ಲೆಕ್ಕಗಳನ್ನೆಲ್ಲ ಬರೆಯಲು ನಿನ್ನಿಂದಾದೀತೆ? ಸ್ವಲ್ಪ ಸಮಯ ತರಬೇತಿ ಹೊಂದು; ಅವುಗಳನ್ನು ಕೆಲವು ಹಳೆಯ ಪುಸ್ತಕಗಳನ್ನು ತೆಗೆದುಕೊಂಡು ಚೆನ್ನಾಗಿ ಕಲಿ" ಎಂದರು.

ಸಂಜೀವ ಆದೀತೆಂದು ತಲೆಯಲ್ಲಾಡಿಸುತ್ತ ಪುಸ್ತಕಗಳ ಪುಟಗಳನ್ನು ತಿರುವಿ ಹಾಕಿದ. ಅವನಿಗೆ ಅವುಗಳನ್ನು ಓದಲಿಕ್ಕೆ ತಿಳಿಯುತಿತ್ತು. ಅವುಗಳಲ್ಲಿದ್ದುದು ಇಂಥಿಂಥವರಿಗೆ ಇಂತಿಷ್ಟು ಸಂಬಳ ಸಂದಿದೆ, ಇಂಥ ಸಾಮಾನುಗಳಿಗೆ ಇಷ್ಟು ಹಣ ಕೊಟ್ಟಿದೆ ಇತ್ಯಾದಿ ಲೆಕ್ಕಗಳು ಮಾತ್ರ.

ಸೆಟ್ಟರು ಮಧ್ಯಾಹ್ನಕ್ಕೆ 'ಬಿರಿಯಾಣಿ' ತಿಂದರು. ಸಂಜೀವನಿಗೂ ಕೊಟ್ಟರು. ಆಮೇಲೆ ಸಂಜೀವನನ್ನು ತುಸು ಹೊತ್ತು ಮುಂಡದಲ್ಲಿ ಕುಳ್ಳಿರಿಸಿ ತಾವು ದೂರ ಕುಳಿತುಕೊಂಡರು. ಸಂಜೀವ ಬಿಲ್ ನೋಡಿ ಗಿರಾಕಿಗಳಿಂದ ಹಣ ಪಡೆದುಕೊಂಡ. ಚಿಲ್ಲರೆ ಹಣವನ್ನು ಲೆಕ್ಕ ಮಾಡುವಾಗ ಸ್ವಲ್ಪ ಅವನಿಗೆ ತೊಂದರೆಯಾಗುತಿತ್ತು. ಆದರೆ ಸೆಟ್ಟರು ಅವನಿಗೆ ಒತ್ತಿಯೊತ್ತಿ ಮೇಲಿಂದ ಮೇಲೆ ಹೇಳುತಿದ್ದ 'ತರಬೇತಿ' ಎಂಬ ಶಬ್ದ ಅವನ ತಲೆಯಲ್ಲಿ ಧಾಳಿ ನಡೆಸಿತ್ತು.

ಒಬ್ಬ ಗಿರಾಕಿ ಇಂಗ್ಲೀಷಿನಲ್ಲಿ ಸಂಜೀವನೊಡನೆ ಒಂದು ಚಲಚ್ಚಿತ್ರ ಮಂದಿರಕ್ಕೆ ಯಾವ ದಾರಿಯೆಂದು ಕೇಳಿದ. ಸಂಜೀವನಿಗೆ ಅದು ಅರ್ಥವಾಗಿ ಸೆಟ್ಟರೊಡನೆ ತುಳುವಿನಲ್ಲಿ ಕೇಳಿ, ಅವರಂದುದನ್ನು ಮರಳಿ ಇಂಗ್ಲೀಷಿನಲ್ಲಿ ಗಿರಾಕಿಗೆ ತಿಳಿಸಿದ. ಗಿರಾಕಿ ಬಿಳಿಯವ. ಅವನು "ಅಲ್ ರೈಟ್, ಥೇಂಕ್ಸ್"

ಎಂದು ಹೊರಟು ಹೋದ. ಸೆಟ್ಟರಿಗೂ ಅವೆರಡು ಶಬ್ದಗಳ ಅರ್ಥ ಗೊತ್ತಿತ್ತು. ( ಬಹುಶಃ ಅವರಿಗೆ ತಿಳಿದಿದ್ದುದು ಅವೆರಡು ಶಬ್ದಗಳು ಮಾತ್ರ ) ಸಂಜೀವ ಮಾತನಾಡಿದುದು ಇಂಗ್ಲೀಷಿನಲ್ಲೇ ಮನೆಯಲ್ಲಿ ಕೂಡ ಮಾತನಾಡುವ ಬಿಳಿಯನಿಗೆ ಗೊತ್ತಾಯಿತೆಂದು ಅವರಿಗೆ ವ್ಯಕ್ತವಾಯಿತು.

ಸುಮಾರು ನಾಲ್ಕು ಗಂಟೆಗೆ ಸೆಟ್ಟರು ಸಂಜೀವನೊಡನೆ ಮನೆಗೆ ಹೊರಟರು. ಆಗಲೂ ಅವರು ಹೋದುದು ರೈಲಿನಲ್ಲೇ. ಮನೆಗೆ ತಲುಪುವಾಗ ಶೇಖರ ಸಾಲೆಯಿಂದ ಬಂದಿದ್ದನಷ್ಟೆ. ಮೂವರೂ ಒಟ್ಟಿಗೆ ಮನೆಯಲ್ಲಿ ಚಹ ಕುಡಿದಾದ ಮೇಲೆ ಸೆಟ್ಟರು ಶೇಖರನಿಗೆ ಹತ್ತು ರೂಪಾಯಿಯ ನೋಟೊಂದನ್ನು ಕೊಟ್ಟು, " ಸಂಜೀವನನ್ನು ಮೆಟ್ರೋಗೆ ಕರೆದುಕೊಂಡು ಹೋಗು " ಎಂದರು.

ಸಂಜೀವ ಶೇಖರನೊಂದಿಗೆ ಸಂಕೋಚದಿಂದಲೇ ಹೊರಟ. ಶೇಖರ ಆಧುನಿಕವಾದ ಉಡುಪುಗಳನ್ನು ತೊಟ್ಟವ. ಮೊದಲೂ ಬಹಳ ಸುಂದರ. ಮುಖದಲ್ಲಿ ಕುಡಿಮೀಸೆ ಹುಟ್ಟುತಿತ್ತಷ್ಟೇ. ಆದರೆ ಸಂಜೀವನನ್ನು ನೋಡಿಯೇ ಹಳ್ಳಿಯವನೆಂದು ಹೇಳಿಬಿಡಬಹುದಿತ್ತು. ಅವನು ಮೂರು ನಾಲ್ಕು ದಿನಗಳಿಂದಲೂ ಗಡ್ಡ ತೆಗೆದಿರಲಿಲ್ಲ. ತಲೆಗೆ ಎಣ್ಣೆ ಹಾಕಿರಲಿಲ್ಲ. ದೇಹವಿಡೀ ಕಪ್ಪು. ಮುಖದಲ್ಲಿಯೂ ಏನೊಂದೂ ಲಕ್ಷಣವಿರಲಿಲ್ಲ. ಅದರ ಮೇಲೆ ಬರೀ ಕಾಲಿನಲ್ಲಿ ಕಚ್ಚೆಯುಟ್ಟುಕೊಂಡಿದ್ದಾನೆ.

" ನೀವು ಈವರೆಗೆ ಮುಂಬಯಿಗೆ ಬರಲಿಲ್ಲವೇ ? " ಎಂದು ಶೇಖರ ಕೇಳಿದ. ಅದು ಮುಂಬಯಿಲ್ಲಿರುವ ಎಲ್ಲರೂ ಕೇಳುವ ಮೊದಲ ಪರಿಚಯದ ಪ್ರಶ್ನೆ.

" ಇಲ್ಲ " ಎಂದು ಸಂಜೀವ ತಲೆದೂಗಿದ.

ಅವರಿಬ್ಬರೂ ಒಂದು ಮೋಟರನ್ನೇರಿದರು. ಸಂಜೀವನೊಡನೆ ಒಂದು ಚಿಕ್ಕಾಸು ಕೂಡ ಇರಲಿಲ್ಲ. ಶೇಖರನೇ ಚಿಲ್ಲರೆಯನ್ನು ಕಂಡಕ್ಟರನಿಗೆ ಕೊಟ್ಟ.

ಮೆಟ್ರೋ ಚಿತ್ರಮಂದಿರಕ್ಕೆ ಬಸ್ಸು ನಿಲ್ದಾಣದಿಂದ ಸುಮಾರು ಅರ್ಧ ಮೈಲು ಅವರು ನಡೆಯಬೇಕಿತ್ತು. ಸಂಜೀವನಿಗೆ ಮಾರ್ಗ ದಾಟಿ ಮುಂದರಿಯಲು ತುಂಬ ಸಮಯ ಬೇಕಾಯಿತು. ಶೇಖರ "ಅದುವೇ ಅಜಾದ್

ಮೈದಾನು. ಇದು ಮುನಿಸಿಪಾಲಿಟಿಯ ಕಟ್ಟಡ" ಹೀಗೆಲ್ಲ ಸ್ವಲ್ಪಸ್ವಲ್ಪ ಹೇಳಿ "ಅದೇ ಸಿನೇಮಾ, ಮೆಟ್ರೋ" ಎಂದು ಕೈ ತೋರಿಸಿದ.

ಸಂಜೀವ ಹೇಗೋ ಶೇಖರನನ್ನು ಹಿಂಬಾಲಿಸಿ ಚಿತ್ರಮಂದಿರದೊಳಗೆ ಹೋದ. ಅದರ ವಿಸ್ತಾರ ಮತ್ತು ಸಿಂಗಾರವನ್ನು ಕಂಡು ಅವನು ಬೆರಗಾದ. ಅವನು ಕಂಡಿದ್ದ ಮಂಗಳೂರಿನ ತಗಣೆ ತುಂಬಿದ ಕುರ್ಚಿಗಳುಳ್ಳ ಸಿನೇಮಾ ಮಂದಿರಕ್ಕೂ ಇದಕ್ಕೂ ಅಜಗಜಾಂತರವಿತ್ತು. ಒಳಹೊಕ್ಕೊಡನೆ ಅವನ ದೇಹ ಬಿಟ್ಟು, ಉಸಿರು ಸಹ ತಣ್ಣಗಾಯಿತು.

"ಈ ಚಿತ್ರವನ್ನು ನಾನು ನೋಡುವುದು ಇದು ಐದನೇ ಸಾರಿ" ಎಂದು ಶೇಖರ ಹೇಳಿದ.

ಸಂಜೀವ "ಹೌದೇ ?" ಎನ್ನುತ್ತ ಅವನನ್ನು ನೋಡಿ ನೆಗಾಡಿದ.

ಅದು ಅವನು ಮುಂಬಯಿಯಲ್ಲಿ ನಕ್ಕ ಮೊದಲ ನಗು.

## ಅಧ್ಯಾಯ ಹದಿನಾಲ್ಕು.

ಪೂವಕ್ಕೆ, ಸಂಜೀವನು ನಾಲ್ಕೈದು ದಿನಗಳ ತನಕ ಬಾರದಿದ್ದುದನ್ನು ಕಂಡು ತುಂಬ ಕಳವಳಪಟ್ಟಳು. ಕೊನೆಗೆ ದೇವಪ್ಪನೊಡನೆ ಕೇಳಿದಳು. ಅವನು ಏನೋ ಒಂದು ಉತ್ತರ ಕೊಟ್ಟ. ಅವಳಿಗೆ ಸಂಶಯವಾಯಿತು. ಆರನೇ ದಿನ ಅವಳು ಕೂಗಿಯೇ ಬಿಟ್ಟಳು.

ದೇವಪ್ಪನಿಗೆ ಸಂಜೀವನು ಊರು ಬಿಟ್ಟುದು ಹಿಂದೆಯೇ ತಿಳಿದಿತ್ತು. ಶೆಟ್ಟರು ಸಂಜೀವನೊಡನೆ ಮಾತನಾಡುವುದನ್ನು ಅವನು ಹಿಂದೆಯೇ ಕೇಳಿದ್ದ. ಅವರು ಮುಂಬಯಿಗೆ ಹೋಗೋಣ, ಮತ್ತೆ ಒಂದು ವರುಷದ ಬಳಿಕ ಹಿಂದಿರುಗಬಹುದು ಎನ್ನುತಿದ್ದರು. ಸಂಜೀವನು ಹೋದ ಮೇಲೆ ದೇವಪ್ಪನಿಗೆ ಸಂತೋಷ ಹೆಚ್ಚಿತ್ತು. ಮೊದಲೇ ತಾಯಿ ತನ್ನ ಕೈಯೊಳಗಿದ್ದಳು. ಇನ್ನಂತೂ ಅವಳಿಗೆ ತಾನಲ್ಲದೆ ಬೇರೆ ಗತಿಯೇ ಇಲ್ಲವೆಂದು ನೆನೆಸಿದ.

ಸಂಜೀವ ಹೋದಂದಿನಿಂದ ಪಾರ್ವತಿ ಸರಿಯಾಗಿ ಊಟ ಮಾಡುತ್ತಲೂ ಇದ್ದಿಲ್ಲ. ಹಿಂದೆ ಸ್ನೇಹಮಯಿಯಾಗಿದ್ದ ಶಂಕರಿ ಈಗ ರುಕುಮಿ

ಯೊಡನೆ ಸೇರಿ ಈಗ ಪಾರ್ವತಿಯನ್ನು ಮೂದಲಿಸುತ್ತಿದ್ದಳು. ಪಾರ್ವತಿಗೆ ಒಂದುಕಡೆ ಗಂಡನಿಲ್ಲದ ಚಿಂತೆ, ಒಂದೆಡೆಯಿಂದ ಅತ್ತೆಯ ಅಸಮಾಧಾನ, ಇನ್ನೊಂದೆಡೆಯಿಂದ ಅಕ್ಕನು ಮತ್ತು ಅತ್ತಿಗೆಯರ ನಿಂದೆಗಳು—ಇವೆಲ್ಲ ಅವಳನ್ನು ನಿರಾಶಾವಾದದ ಕತ್ತಲೆಗೆ ನೂಕಲು ಸಾಕಾಗಿದ್ದುವು. ಅತ್ತೆ ಬೈಯ್ಯನ್ನು ನಿಲ್ಲಿಸಿಯಾಗಿದ್ದರೂ ಅವಳ ವ್ಯಥೆಗೆ ತಾನೇ ಕಾರಣಕರ್ತಳೆಂಬುದು ಪಾರ್ವತಿಗೆ ವಿದಿತವಾಗಿತ್ತು.

ಈಗ ಪಾರ್ವತಿ ತಲೆ ಬಾಚುವುದಿಲ್ಲ. ವಸ್ತ್ರಗಳನ್ನು ತೊಳೆಯುವುದಿಲ್ಲ ಒಬ್ಬೊಂಟಿಗಳಾಗಿಯೇ ಅಲ್ಲಲ್ಲಿ ಕೆಲಸ ಮಾಡುವಳು, ಅಳುವಳು. ದೇವಪ್ಪ ನನ್ನು ಕಂಡರೆ ಹೆದರಿ ಓಡಿಹೋಗುವಳು. ಮತ್ತೆ ರಾತ್ರಿ ಒಬ್ಬಳೇ ಸಂಜೀ ವನ ಕೋಣೆಯಲ್ಲಿ ಮಲಗುವಳು.

ದೇವಪ್ಪನ ಈ ಸ್ವಕಲ್ಪಿತ ಸ್ವಾತಂತ್ರ್ಯ ಮನೋಭಾವನೆಯಲ್ಲಿ ಅನೇಕ ವಿಧದ ಆಲೋಚನೆಗಳು ಮೂಡತೊಡಗಿದುವು. ತನ್ನ ಹೆಂಡತಿಯ ಕುಟುಂ ಬವನ್ನು ತನ್ನಲ್ಲಿಗೇ ಕರೆಸಬಹುದೆಂದು ಲೆಕ್ಕ ಹಾಕಿದ. ಮನೆಯ ಆಡಳಿತೆ ಯನ್ನು ತಾಯಿಯಿಂದ ತಾನೇ ಸಂಪೂರ್ಣವಾಗಿ ಬರೆದುಕೊಳ್ಳಬೇಕೆಂದು ಆಶಿ ಸಿದ. ತಾನು ಮತ್ತು ತನ್ನ ಹೆಂಡತಿ ಯಜಮಾನ-ಯಜಮಾನತಿಯರಾಗ್ಯ ವಾಗಿ ಗದ್ದೆಯ ಕೆಲಸವನ್ನೆಲ್ಲ ಆಳುಗಳಿಂದಲೇ ಮಾಡಿಸಿ, ತಾವಿಬ್ಬರು ಜರಿತಾರಿ ವಸ್ತ್ರಗಳನ್ನುಟ್ಟು, ವಿವಿಧ ಆಭರಣಗಳನ್ನು ತೊಟ್ಟು ಮೆರೆಯಬೇಕೆಂದು ಬಗೆದ.

ಆದರೆ ಅವನಿಗೆ ಪಾರ್ವತಿಯನ್ನು ನೋಡುವಾಗ ಒಂದು ದೊಡ್ಡ ಕೊರತೆ ಅವನಲ್ಲಿ ಕಾಣಬಂತು. ರುಕುಮಿಯಲ್ಲಿ ಪಾರ್ವತಿಯ ಅರ್ಧ ಸೌಂದರ್ಯ ಕೂಡಾ ಇದ್ದಿಲ್ಲ. ರುಕುಮಿಯನ್ನು ಎಷ್ಟು ಸಿಂಗರಿಸಿದರೂ ಅವ ನಿಗೆ ತೃಪ್ತಿಯನ್ನೀಯುವಷ್ಟು ಚೆಲುವೆಯಾಗಲಿಕ್ಕಿಲ್ಲ ಅವಳು. ಅವಳ ಉದ್ದ ಪಾದ ಕ್ಷೀಣ ಕೈಕಾಲುಗಳ ದೇಹ, ಸೊರಗಿ ಹೋಗಿದ್ದ ಕಪ್ಪು ಚರ್ಮದ ಮೈ ಬಣ್ಣ, ಒಳಗೆ ಬತ್ತಿಹೋದ ದವಡೆಗಳು, ಕಂದು ಬಣ್ಣದ ದಪ್ಪ ತುಟಿಗಳು, ಒಂದು ಮೊಳದಷ್ಟೂ ಉದ್ದವಿಲ್ಲದ ತಲೆಗೂದಲುಗಳು—ಇವನ್ನೆಂದೂ ಒಪ್ಪ ಯದಕ್ಕೆ ಮಾರ್ಪಡಿಸಲು ಸಾಧ್ಯವಿಲ್ಲವೆಂಬುದು ಅವನಿಗೆ ಚೆನ್ನಾಗಿ ಗೊತ್ತಿತ್ತು.

ಅವನು ಅವಳನ್ನೆಂದೂ ಪ್ರೀತಿಸಿರಲಿಲ್ಲ. ಅವಳನ್ನು ಮೊದಲ ಸಲ ಒಬ್ಬಂಟಿಗಳನ್ನಾಗಿ ಒಂದು ಕಾಡಿನ ಮಧ್ಯೆ ಕಂಡಾಗ ಅವನ ಆಗಿನ ಪ್ರಾಯಕ್ಕೆ ಸಹಜವಾದ ಪೌರುಷವು ಕಾಮವನ್ನು ಕೆಣಕಿತ್ತು. ಅದರೊಡನೆ ಅವಳ ಆಹ್ವಾನಿಸುತಿದ್ದ ಹಾವಭಾವಗಳು ಅವನ ಚಿತ್ತವನ್ನು ಇನ್ನೂ ವಿಕೃತಗೊಳಿಸಿದುವು. ಅವನು ಆತನಕ ಹೆಣ್ಣಿನೊಡನೆ ಸಮಾಗಮವನ್ನು ರಾತ್ರಿಹಗಲು ಬಯಸಿದ್ದನೇ ಹೊರತು ಅವನ ಸಂಕೋಚದಿಂದಾಗಿ ಒಬ್ಬ ಹುಡುಗಿಯೊಡನೆಯೂ ಅವನು ಕೂಡಿರಲಿಲ್ಲ. ಇಂಥ ಉತ್ಕಟೇಚ್ಛೆಯ ಮನೋಭಾವಗೊಡನೆ ಆ ಏಕಾಂತ ಸನ್ನಿವೇಶವು ಮಿಲನವಾಗಿ ದೇವಪ್ಪನ ಬಯಕೆಗೆ ಜೀವವನ್ನು ಕೊಟ್ಟಿತು. ಅವನು ರುಕುಮಿಯೊಡನೆ ಮಾತನಾಡಲೂ ಇಲ್ಲ. ಅವಳನ್ನೇ ನೋಡಿ ನಸುನಗುತ್ತ ಒಮ್ಮೆಲೇ ಅವಳ ಮೇಲೆ ನೆಗೆದಿದ್ದ. ಅವಳು ಒಂದಿಷ್ಟು ಅಡ್ಡಿ ಮಾಡದೆ ಅವಳ ಅಂಗಚೇಷ್ಟೆಗಳಿಂದ ಅವನ ಆವೇಶವನ್ನು ಉದ್ರೇಕಿಸಿದ್ದಳು.

ಹಾಗೆ ಗಂಟುಬಿದ್ದ ರುಕುಮಿಯನ್ನು ದೇವಪ್ಪನಿಗೆ ತೊರೆಯಲಾಗಲಿಲ್ಲ. ಅವಳಿಗೊಂದು ಮಗು ಹುಟ್ಟುವ ತನಕವೂ ದೇವಪ್ಪನಿಗೆ ಅವಳ ಹುಚ್ಚು ಬಿಟ್ಟಿರಲಿಲ್ಲ. ಅಷ್ಟರತನಕ ಅವಳ ಮೈಯ್ಯಲ್ಲಿ ಸ್ವಲ್ಪ ಕೊಬ್ಬು ಇತ್ತು. ದೇವಪ್ಪನ ಮೋಹ ಅವಳ ಕೊಬ್ಬಿನ ಮೇಲಿತ್ತು. ಅದು ಇಳಿದು ಹೋಗಲು, ಅವನಿಗೆ ಅವಳ ನಿಜವಾದ ರೂಪರೇಷೆ ಮೆಲ್ಲಮೆಲ್ಲನೆ ಕಾಣಹತ್ತಿತು. ಆಗ ತಾನೇ ಅವನಲ್ಲಿ ಸುಪ್ತವಾಗಿದ್ದ ವಿವೇಕ ಮೂಡಿದುದು. ಆದರೂ ರುಕುಮಿ ಅಷ್ಟರಲ್ಲೇ ಅವನ ಮನಸ್ಸನ್ನು ಹದ ಮಾಡಿದ್ದಳು. ಅವಳನ್ನು ಹೆಚ್ಚು ದಿನ ಅವನಿಗೆ ಬಿಟ್ಟಿರುವುದು ಅಸಾಧ್ಯ. ಅವಳು ಹೇಳಿದ್ದಕ್ಕೆ ಒಡಂಬಡದಿರುವುದಂತೂ ಅವನಿಂದ ಆಗದ ಮಾತು.

ಪಾರ್ವತಿಯ ಮೇಲೆ ಮೊದಲೇ ಅವನು ಕಣ್ಣಿಟ್ಟಿದ್ದ. ಒಂದಲ್ಲ ಒಂದು ದಿನ ಅವಳನ್ನು ತನ್ನ ಬಗಲಿನಲ್ಲಿ ಹಾಕಿಕೊಳ್ಳಬೇಕೆಂದು ತನ್ನೊಳಗೇ ನಿರ್ಧರಿಸಿದ್ದ. ಅವನು ಯಕ್ಷಗಾನದ ತಾಳ ಮದ್ದಳೆಯಲ್ಲಿ ಅರ್ಥ ಹೇಳುವಾಗ ಹೆಂಗಸರನ್ನೆಷ್ಟೋ ವರ್ಣಿಸಿದುದಿತ್ತು. "ಮಂದಗಮನೆ", "ಮದಗಜಗಮನೆ", "ಏಣಾಕ್ಷಿ", "ಇಂದುಮುಖಿ", "ಮನ್ಮಥನ ರಾಣಿ"—ಇತ್ಯಾದಿ ಶಬ್ದಗಳನ್ನೆಷ್ಟೋ ಸಲ ಅವನು ಸೀತೆ, ದ್ರೌಪದಿ, ದಮಯಂತಿ ಮುಂತಾದವರನ್ನು ಹೊಗಳಿದುದಿತ್ತು. ಈ ವರ್ಣನೆಗೆ ಪಾರ್ವತಿ ಅವನ

ದೃಷ್ಟಿಯಲ್ಲಿ ಯೋಗ್ಯಳಾಗಿದ್ದಳು. ಅವಳಿಗೆ ಈಗ ಬೇಕೆಂದೇ ತಾಯಿಯೊಡನೆ ಹೇಳಿ ಹಿಂಸೆ ಕೊಡಿಸುತಿದ್ದ.

ಸಂಜೀವನು ಮನೆ ಬಿಟ್ಟ ಬಳಿಕ ದೇವಪ್ಪನ ಆಸೆ ಬೇತಾಳನ ರೂಪವನ್ನು ತಾಳಿತು. ನಾನಾವಿಧದ ತಂತ್ರಗಳನ್ನು ಕಲ್ಪಿಸಿದ. ಒಂದೆರಡು ದಿನ ಅವಳೊಡನೆ ಅಕ್ಕರೆಯಿಂದ ಮಾತನಾಡಿದ. ಕೆಲವೊಮ್ಮೆ ಅವಳು ಹೋಗುತಿದ್ದ ದಾರಿಯಲ್ಲಿ ಅಡ್ಡ ನಿಂತ. ಒಮ್ಮೆ ಅವಳು ಸ್ನಾನ ಮಾಡುವಾಗ ಬಚ್ಚಲ ಕೊಟ್ಟಿಗೆಯ ಅಟ್ಟದಲ್ಲಿ ಕುಳಿತ. ಅವಳು ಕದ ಮುಚ್ಚಿ ವಸ್ತ್ರ ಬಿಚ್ಚಿಸುತಿದ್ದಂತೆಯೇ, ಒಲೆಯಿಂದ ಹೊರಡುತಿದ್ದ ಹೊಗೆ ಅವನ ಮೂಗಿನಲ್ಲಿ ತುಂಬಿ ತಡೆಯಲಾರದೆ ಅವನಿಗೆ ಒಂದು ಕೆಮ್ಮು ಬಂತು. ಕೂಡಲೇ ಪಾರ್ವತಿ ವಸ್ತ್ರವನ್ನು ಮೈಗೆ ಸುತ್ತಿಕೊಂಡು ಕದ ತೆಗೆದು ಹೊರಗೆ ಓಡಿದಳು. ಆದರೆ ಅವಳಿಗೆ ಯಾರೊಡನೆಯೂ ಹೇಳಲು ಆಸ್ಪದವಿಲ್ಲವೆಂದು ಅವನಿಗೆ ಚೆನ್ನಾಗಿ ಗೊತ್ತಿತ್ತು.

ಏನು ಮಾಡಿದರೂ ಪಾರ್ವತಿ ಅವನಿಗೆ ಒಲಿಯುವುದಿಲ್ಲವೆಂಬುದು ಅವನಿಗೆ ಕೆಲ ದಿನಗಳಲ್ಲೇ ಖಚಿತವಾಯಿತು. ಅವನ ಸನ್ನೆಗಳಿಗಾಗಲಿ, ಮಾತುಗಳಿಗಾಗಲಿ, ಪಾರ್ವತಿ ಉತ್ತರಗೊಡುವುದಂತಿರಲಿ; ಅವಳು ಅವನನ್ನು ಕಣ್ಣೆತ್ತಿ ಕೂಡಾ ನೋಡುತಿದ್ದಿಲ್ಲ

ದೇವಪ್ಪ ಹತಾಶನಾದ. ಈಗ ಅವನಿಗೆ ಅವಳಮೇಲೆ ಛಲಹುಟ್ಟಿತು. ಅವಳೊಡನೆ ಒಂದು ರಾತ್ರೆ ಕಳೆಯಲಿಕ್ಕಾಗಿ ಯಾವ ದಾರಿಯನ್ನು ಹಿಡಿದು ಸಾಧಿಸಲೂ ಅವನು ಸಿದ್ಧನಾದ. ರುಕುಮಿಯ ಮೇಲಿನ ಶ್ರದ್ಧೆ ಮೇಲಿಂದ ಮೇಲೆ ಅವನಿಗೆ ದೂರವಾಯಿತು. ಬೇಸಾಯದ ಕೆಲಸದ ಮೇಲಿನ ಆಸಕ್ತಿ ಇಂಗಿ ಹೋಯಿತು. ಪಾರ್ವತಿಯನ್ನೊಮ್ಮೆ ಸೊಪ್ಪು ತರಲು ಗುಡ್ಡೆಗೆ ಕಳಿಸಿದ. ಅವಳು ಸೊಪ್ಪು ಕೊಯ್ಯುತಿದ್ದಾಗ ಮೆಲ್ಲನೆ ಹಿಂದಿನಿಂದ ಹೋದ. ಆದರೆ ಅವಳ ಸಮೀಪವೇ ನಾಲ್ಕೈದು ಜನ ಹೊಲತಿಯರು ಸೊಪ್ಪು ಕೊಯ್ಯುತಿದ್ದರು. ಅವನ ಕೋಪ ನೆತ್ತಿಗೇರಿತು. ಉನ್ಮತ್ತನಂತೆ ಮನೆಗೆ ಹಿಂದಿರುಗಿದ.

ಅಂದು ರಾತ್ರೆ ರುಕುಮಿಯ ಹತ್ತಿರ ಹೊರಗೆ ಹೋಗಿ ಬರುತ್ತೇನೆಂದು ಹೇಳಿ ದೇವಪ್ಪ ಮೆಲ್ಲನೆ ಪಾರ್ವತಿಯ ಕೋಣೆಗೆ ಹೋಗಿ ಮಂಚದ ಅಡಿಯಲ್ಲಿ

ಮಲಗಿಕೊಂಡ. ಸ್ವಲ್ಪ ಹೊತ್ತಾದೊಡನೆ ಪಾರ್ವತಿ ಕತ್ತಲೆಯಲ್ಲೇ ಒಂದು ಕದ ಮುಚ್ಚಿ ನೆಲದ ಮೇಲೆ ಉರುಳಿದಳು.

ದೇವಪ್ಪನಿಗೆ ತುಸು ಹೊತ್ತು ಗಾಬರಿಯಾಯಿತು. ಅವಳು ತನ್ನನ್ನ ಪೇಕ್ಷಿಸದೆ ಪ್ರತಿಭಟಿಸಿದರೆ ಏನಾದೀತು ? ಅವಳಿಗೆ ತಾನು ಬೇಡಾಗಿದ್ದ ಪಕ್ಷ ದಲ್ಲಿ ಅವಳು ಬೊಬ್ಬೆ ಹಾಕದೆ ಬಿಡಳು. ಆಗ ಮನೆಯವರಿಗೆ ತಿಳಿದು ಊರ ವರಿಗೆಲ್ಲ ಗೊತ್ತಾದರೆ ದೊಡ್ಡ ಅಪಮಾನವಾದೀತು. ಹೀಗೆಲ್ಲ ಯೋಚಿಸಿ ಕೊನೆಗೆ ಶಂಭು ಬಲ್ಯಾಯನ ನೆನಪಾಯಿತವನಿಗೆ. ಶಂಭು ಬಲ್ಯಾಯ ದೊಡ್ಡ ಮಂತ್ರವಾದಿ. ಮಂತ್ರ ಮಾಡಿ ಕೊಲ್ಲುವುದರಲ್ಲಿ ಅವನು ಪ್ರಸಿದ್ಧಿ ಹೊಂದಿದವ; ಹಾಗೆಯೇ ವಶೀಕರಣ ಮಂತ್ರದಲ್ಲೂ ಅವನ ಹೆಸರು ಬಹಳ ಖ್ಯಾತಿಯನ್ನು ಪಡೆದಿತ್ತು. ದೇವಪ್ಪ ಅವನ ನೆರವನ್ನು ಪಡೆಯೋಣವೆಂದು ಯೋಚಿಸಿ ಮಧ್ಯರಾತ್ರಿಯವರೆಗೆ ಮಂಚದ ಅಡಿಯಲ್ಲಿ ಜಾಗ್ರತೆಯಿಂದಿದ್ದು, ಪಾರ್ವತಿಗೆ ನಿದ್ದೆ ಹತ್ತಿತೆಂದು ಖಚಿತವಾದೊಡನೆ ಮೆಲ್ಲನೆ ಕೋಣೆಯಹೊರಗೆ ಹೋದ.

ಮರುದಿನವೇ ಶಂಭು ಬಲ್ಯಾಯನಲ್ಲಿಗೆ ದೇವಪ್ಪ ಹೊರಟ. ಹೋಗು ವಾಗ ಪೂವಕ್ಕೆಯ ಪೆಟ್ಟಿಗೆಯಿಂದ ಐದೈದು ರೂಪಾಯಿಗಳ ಹತ್ತು ನೋಟು ಗಳನ್ನು ಸೊಂಟಕ್ಕೆ ಸಿಕ್ಕಿಸಿಕೊಂಡಿದ್ದ. ಶಂಭು ಬಲ್ಯಾಯನಲ್ಲಿ ಪ್ರಶ್ನೆ ಕೇಳ ಬಂದವರು ಅನೇಕ ಜನರಿದ್ದರು. ದೇವಪ್ಪ ಕಾದು ಕಾದು ಕೊನೆಗೆ ತಾನು ಬಂದ ವಿಷಯವನ್ನು ಸೂಕ್ಷ್ಮವಾಗಿ ಬಲ್ಯಾಯನೊಡನೆ ಹೇಳಿದ. ಬಲ್ಯಾಯ ಪಾರ್ವತಿಯ ಹೆಸರನ್ನು ಬರೆದುಕೊಂಡ. ಆಮೇಲೆ ಒಟ್ಟು ನೂರು ರೂಪಾ ಯಿಗಳಾಗುತ್ತವೆಂದೂ ಈಗ ಮುಂಗಡವಾಗಿ ಐವತ್ತನ್ನು ಕೊಡಬೇಕೆಂದೂ ಬಲ್ಯಾಯ ಹೇಳಲು, ದೇವಪ್ಪ ಸೊಂಟದಿಂದ ಹತ್ತು ನೋಟುಗಳನ್ನು ತೆಗೆದು ಲೆಕ್ಕಮಾಡಿ ಕೊಟ್ಟ.

ಬಲ್ಯಾಯ ತುಸು ಹೊತ್ತು " ಹ್ರಾಂ " " ಹ್ರೀಂ " " ಭ್ರೂಂ " " ಓ ದೇವಿ " ಹೀಗೆಂದು ಮಂತ್ರ ಹೇಳುತ್ತ ಕಣ್ಣುಗಳನ್ನು ಮೇಲೆ ಕೆಳಗೆ ಮಾಡಿ ಕೈಗಳನ್ನು ಅತ್ತಿತ್ತ ತಿರುಗಿಸಿ ಕೊನೆಗೆ ದೇವಪ್ಪನೊಡನೆ ಒಂದಿಷ್ಟು ಭಸ್ಮವನ್ನೂ ಸ್ವಲ್ಪ ಕಾಡಿಗೆಯನ್ನೂ, ಒಂದು ತಾಳೆ ಮರದ ಎಲೆಯಲ್ಲಿ ಬರೆದ ಚೀಟನ್ನೂ ಕೊಟ್ಟು " ಈ ಯಂತ್ರವನ್ನು ಸಾಮಿ ಕೈಗೆ ಕಟ್ಟು. ನೆಲಗೆ ತಾಗಕೂಡಾದು.

ಭಸ್ಮ "ಉಡುಗಿಗೆ"[೧] ತಿನ್ನಿಸು. ಕೊರ್ಚ ಮದಿ. ಚೋರಿ[೨] ನಲ್ಲಿ, ಇಬ್ನಾ ಯಂಗ್ಲ್[೩] ತನ್ನಿ[೪] ಯಲ್ಲಿ ಹಾಕಿ, ಇಲ್ಲ, ಪಾಳಫಲದಲ್ಲಿ[೫] ಕೊಡು. ಪಿನ್ನೆ[೬] ಈ ಮದ್ನ[೭] ನ್ನು ಸಾಮಿ ಕಣ್ಣಿಗೆ ತಾಗಿಸು. ಪಿನ್ನೆ ಅವಳಲ್ಲಿ ರಾತ್ರಿ ಪೋ" ಎಂದ.

ದೇವಪ್ಪ ಬರುವಾಗಲೇ ಒಳ್ಳೆಯ ರಸದಾಳಿಯ ಬಾಳೆಯ ಗೊನೆಯನ್ನು ಪಡಕೊಂಡ. ಮನೆಯಲ್ಲಿ ಎಲ್ಲರಿಗೂ ಅದನ್ನು ಹಂಚಿದ. ಪಾರ್ವತಿಗೆ ಕೊಟ್ಟ ಬಾಳೆಹಣ್ಣೊಂದರಲ್ಲಿ ಭಸ್ಮ ಹಾಕಿದ. ರಾತ್ರಿ ಪುನಃ ಅವಳ ಮಂಚದಡಿಯಲ್ಲಿ ಅಡಗಿ ಕುಳಿತುಕೊಂಡ. ಅವನಿಗೆ ಅದರ ಪರಿಣಾಮದ ಕುರಿತಾಗಿ ಏನೊಂದೂ ಸಂಶಯವಿರಲಿಲ್ಲ. ಅವನಿಗೆ ಗೊತ್ತಿದ್ದ ಜನರನೇಕರು ಶಂಭು ಬಲ್ಯಾಯನ ವಶೀಕರಣ ಯಂತ್ರದಿಂದ ಇಷ್ಟಾರ್ಥ ಸಿದ್ಧಿಯನ್ನು ಪಡೆದಿದ್ದರು.

ಪಾರ್ವತಿ ಅಂದು ಕೋಣೆಗೆ ಬಂದು ದೀಪ ಹಚ್ಚಿದಳು. ಆಮೇಲೆ ಅವಳು ಕೆಲಸ ಮಾಡಲಿಕ್ಕಾಗಿ ಉಟ್ಟಿದ್ದ ತುಂಡುವಸ್ತ್ರವನ್ನು ಬದಲು ಮಾಡಲು ಬಿಚ್ಚಿದಳು. ಅದರಲ್ಲಿ ಗೊಬ್ಬರದ ನೀರು ನಾರುತಿತ್ತು. ಅವಳು ವಸ್ತ್ರಬಿಚ್ಚಿದೊಡನೆ ದೇವಪ್ಪನ ಬಾಯಿಯ ಪಸೆ ಆರಿತು. ಮೈಯಿಡೀ ನಡುಗತೊಡಗಿತು. ಅವಳ ಬತ್ತಲೆಯಾದ ಮನಮೋಹಕ ಆಕೃತಿಯನ್ನು ಕಂಡು ತೀರ ಹುಚ್ಚನಂತಾದ. ಅವಳ ಬಾಡಿದ ಕಣ್ಣುಗಳ ಕೆಂಪು ತುಟಿಯ ಮುಖವನ್ನು ಹಲವು ಕ್ಷಣ ಎವೆಯಿಕ್ಕದೆ ನೋಡಿದ. ಅವಳ ಉಬ್ಬಿ ನಿಂತಿದ್ದ ಮೊಲೆಗಳು ಅವನ ಎದೆಯನ್ನು ಆಹ್ವಾನಿಸುವಂತಿದ್ದುವು. ಆ ಗೋದಿ ಬಣ್ಣದ ಮೈಯಲ್ಲಿ ಗಡುತರವಾದ ತಾರುಣ್ಯ ತುಂಬಿದ ತೊಡೆಗಳಲ್ಲಿ ದೇವಪ್ಪ ಒಮ್ಮೆ ಸ್ವರ್ಗಲೋಕವನ್ನೇ ಕಂಡ.

ಅವಳು ಒಡನೆಯೇ ಬೇರೊಂದು ವಸ್ತ್ರವನ್ನು ಉಟ್ಟುಕೊಂಡು ರವಿಕೆಯನ್ನು ಹಾಕಿಕೊಂಡಳು. ದೇವಪ್ಪನು ಬಲ್ಯಾಯ ಕೊಟ್ಟಿದ್ದ ಕಾಡಿಗೆಯನ್ನು

---

ಮಳೆಯಾಳಿಗಳು ಕನ್ನಡ ಮಾತನಾಡುವಾಗ ಅರ್ಧಮರ್ಧ ಅವರ ಭಾಷೆಯ ಉಚ್ಚಾರಣೆಗಳನ್ನು ಮಾಡುವರು.

೧. ಹುಡಿಗೆ, ೨. ಅನ್ನ, ೩. ಇಲ್ಲದಿದ್ದರೆ, ೪. ನೀರು, ೫. ಬಾಳೆಹಣ್ಣು, ೬. ಮತ್ತೆ, ೭. ಮದ್ದು.

ಕಣ್ಣಿಗೆ ಹಚ್ಚಿಕೊಂಡ ಕಣ್ಣು ಉರಿಯಲಾರಂಭಿಸಿದರೂ ಅವನು ಹಿಂದೆ ಜಾರಲಿಲ್ಲ. ಪಾರ್ವತಿಯು ದೀಪ ನಂದಿಸಿ ನೆಲದ ಮೇಲೆ ಮಲಗಿದ ಕೂಡಲೆ ಮೆಲ್ಲನೆ ಅವಳ ಬಳಿ ಸರಿದು ಅವಳ ಎದೆಗೆ ಕೈಹಾಕಿಯೇ ಬಿಟ್ಟ.

ಒಮ್ಮೆಲೇ ಪಾರ್ವತಿ ಹಿಡಿದೆದ್ದಳು. ಅವಳಿಗೆ ಭಯದಿಂದ ಬೊಬ್ಬೆ ಹಾಕಲು ಕೂಡಾ ಸ್ವರ ಬರಲಿಲ್ಲ.

ಅಷ್ಟರಲ್ಲಿ ಹೊರಗಿನಿಂದ ಕದ ತಟ್ಟುವ ಶಬ್ದ ಕೇಳಿತು. ಅವಳು ಒಮ್ಮೆಯೇ ಬಾಗಿಲು ತೆಗೆದಳು. ನೋಡುವಾಗ ರುಕುಮಿ ಚಿಮಣಿಯನ್ನು ಹಿಡಿದುಕೊಂಡು ಬಾಗಿಲಲ್ಲೇ ನಿಂತಿದ್ದಳು. ದೇವಪ್ಪ ಕೋಣೆಯೊಳಗಿಂದ ಒಮ್ಮೆಯೇ ಹೊರಗೆ ಹಾರಿ ಕತ್ತಲಲ್ಲಿ ಅದೃಶ್ಯನಾದ.

ರುಕುಮಿ ಕೋಪದಿಂದ "ಓಹ್ಹೋ ನಿನ್ನ ಬಲೆ ಇಲ್ಲಿಯ ತನಕ ಬೀಸಿದ್ದೀಯೆಂದು ನನಗೆ ಗೊತ್ತಿರಲಿಲ್ಲ! ಇವತ್ತು ನಾನು ಕಾದು ಕೂತದ್ದರಿಂದ ನನಗೆ ತಿಳಿಯಿತು." ಎಂದು ಪಾರ್ವತಿಯನ್ನುದ್ದೇಶಿಸಿ ಬೈದಳು.

ಪಾರ್ವತಿ ಅತ್ತಳು.

"ನಾನೇನು ಮಾಡಿದ್ದೇನೆಂದು ದೇವರಿಗಾದರೂ ತಿಳಿದೀತಲ್ಲ! ನಿಮಗೆ ನಾನು ಏನಾಗಿ ಹೋದರೂ ಒಂದೇ" ಎಂದು ಅವಳು ಹೇಳುತ್ತಿರುವಂತೆಯೇ ರುಕುಮಿ ಹಿಂದೆ ಹೋದಳು.

* * *

ನಾರಾಯಣಸೆಟ್ಟರು ಲಿಂಗಮ್ಮನನ್ನು ಕರೆದು ಒಂದು ಕಾಗದವನ್ನು ಕೋಚಣ್ಣ ರೈಗಳಿಂದ ಓದಿಸಿ ಹೇಳಿದರು:

"ಹೋಟೆಲ್ ಫೇಶನ್"
ಹಾರ್ನಬೀ ರೋಡ್,
ಮುಂಬಯಿ.
ತಾ. ೮—೧೨—೪೫.

ಶ್ರೀ|| ಸ್ವ|| ಮಾವಯ್ಯನವರ ಸನ್ನಿಧಿಗೆ: ಬಾಲಕ ಸಂಜೀವನ ಅರಿಕೆಗಳು :

"ಕ್ಷೇಮ. ತರುವಾಯ ನಾನು ಮನೆ ಬಿಟ್ಟು ಬಂದುದು ನಿಮಗೆ ಈ ಒಳಗಾಗಿ ತಿಳಿದಿರಬಹುದು. ಊರಿನಲ್ಲಿ ನಾನು ಯಾರಿಗೂ ಪ್ರಯೋಜನಕ್ಕೆ ಬೀಳಲಾರೆನೆಂದು ಮನಗಂಡುದರಿಂದ ಇಲ್ಲಿಗೆ ಬಂದಿದ್ದೇನೆ. ಇಲ್ಲಿ ನನ್ನಷ್ಟಕ್ಕೆ ನಾನಿರಲು ಯಾರ ಆತಂಕವೂ ಇಲ್ಲ. ಹುಟ್ಟಿಸಿದ ತಾಯಿಗೆ ಮತ್ತು ಕೈಹಿಡಿದ ಹೆಂಡತಿಗೆ ನಾನು ಬೇಡಾದ ಬಳಿಕ ಎಲ್ಲಿದ್ದರೇನು, ಏನಾದರೇನು? ನೀವೇ ಹೇಳಿ.

"ಇಂಥ ಪ್ರಸಂಗ ಬರಬಹುದೆಂದು ನಾನು ಹಿಂದೆಂದೂ ಎಣಿಸಿರಲಿಲ್ಲ. ನಾನು ನಿಮ್ಮನ್ನೆಲ್ಲ ಇದರಿಂದಾಗಿ ತೊಂದರೆಗೀಡು ಮಾಡಿದ್ದಕ್ಕೆ ಕ್ಷಮಿಸಬೇಕು. ನಾನು ಇನ್ನು ದೇಶಾವರಿ ಹೋದರೂ ಮನೆಗೆ ಹಿಂತಿರುಗಲಾರೆ ಎಂಬುದು ಖಂಡಿತ.

"ಸದ್ಯಕ್ಕೆ ನಾನು ನನ್ನ ಸೋದರ ಮಾವನಲ್ಲಿ ಉಳಕೊಂಡಿದ್ದೇನೆ. ಅವರ ವಿಷಯ ನಿಮಗೆ ಗೊತ್ತಿರಬಹುದೆಂದು ನಂಬಿರುವೆನು.

"ನಿಮ್ಮ ಮಗಳು ಇನ್ನು ನನ್ನವಳಲ್ಲ. ಅವಳ ಭವಿಷ್ಯವನ್ನು ನಿಮಗೆ ಇಚ್ಛೆಯಿದ್ದಂತೆ ನೀವು ನಿರ್ಧರಿಸಬಹುದು. ಅವಳ ದೃಷ್ಟಿಯಿಂದ ನಾನು ಇದ್ದರೂ ಇಲ್ಲದವನ ಹಾಗೆ.

"ಬೇಗನೇ ಕಾಗದ ಬರೆಯಲಾಗಲಿಲ್ಲ. ತುಂಬ ವಿಳಂಬವಾವಾಯಿತು. ಇಂಥ ದೊಡ್ಡ ನಗರದಲ್ಲಿ ಕಾಗದ ಬರೆಯಲು ಬೇಕಾಗುವ ತಾಳ್ಮೆ ಮತ್ತು ಸಮಯಗಳು ದುರ್ಲಭವೆಂದು ನಾನು ನಿಮಗೆ ಹೇಳಬೇಕಾಗಿದೆ. ಆದುದರಿಂದ ನನ್ನನ್ನು ಕ್ಷಮಿಸಿರೆಂದು ಪುನಃ ಕೇಳಿಕೊಳ್ಳುವೆ.

"ನನ್ನ ವಿಚಾರದಲ್ಲಿ ನೀವೇನು ಚಿಂತಿಸಬಾರದಾಗಿ ಪ್ರಾರ್ಥಿಸುತ್ತೇನೆ."

"ಇತಿ ನಿಮ್ಮ,
—ಸಂಜೀವ

"ಇವನು ಹೋಗಿ ಇಷ್ಟು ಸಮಯವಾದರೂ ನಮಗೊಂದೂ ಸುದ್ದಿಯೇ ಇಲ್ಲವಲ್ಲ! ಎಂಥ ಹುಚ್ಚು ಹುಡುಗ" ಎಂದು ಸೆಟ್ಟರು ಮೂಗಿನ ಮೇಲೆ ಬೆರಳನ್ನಿಟ್ಟರು.

"ಅದೇ ನಾನು ಹೇಳಿದೆನಲ್ಲ ಸೆಟ್ಟರೆ?" ರೈಗಳು ಬೀಡಿಯನ್ನೊಮ್ಮೆ ಸೇದುತ್ತ ನುಡಿದರು: "ಈಗಿನ ಹುಡುಗರ ಗುಣ ಹಾಗೆಯೆ. ಅವರ ಮನಸ್ಸು ಬಹಳ ಮೃದು. ಯಾರಿಗೂ ನೋವನ್ನುಂಟು ಮಾಡರು. ಇಲ್ಲವಾದರೆ ಸಂಜೀವನಿಗೇನೂ ಬುದ್ಧಿವಂತಿಕೆ ಕಡಿಮೆಯೆಂದೆಣಿಸಬೇಡಿ. ರಾಮಪ್ಪ ಅವನನ್ನು ಚೆನ್ನಾಗಿ ದುಡಿಸಿ ಹಣ ಮಾಡದಿರಲಿಕ್ಕಿಲ್ಲ."

ಲಿಂಗಮ್ಮ ಒಮ್ಮೆಲೇ ಅಳಲು ಪ್ರಾರಂಭಿಸಿದಳು.

"ಹೂಂ. ನಾನೇನು ಮಾಡಬಹುದು? ಅವನ ಮತ್ತು ನಮ್ಮ ಗ್ರಹಚಾರವೇ ಹಾಗೆಂದಿದ್ದರೆ ಏನನ್ನೂ ಯಾರಿಂದಲೂ ಮಾಡಲು ಸಾಧ್ಯವಿಲ್ಲ. ಅವನ ಕಷ್ಟಗಳನ್ನು ನನ್ನೊಡನೆ ಹೇಳುತಿದ್ದರೆ ನಾನಾದರೂ ಏನಾದರೊಂದು ಪರಿಹಾರ ಒದಗಿಸುತಿದ್ದೆ. ಅವನಿಗೆ ಮನಸ್ಸಿದ್ದರೆ ಇಲ್ಲೇ ಇರಬಹುದಿತ್ತು. ಇಷ್ಟು ಜನ ನಮ್ಮ ಅನ್ನ ತಿನ್ನುತಿದ್ದಾಗ ಅವನೊಬ್ಬ ಹೆಚ್ಚಾಗುತಿರಲಿಲ್ಲ. ಅಲ್ಲ. ಮಾವನ ಮನೆಯಲ್ಲಿ ಕುಳಿತುಕೊಳ್ಳಲು ನಾಚಿಕೆಯಾಗುವುದೆಂದಿದ್ದರೆ, ಅವನಿಗೇನಾದರೂ ವ್ಯಾಪಾರಕ್ಕೆಳೆಯಬಹುದಿತ್ತು! ನಾನು ಹಣ ಕೊಡುತಿದ್ದೆ."

ಲಿಂಗಮ್ಮ ಆಗ "ಅಯ್ಯೋ, ನನ್ನ ಮಗು ಏನೆಲ್ಲ ಕಷ್ಟಗಳನ್ನನುಭವಿಸುತ್ತಿದೆಯೋ?" ಎಂದು ಗೋಳಿಟ್ಟಳು.

"ಅವಳನ್ನು ನಾಳೆಯೇ ಕರೆದು ತರುವ" ಎಂದರು ಸೆಟ್ಟರು.

"ನೀವೇ ಹೋಗುತ್ತೀರಾ?" ಎಂದು ರೈಗಳು ಸಂಕೋಚದಿಂದ ಕೇಳಿದರು.

ಸೆಟ್ಟರಿಗೆ ಆಗ ತಾನು ಹೋದರೆ ಅವಮಾನವೆಂದು ಹೊಳೆಯಿತು. ತಾನು ಹೋದರೆ ಪೂವಕ್ಕೆಯೊಡನೆ ಜಗಳವಾಗುವುದು ಖಂಡಿತವೆಂದು ಅವರು "ರೈಗಳೊಡನೆ ಬಾಬುವನ್ನು ಕಳಿಸಿದರಾಗದೇ?" ಎಂದು ಕೇಳಿದರು. ರೈಗಳು ಅದಕ್ಕೇನಡ್ಡಿಯೆಂದರು.

ಬಾಬುವೂ ಅಲ್ಲೇ ಸ್ವಲ್ಪ ದೂರದಲ್ಲಿ ಕುಳಿತು ಅವನ ತಾಯಿ ಸಂಕುವಿನೊಡನೆ ಏನೋ ಗೊಣಗುಟ್ಟುತ್ತಿದ್ದ. ಸೆಟ್ಟರು ಅವನನ್ನು ಕರೆದರು.

"ಬಾಬೂ, ನೀನು ನಾಳೆ ಬೆಳಗ್ಗೆ ಪೂವಕ್ಕೆಯಲ್ಲಿಗೆ ಹೋಗಿ, ಪಾರ್ವತಿಯನ್ನು ಕರೆದುಕೊಂಡು ಬರಲು ನಾನು ಹೇಳಿದ್ದೇನೆಂದು ಹೇಳಬೇಕು.

ಪೂವಕ್ಕೆ ಒಪ್ಪದಿದ್ದರೆ ಪಾರ್ವತಿಯನ್ನೇ ಹೊರಡಬೇಕೆಂದು ಹೇಳು" ಎನ್ನುತ್ತ ಸೆಟ್ಟರು ಸೊಂಟದಿಂದ ಒಂದು ರೂಪಾಯಿಯನ್ನು ತೆಗೆದು ಕೊಟ್ಟರು.

ಬಾಬು ಹಣವನ್ನು ತೆಗೆದುಕೊಂಡ. ಮತ್ತೆ ಮಾವನೊಡನೆ ಮಾತ ನಾಡುವ ಪದ್ಧತಿಯೇ ಅವನಿಗೆ ಗೊತ್ತಿಲ್ಲ.

ಆದರೆ ಅಂದು ಅವನು ಇಡೀ ರಾತ್ರೆ ನಿದ್ದೆ ಮಾಡಲಿಲ್ಲ. ಮಲಗಿದ್ದ ಲ್ಲಿಂದ ಕ್ಷಣಕ್ಷಣವೂ ಬೆಳಗಾಗುವುದನ್ನೇ ಕಾಯುತಿದ್ದನು.

## ಅಧ್ಯಾಯ ಹದಿನೈದು.

ಕೆಲದಿನಗಳ ಬಳಿಕ ಕೋಚಣ್ಣ ರೈಗಳು ಸಂಜೀವನಿಗೊಂದು ಕಾಗದ ಬರೆದರು. ಅದು ನಾರಾಯಣ ಸೆಟ್ಟರಿಗಾಗಲೀ ಪೂವಕ್ಕೆಗಾಗಲೀ ಗೊತ್ತಿರ ಲಿಲ್ಲ. ಅದರಲ್ಲಿ ದೇವಪ್ಪನು ಹುಚ್ಚು ಹಿಡಿದು ಮನೆಬಿಟ್ಟು ಊರಲ್ಲೆಲ್ಲ ತಿರು ಗಾಡುತಿದ್ದಾನೆಂದೂ ಆದುದರಿಂದ ಸಂಜೀವನು ಕೂಡಲೇ ಬರಬೇಕೆಂದೂ ಹೇಳಿದ್ದರು.

ಸಂಜೀವ ಅದನ್ನೋದಿ ರಾಮಪ್ಪಸೆಟ್ಟರಿಗೆ ಹೇಳಿದ. ಆಗ ಅವರು ಆ ಸುದ್ದಿ ಸತ್ಯವೋ ಸುಳ್ಳೋ ಎಂದು ತಿಳಿಯಲು ಊರಿನಲ್ಲಿದ್ದ ಅವರ ಭಾವ ನೆಂಟನಿಗೊಂದು ಕಾಗದ ಬರೆಸಿದರು. ಅವನ ಕಾಗದದಲ್ಲಿಯೂ ರೈಗಳು ಬರೆದಂತೆಯೇ ಇತ್ತು. ದೇವಪ್ಪನ ಕುರಿತಾದ ವರ್ಣನೆ ಮಾತ್ರ ತುಸು ಉದ್ದವಾಗಿತ್ತು.

"ಅವನಿಗೆ ಹೇಗೆ ಹುಚ್ಚು ಹಿಡಿಯಿತೆಂದು ಯಾರಿಗೂ ಗೊತ್ತಿಲ್ಲ. ಒಂದು ದಿನ ಬೆಳಿಗ್ಗೆ ಪಾಣೆ ಮಂಗಳೂರಿನಲ್ಲಿ ಬತ್ತಲೆಯಾಗಿ ತಿರುಗಾ ಡುತಿದ್ದನಂತೆ. ಅಲ್ಲಿ ಕೆಲವು ಹೆಂಗಸರನ್ನು ಓಡಿಸಿಕೊಂಡು ಹೋಗು ವಾಗ ಅಲ್ಲಿಯವರು ಅವನನ್ನು ಹಿಡಿದು ಕಟ್ಟಿಹಾಕಿ ಹೊಡೆದರಂತೆ. ಅದರಿಂದಾಗಿ ಅವನ ಒಂದು ಕೈಯ ಎಲುಬು ತುಂಡಾಗಿದೆ. ಪಾಣೆ ಮಂಗಳೂರು, ಜೋಡುಮಾರ್ಗ, ಮತ್ತು ಬಂಟವಾಳಗಳಲ್ಲಿ ಚಿಂದಿ ಅರಿವೆಯನ್ನು ಧರಿಸಿಕೊಂಡು ಎಂಜಲನ್ನ ಉಣ್ಣುತ್ತ ತಿರುಗಾಡುತಿದ್ದಾನೆ.

ಗಡ್ಡ ಮೀಸೆ ಉದ್ದುದ್ದ ಬೆಳೆದು ಮುಖ ವಿಕಾರವಾಗಿ ಕಾಣುತ್ತಿದೆ. ಮನೆಗೊಮ್ಮೆ ಬಂದವ ಪೂವಕ್ಕೆಗೆ ಹೊಡೆದನಂತೆ. ಆಮೇಲೆ ಅವನ ಹೆಂಡತಿಯ ಕಾಲಮೇಲೆ ಬಿದ್ದನಂತೆ. ತಲೆಯನ್ನು ಕಲ್ಲಿನಿಂದ ಹೊಡೆದುಕೊಂಡು ಬಾವಿಗೆ ಹಾರಲು ಓಡಿದನಂತೆ. ಪೂವಕ್ಕೆ ಶಂಭುಬಲ್ಯಾಯರಿಂದ ಮದ್ದು ಮಾಡಿಸಿದಳು. ಆದರೆ ಅವರ ಹಿಡಿತ ತಪ್ಪಿಸಿಯೂ ಅವನು ಓಡಿದ್ದಾನೆ. ಈಗ ಅವನಷ್ಟಕ್ಕೇ ' ನನ್ನನ್ನ ಕೊಲ್ಲುತ್ತಾರೆ. ಬೊಂಬಾಯಿಯಿಂದ ಜನ ಬರುತ್ತದೆ ' ಎಂದು ಏನೇನೋ ಹೇಳಿಕೊಳ್ಳುತಿದ್ದಾನೆ. ಅಲ್ಲದೆ ಅವನು ಕೆಲವರನ್ನು ಹೊಡೆದುದರಿಂದಾಗಿ ಪೋಲಿಷರು ಮೊನ್ನೆ ಕೈದು ಮಾಡಿದ್ದಾರೆ. ಕಲ್ಲೀಕೋಟೆಗೋ, ಮದರಾಸಿಗೋ ಹುಚ್ಚರಾಸ್ಪತ್ರೆಯಲ್ಲಿ ಸೇರಿಸಲು ಕಳಿಸುವರೆಂಬ ಸುದ್ದಿ ಇದೆ. ಎರಡು ಹೆಂಗಸರ ಮೇಲೆ ಬಲಾತ್ಕರಿಸಿದನಂತೆ........"

ರಾಮಪ್ಪಸೆಟ್ಟರಿಗೆ ಇದನ್ನು ಕೇಳಿ ಸ್ವಲ್ಪ ಸಂತೋಷವೇ ಆಯಿತೆನ್ನಬಹುದು.

" ನಾನು ಮೊದಲೇ ಹೇಳಿದ್ದೆನಲ್ಲ ? ನಾನೆಂದ ಹಾಗೇ ಆಯಿತು " ಎಂದು ಅವರು ಸಂಜೀವನನ್ನು ನೋಡಿ ನೆಗಾಡಿದರು.

ಸಂಜೀವನಿಗೆ ತುಂಬ ವ್ಯಸನವಾಗಿತ್ತು. ಅವನು ದೇವಪ್ಪನು ತನಗೆ ಮಾಡಿದ ತಪ್ಪುಗಳನ್ನು ಮರೆತಿರದಿದ್ದರೂ, ಈಗ ತಾಯಿಯ ಮೇಲೆ ಅವನಿಗೆ ಮರುಕ ಹುಟ್ಟಿತು. ಅವನಿಗೆ ಊರಿಗೆ ಹೊರಡಬೇಕೆಂದು ಮನಸ್ಸಾಗಿ ಸೆಟ್ಟರೊಡನೆ ಕೇಳಿದ. ಸೆಟ್ಟರೂ ಆದೀತೆನ್ನುತ್ತ ತಲೆಯಾಡಿಸಿ ಹೀಗೆಂದರು:

" ನೀನು ಹೋಗಿ ನೀರಿನಲ್ಲಿದ್ದ ಹೇನಿನ ಹಾಗೆ ವರ್ತಿಸಿ ಹಿಂದೆ ಬರಬಾರದು. ಈಗಲೇ ಆ ರೈ ನಿನ್ನ ತಾಯಿಗೆ ಹಿಂದಿನಿಂದ ಊದಲಿಕ್ಕೆ ಪ್ರಾರಂಭಿಸಿರಬಹುದು. ಹೆಂಗಸರ ಮನಸ್ಸು ನಿನಗೆ ಗೊತ್ತಿಲ್ಲ. ಯಾರಿಗೂ ದಾಕ್ಷಿಣ್ಯ ಮಾಡಬೇಡ. ಇದ್ದುದನ್ನೆಲ್ಲ ಪೂವು ಬೇರೆ ಯಾರಿಗೂ ಪರಾಧೀನ ಮಾಡದಂತೆ ಭದ್ರಪಡಿಸಿ, ಹಿಂತಿರುಗಿ ಬಾ. ಮತ್ತೆ ಊರಲ್ಲೇ ನಿಂತರೆ ನಿನಗೇನೂ ಪ್ರಯೋಜನವಿಲ್ಲ ಇಲ್ಲಿ ನೀನಿದ್ದರೆ ನನಗೂ ಸ್ವಲ್ಪ ಉಸಿರು ಬಿಡುವಷ್ಟು ಸಮಯ ಸಿಗುತ್ತದೆ " ಎಂದು

ಸಂಜೀವ ಈಗ ಒಳ್ಳೆ ' ತರಬೇತಿ ' ಹೊಂದಿದ್ದ. ಅವನು ಮರೆತು

ಹೋಗಿದ್ದ ಇಂಗ್ಲಿಷ್ ಈಗ ನೆನಪಾಗತೊಡಗಿತು. ಪ್ರತಿದಿನವೂ ರಾತ್ರೆ, ರಾತ್ರೆ ಶಾಲೆಗೆ ಹೋಗಿ ಕಲಿಯುತ್ತಿದ್ದ. 'ಟೈಮ್ಸ್' ನಲ್ಲಿದ್ದ ಸುದ್ದಿಗಳನ್ನೋದಲು ಈಗ ಅವನಿಗೆ ಬರುತಿತ್ತು. ದಿನ ನಿತ್ಯವೂ ಬೆಳಿಗ್ಗೆ ಗಡ್ಡ ತೆಗೆದು ಸ್ನಾನಮಾಡಿ ಪರಿಮಳದೆಣ್ಣೆ ಹಾಕಿ ತಲೆ ಬಾಚುತಿದ್ದ. ಅಷ್ಟರಲ್ಲೇ ಎರಡು ಜತೆ ಉಣ್ಣೆಯ ಪೇಂಟಗಳನ್ನು ಸೆಟ್ಟರು ಅವನಿಗೆ ಹೊಲಿಸಿದ್ದರು. ಶೇಖರನೂ ಈಗ ಅವನೊಡನೆ ಹೊರಗೆ ತಿರುಗಾಡ ಹೋಗಲು ಹಿಂದೆ ಮುಂದೆ ನೋಡುತಿದ್ದಿಲ್ಲ. ಮುಂಬಯಿ ನಗರವನ್ನು ಅವನು ಸುತ್ತಾಡಿ ನೋಡಬೇಕಾಗಿದ್ದ ವಿಷಯಗಳನ್ನೆಲ್ಲ ನೋಡಿಯಾಯಿತು ಅವನು ಬೆಳಿಗ್ಗೆ ಆರು ಗಂಟೆಗೆ ಸೆಟ್ಟರಲ್ಲಿಂದ ಹೊರಟು ಬೋರಿಬಂದರಿನ ಹೋಟೇಲಿಗೆ ಹೋಗಬೇಕು. ಅಲ್ಲಿ ಮುಂಡದಲ್ಲಿ ಕುಳಿತುಕೊಂಡು ಹಣ ತೆಗೆದುಕೊಳ್ಳುವುದು ಮತ್ತು ಆಳುಗಳ ಮೇಲ್ವಿಚಾರಣೆ ನಡೆಸುವುದು ಅವನ ಮುಖ್ಯ ಕೆಲಸ. ರೈಗಳು ಹಿಂದೆ ವ್ಯವಸ್ಥಾಪಕನಾಗಿದ್ದ ಅವರ ಸಂಬಂಧಿಕನನ್ನು ಮಾತುಂಗಕ್ಕೆ ವರ್ಗಮಾಡಿ ಅಲ್ಲಿದ್ದ ಸೋಮಪ್ಪನನ್ನು ಸಂಜೀವನ ಕೈಕೆಳಗೆ ನೇಮಿಸಿವರು. ಆದರೂ ವಾರಕ್ಕೆ ನಾಲ್ಕೈದು ಸಲವಾದರೂ ಅವರು ಎರಡೂ ಹೋಟೇಲುಗಳಿಗೂ ಸಂದರ್ಶನ ಮಾಡದಿಲ್ಲ. ಸಂಜೀವನಿಗೆ ಸಂಬಳದ ಕುರಿತಾಗಿ ಅವರು ಏನನ್ನೂ ಹೇಳದಿದ್ದರೂ ಅವನಿಗೆ ಬೇಕಾದಷ್ಟು ಹಣ ಖರ್ಚು ಮಾಡಬಹುದೆಂದು ಮೊದಲ ದಿನವೇ ಹೇಳಿದ್ದರು. ಸಂಜೀವನ ಕೆಲಸದ ಮೇಲೆ ಸೆಟ್ಟರಿಗೆ ತೃಪ್ತಿಯಾಗಿತ್ತು. ಅವನನ್ನು ಅವರು ಮನೆಯಲ್ಲಾಗಲೀ, ಹೊರಗಾಗಲೀ ಹೊಗಳದ ದಿನವಿಲ್ಲ. ಬೋರಿಬಂದರಿಗೆ ಬಂದೊಡನೆ ಅವರು ಸಂಜೀವನೊಡನೆ ಆ ದಿನದ 'ಟೈಮ್ಸ್' ಸುದ್ದಿಗಳನ್ನು ಓದಲು ಹೇಳುವರು. ಅದನ್ನೇ ಸ್ವಲ್ಪ ಹೊತ್ತು ಕೇಳುತ್ತ ಒಳಗಿಂದೊಳಗೇ ಸಂತೋಷಪಡುವರು. ಅವರಿಗೆ ಇಂಗ್ಲಿಷ್ ಬಲ್ಲ ಒಬ್ಬ ನೌಕರನನ್ನು ನೇಮಿಸಬೇಕೆಂಬ ಹಂಬಲ ಹಿಂದಿನಿಂದಲೂ ಇತ್ತು. ಆದರೆ ಈಗ ಸಂಬಂಧಿಕನೇ ಅವರಿಗೆ ದೊರಕಿದ್ದು ಅವರ ಹೆಗ್ಗಳಿಕೆಗೆ ಇನ್ನೂ ಒಂದು ಕಾರಣವಾಯಿತು. ಅದರೊಡನೆ ಸಂಜೀವನ ಆಡಳಿತೆಯಲ್ಲಿ ಹೋಟೇಲಿನ ಉತ್ಪತ್ತಿಯೂ ಹೆಚ್ಚಾಗುತ್ತ ಬಂತು. ಕೆಲಸದ ಆಳುಗಳಿಗೆ ಹೊಡೆಯದೆ, ಬಯ್ಯದೆಯೆ ಅವನು ಕೆಲಸ ಮಾಡಿಸುತಿದ್ದ. ಹೋಟೇಲಿನ ಸ್ವಚ್ಛತೆ ಮತ್ತು ಸಿಸ್ತುಗಳನ್ನು ನೋಡಿ ಗಿರಾಕಿಗಳು ಹೆಚ್ಚಿಗೆ ಬರಲಾರಂಭಿಸಿದ್ದರು.

ಸೆಟ್ಟರು ಒಮ್ಮೊಮ್ಮೆ ಊರಿನ ಗೆಳೆಯರೊಡನೆ ಹೇಳುವುದಿತ್ತು: "ನೋಡಿ ನನ್ನ ಅಳಿಯ ಆ ಸುಡುಗಾಡು ಹಳ್ಳಿಯಲ್ಲಿ ಕೊಳೆತು ಹೋಗುತಿದ್ದ. ಈಗ ನೋಡಿ ಎಷ್ಟು ಹುಶಾರಾಗಿದ್ದಾನೆಂದು. ಯಾವ ದೊರೆಯೊಡನೆಯೂ ಇಂಗ್ಲಿಷ್ ಮಾತನಾಡಲಿಕ್ಕೆ ಹೆದರುವುದಿಲ್ಲ. ಹಿಂದುಸ್ಥಾನಿಯನ್ನು ಈಗ ಸಾಧಾರಣ ಕಲಿತಿದ್ದಾನೆ. ಒಂದು ಪೈ ಕೂಡ ಸಾಲವಾಗಿ ಕೊಡುವುದಿಲ್ಲ. ಬರುವಾಗ ಕುರುಬರಂತಿದ್ದವ ಈಗ ಹೇಗೆ ಕಾಣುತಿದ್ದಾನೆ! ಈಗ ಬೇರೆಯವರಾದರೆ ನಾನು ತಿಂಗಳಿಗೆ ಇನ್ನೂರು ರೂಪಾಯಿ ಸಂಬಳ ಕೊಟ್ಟರೂ ಇಷ್ಟು ಪ್ರಾಮಾಣಿಕತೆಯಿಂದ ವರ್ತಿಸುತಿದ್ದಿಲ್ಲ. ಇವನು ತಾನಾಗಿ ಒಂದು ಪೈ ಕೂಡ ಖರ್ಚು ಮಾಡಲಾರ. ಅವನಿಗೆ ಸಿಗರೇಟು ಬೇಕಾದರೂ ನಾನೇ ಕಪಾಟಿನಿಂದ ಕೊಡಬೇಕು!" ಎಂದು.

ಸಂಜೀವನಿಗೆ ಈ ಜೀವನ ಹಿಡಿಸುತಿತ್ತು. ವಾರಕ್ಕೊಮ್ಮೆಯಾದರೂ ಅವನಿಗೆ ರಜೆ ಇರುತಿತ್ತು. ಅಂದು ಶೇಖರನೊಡನೆ ಚೆಂಡಾಟದ ಪಂದ್ಯಗಳನ್ನು ನೋಡಲಿಕ್ಕೆ ಹೋಗುವನು, ಇಲ್ಲವೇ ಚಲಚ್ಚಿತ್ರಗಳಿಗೆ ಹೋಗುವನು. ಒಮ್ಮೊಮ್ಮೆ ಸೆಟ್ಟರ ಮಗಳು ಪ್ರೇಮಕುಮಾರಿಯೂ ಅವನೊಡನೆ ತಿರುಗಾಡಲು ಚೌಪಾಟಿ ಸಮುದ್ರ ತೀರಕ್ಕೆ ಬರುವುದಿತ್ತು. ಅಲ್ಲಿ ಕತ್ತಲಾಗುವ ತನಕ ಮಳಲಿನಲ್ಲಿ ಕುಳಿತುಕೊಂಡು ನೆಲಕಡಲೆಯನ್ನೋ ಹುರಿಕಡಲೆಯನ್ನೋ ಜಗಿಯುತ್ತ ವಿನೋದವಾಡುವರು. ಇನ್ನೊಮ್ಮೆ ಶಿವಾಜಿ ಪಾರ್ಕಿನಲ್ಲೇ ಇಡೀ ಸಂಜೆಯನ್ನು ಕಳೆಯುವುದಿತ್ತು.

ಸಂಜೀವನಿಗೆ ಈಗ ಮನೆಯಲ್ಲಿ ಸಲುಗೆ ಬೆಳೆದಿತ್ತು. ರಾಮಪ್ಪಸೆಟ್ಟರ ಸಣ್ಣ ಮಗಳು ಲಲಿತಳಿಗೆ ಸಂಜೀವನಿಲ್ಲದೆ ಆಗದು. ಅವಳಿಗೆ ಅವನು ಪ್ರತಿದಿನವೂ ಏನಾದರೂ ಚಿಕ್ಕ ಆಟದ ಸಾಮಾನು ತಂದು ಕೊಡದಿಲ್ಲ. ಪ್ರೇಮಕುಮಾರಿ ಅವನೊಡನೆ 'ಕೇರಂ' ಆಡುತಿದ್ದಳು. ಆ ಆಟದಲ್ಲಿ ಅವನು ಶೇಖರನನ್ನೂ ಅವಳನ್ನೂ ಸೋಲಿಸಿ ಬಿಡುತಿದ್ದ. ಅವಳಿಗೆ ಕನ್ನಡ ಓದಲು ಬಾರದ್ದರಿಂದ ಅವಳಿಗೆ ಕನ್ನಡ ಬರಹವನ್ನೂ ಕಲಿಸಿ ಕೊಡುತಿದ್ದ. ಸಂಜೀವ ಬಂದಂದಿನಿಂದ ಶೇಖರ ಮನೆಯಲ್ಲಿಲ್ಲದ ರಾತ್ರಿಯಿಲ್ಲ ಎಂದು ಸೆಟ್ಟರ ಹೆಂಡತಿ ಸಂತೋಷದಿಂದ ಹೇಳುತಿದ್ದರು. ಶೇಖರನಿಗೆ ಈಗ ಸಂಜೀವ ಪಾಠಗಳನ್ನು ಹೇಳಿಕೊಡುವುದೂ ಇತ್ತು. ಬದಲಾಗಿ ಶೇಖರನು ಸಂಜೀವನಿಗೆ ಹಿಂದು

ಸ್ಥಾನಿ ಕಲಿಸುತಿದ್ದ. ಸೆಟ್ಟರಿಗಂತೂ ಸಂಜೀವನ ಸೌಜನ್ಯವನ್ನು ಹೇಳಿದಷ್ಟೂ ಸಾಕಾಗುತ್ತಿರಲಿಲ್ಲ.

ಸಂಜೀವನಿಗೂ ಈಗ ಅವನ ಹಿಂದಿನ ಕಷ್ಟಗಳೆಲ್ಲ ತಾತ್ಕಾಲಿಕವಾಗಿ ಮರೆತು ಹೋಗುತಿತ್ತು. ಅದೂ ಸೇಖರನೊಡನೆ ತಿರುಗಾಡ ಹೋಗುವಾಗ ಇಲ್ಲವೇ ಆಡುವಾಗ ಅವನು ಹಿಂದಿನ ಸಾಲೆಯ ದಿನಗಳ ಹುಡುಗನೇ ಆಗುತಿದ್ದ. ಅವನೊಡನೆ ಬೊಬ್ಬೆ ಹೊಡೆಯುತಿದ್ದ, ನೆಗಾಡುತಿದ್ದ, ಸಿನೇಮಾ ಪದ್ಯಗಳನ್ನು ಹಾಡುತಿದ್ದ. ಅವನ ಕಂಠವೂ ಚೆಲುವಾಗಿತ್ತು. ಪ್ರೇಮ ಕುಮಾರಿ ಅವನನ್ನು ಆಗಾಗ ಪದ್ಯಗಳನ್ನು ಹಾಡಲು ಒತ್ತಾಯಪಡಿಸುತಿದ್ದಳು. ಸೈಗಲನ " ದೋ ನಯನಾ ಮತವಾರೇ", " ರುಮುಝುಮ ರುಮುಝುಮ" ಪಂಕಜ ಮಲ್ಲಿಕನ " ನಾಕರ ಇತನ ಪ್ಯಾರೆ ಪಂಛಿ", ಅಶಿತ ಬಾರಸನ "ಅಬ್ ಆಯಿ ಬಸಂತ ಬಹಾರ್ "—ಈ ಪದ್ಯಗಳನ್ನೆಲ್ಲ ಸಂಜೀವ ಸುಮಧುರವಾಗಿ ಹಾಡುತಿದ್ದ. ಪ್ರೇಮಕುಮಾರಿಗೆ ಅವನ ಬಾಯಿಯಿಂದ "ಬೀನಾ, ಮಧುರ ಮಧುರ ಕಛು ಬೋಲ್ " ಪದ್ಯವನ್ನಂತೂ ದಿನಕ್ಕೊಮ್ಮೆಯಾದರೂ ಹಾಡಿಸಿ ಕೇಳದೆ ನಿದ್ದೆ ಹತ್ತದು. ಇವೆಲ್ಲವನ್ನೂ ಅವನು ಚಿತ್ರಗಳನ್ನು ನೋಡಿಯೇ ಕಲಿತುದಲ್ಲ. ಹೆಚ್ಚಿನವನ್ನು ಬೋರಿಬಂದರಿನ ಹೋಟೇಲಿನ ರೇಡಿಯೋ ದಲ್ಲಿ ಅನೇಕ ಬಾರಿ ಕೇಳಿ ಕಂಠಪಾಠ ಮಾಡಿಕೊಂಡಿದ್ದ.

ಹೀಗೆ ಸಂಜೀವನಿಗೆ ಮುಂಬಯಿಯಲ್ಲಿ ಕಳೆದ ಎರಡು ಮೂರು ತಿಂಗಳುಗಳು ಒಂದು ನೂತನ ಜೀವನದ—ನೂತನ ಯೌವ್ವನದ, ಪೀಠಿಕೆಯಾದುವು. ಪ್ರೇಮಕುಮಾರಿಯನ್ನು ಮೊದಲ ದಿನ ಕಂಡಾಕ್ಷಣವೇ ಅವನು ಬೆರಗಾಗಿ ಹೋಗಿದ್ದ. ಅವಳು ಪಾರ್ವತಿಗಿಂತಲೂ ಚೆಲುವಿನಲ್ಲಿ ಒಂದು ಬಣ್ಣ ಮೇಲೆಂದು ಅವನು ಆಗಲೇ ಎಣಿಸಿದ್ದ ಈಗ ಅವಳ ಸ್ನೇಹಮಯವಾದ ಸೌಜನ್ಯ. ಅವನಿಗೆ ಹೊಸ ಚೈತನ್ಯವನ್ನು ಕೊಡುತಿತ್ತು. ಅವಳೊಡನೆ ಸಮಯ ಕಳೆಯುವುದೆಂದರೆ ಅವನಿಗೆ ಅದೊಂದು ದೊಡ್ಡ ಕನಸಿನಂತೆ. ಸಮಯ ಹೋಗುವುದೇ ಅವನಿಗೆ ತಿಳಿಯದು. ಅವಳಿಗೂ ಹಾಗೆಯೇ. " ಭಾವ " ನೆಂದರೆ ಆಯಿತು. ಮತ್ತೆ ಊಟದ ಗೊಡವೆ ಕೂಡಾ ಇಲ್ಲ.

ಇಂಥ ಪರಿಸ್ಥಿತಿಯಲ್ಲಿ ಸಂಜೀವನಿಗೆ ಊರಿಗೆ ಹೋಗುವುದೆಂದರೆ ದೊಡ್ಡ ಸಮಸ್ಯೆಯಾಯಿತು. ತನಗೆ ಸ್ವಲ್ಪ ಐಶ್ವರ್ಯದ ಪ್ರಯೋಜನ ಸಿಕ್ಕೀತೆಂಬ

ಆಸೆಯಿರದಿರುತಿದ್ದರೆ ಅವನು ಬಹುಶಃ ಊರಿಗೆ ಹೋಗುತ್ತಲೇ ಇರಲಿಲ್ಲ. ತಾಯಿಯ, ಅಣ್ಣನ ಮತ್ತು ಹೆಂಡತಿಯ ಗೊಡವೆಗಳನ್ನು ಅವನು ಎಂದೋ ಬಿಟ್ಟಿದ್ದ. ಈಗ ಹೋಗುವುದು ತೀರ ವ್ಯವಹಾರಿಕ ದೃಷ್ಟಿಯಿಂದ ಮಾತ್ರ.

ಅವನು ಊರಿಗೆ ಹೊರಡುವ ದಿನ ಬೆಳಿಗ್ಗೆ ಸೆಟ್ಟರೇ ಬೋರಿಬಂದರ್ ಹೋಟೇಲಿನಲ್ಲಿ ಕುಳಿತುಕೊಂಡಿದ್ದರು. ಅವನಿಗೆ ತಾತ್ಕಾಲಿಕವಾಗಿ ಬೇಕಾದ ಅಂಗಿ ವಸ್ತ್ರಗಳನ್ನೆಲ್ಲ ಒಂದು ಹೊಸ ಪೆಟ್ಟಿಗೆಯಲ್ಲಿ ಹಾಕಿ ಒಂದು ಚಿಕ್ಕ ಹಾಸಿಗೆಯನ್ನು ಕಟ್ಟಿ ಮನೆಯಲ್ಲಿ ಅವರೇ ಇಟ್ಟಿದ್ದರು. ರೈಲು ಹೊರಡುವುದು ರಾತ್ರಿಗೆ. ಶೇಖರ ಮತ್ತು ಸಂಜೀವರಿಬ್ಬರೂ ಬೋರಿಬಂದರಿನ ನಿಲ್ದಾಣಕ್ಕೆ ಹೋಗಿ ಟಿಕೇಟು ಪಡಕೊಂಡರು.

" ಇದು ಸೇಕೆಂಡ್ ಕ್ಲಾಸ್ ಟಿಕೇಟು ಭಾವ " ಶೇಖರನೆಂದ. "ನಿಮಗೆ ಊರಿಗೆ ಹೋಗುವಾಗ ಏನೂ ಕಷ್ಟವಿಲ್ಲ. ಯಾರಿಗೂ ಸ್ಥಳ ಬಿಡಬೇಡಿ ಕಾಲು ಚಾಚಿ ಮಲಗಬಹುದು. "

ಸಂಜೀವ ನಸುನಕ್ಕ.

ಅಷ್ಟರೊಳಗೆ ಕೋವಿ ಗುಂಡುಗಳ ಸದ್ದು ಕೇಳಿತು. ಜನರು ಅತ್ತಿತ್ತ ಓಡಾಡತೊಡಗಿದರು. ಸಂಜೀವ ಶೇಖರನನ್ನು ಸ್ವಲ್ಪ ದೂರ ಕರೆದುಕೊಂಡು ಹೋಗಿ ಒಂದು ಇರಾಣಿ ಹೋಟೇಲಿನಲ್ಲಿ ಚಹ ಕುಡಿಸಿದ. ಜನರ ಬಿರುಸಿನ ಸಂಚಾರ ನಿಲ್ಲಲಿಲ್ಲ. ಟ್ರಾಮುಗಳೆಲ್ಲ ನಿಂತುವು. ಬಸ್ಸುಗಳು ನಿಲ್ದಾಣಗಳನ್ನು ಬಿಡಲಿಲ್ಲ. ಏನೋ ಗಲಾಟೆಯಾಗಿರಬೇಕೆಂದು ಸಂಜೀವನಿಗೆ ತೋರಿತು.

" ಸುಭಾಸ್ ಬೋಸ್ ಸೈನ್ಯದವರ ಗಲಾಟೆಯು ? " ಶೇಖರ ಆವನ ಷ್ಟಕ್ಕೆ ಹೇಳುತಿದ್ದ: " ಕೆಲವು ದಿನಗಳಿಂದ ಅವರನ್ನು ಬಿಟ್ಟುಬಿಡಬೇಕೆಂದು ಹೋರಾಟ ನಡೆಯುತ್ತಿದೆ. "

" ಅವರು ದೆಹಲಿಯ ಕೆಂಪು ಕೋಟೆಯೊಳಗೆ ಇದ್ದಾರೆ " ಸಂಜೀವನೆಂದ.

ಜನಸಂದಣೆಯನ್ನು ದೂಡಿಕೊಂಡು ಅವರಿಬ್ಬರೂ ಪಾರ್ಸಿ ಬಜಾರು ದಾಟಿದರು. ಎಲ್ಲ ಕಡೆಗಳಲ್ಲೂ ಗುಂಡಿನ ಸದ್ದು ಕೇಳಬರುತಿತ್ತು. ದೂರ

ದಿಂದ ಕಾಣುತಿದ್ದ ಮುಂಬಯಿಯ ಪ್ರಮುಖ ಬಂದರವಾದ 'ಬಲ್ಲಾರ್ಡ ಪಯರ್' ನಲ್ಲಿ ಹೊಗೆಯ ಮಂಜು ಹಬ್ಬಿತ್ತು.

"ಇದೇನು, ಅಲ್ಲಿ ಏನು ಕಾಣುತ್ತಿರುವುದು ?" ಶೇಖರ ಬೆರಳು ತೋರಿಸುತ್ತ ಹೇಳಿದ: "ಸೈನಿಕರೆಲ್ಲ ಎಲ್ಲಿಗೆ ಓಡುತ್ತಿರುವುದು ? ನಾವು ಇಲ್ಲಿಂದ ಹೋಗಿಬಿಡೋಣ."

"ನಿಲ್ಲು ನಿಲ್ಲು. ಅಲ್ಲೇಕೆ ಆ ಹಡಗುಗಳು ಗುಂಡು ಬಿಡುತ್ತವೆ? ಏನೋ ವಿಪರೀತವಾಗಿದೆ" ಎಂದು ಸಂಜೀವ ಹೇಳಿದ.

ಶೇಖರ ಅಷ್ಟರಲ್ಲಿ ಗಾಂಧಿ–ನೆಹರುಗಳ ವಿಷಯ ಹೇಳತೊಡಗಿದ. ಮೂರು-ನಾಲ್ಕು ವರುಷಗಳ ಹಿಂದೆ ಬಹಳ ಗಲಾಟೆ ನಡೆದಿತ್ತಂತೆ. ಪೋಲೀಸರು ಗಾಂಧಿ ಟೊಪ್ಪಿಗೆ ಇಟ್ಟವರನ್ನೆಲ್ಲ ಗುಂಡಿಕ್ಕಿ ಕೊಲ್ಲುತಿದ್ದರಂತೆ. ಸಿಕ್ಕ ಸಿಕ್ಕವರಿಗೆ ಲಾಠಿಯಿಂದ ಹೊಡೆಯುತಿದ್ದರಂತೆ. ಶೇಖರನ ಸಹಪಾಠಿ ಅಮರ್ ಲಾಲನ ತಂದೆಯನ್ನು ಕೂಡಾ ಜೈಲಿಗೊಯ್ದು ಅವರ ಮನೆಯನ್ನು ಜಪ್ತಿ ನಡೆಸಿ ಅಮರ್‌ಲಾಲನಿಗೆ ಚಡಿ ಕೊಟ್ಟಿದ್ದರಂತೆ. ಆಗ ರಸ್ತೆಗಳಲ್ಲಿ ನಡೆಯಲೇ ಸಾಧ್ಯವಿದ್ದಿಲ್ಲವಂತೆ. ಟ್ರಾಮು, ಬಸ್ಸುಗಳ ಅಡಿಯಲ್ಲೇ ಬಾಂಬುಗಳು ಒಡೆಯುತಿದ್ದವಂತೆ ಒಬ್ಬ ಸೈನಿಕನ ಮೇಲೆ ಶೇಖರನೂ ಒಂದು ಸೋಡದ ಬಾಟಲಿಯನ್ನು ಎಸೆದಿದ್ದನಂತೆ. ಸೈನಿಕನ ತಲೆಯ ಮೇಲೆ ಆ ಬಾಟಲಿ ಬಿದ್ದು ಒಡೆದು ಅವನ ಮೈ ಕೈಗಳಿಗೆಲ್ಲ ಗಾಯವಾಯಿತಂತೆ. ಆಗ ಶೇಖರನು ಓಡಿಯೋಡಿ ಒಂದು ಮನೆಯ ಪಾಯಖಾನೆಯಲ್ಲಿ ಅಡಗಿ ಕುಳಿತುಕೊಂಡನಂತೆ.

"ನನಗೆ ಜೀವ ಹೋದಂತಾಯ್ತು ಭಾವ" ಶೇಖರ ನಡಗುತಿದ್ದ. ಎಲ್ಲಾ ಕಡೆಗಳಲ್ಲೂ ಸೈನಿಕರ ಬೂಟ್ಸಿನ ಸಪ್ಪಳ ಕೇಳುತಿತ್ತು. ಒಬ್ಬ ನಾನಿದ್ದ ಪಾಯಖಾನೆಯ ಹತ್ತಿರ ಬಂದು ಬಾಗಿಲು ತಟ್ಟಿ ಹಿಂದೆ ಹೋದ. ನಾನು ಮನೆ ಸೇರುವಾಗ ಕತ್ತಲಾಗಿತ್ತು. ತಂದೆ ಮತ್ತು ತಾಯಿ ನಾನು ಬಾರದಿದ್ದುದಕ್ಕೆ ಅಳುತಿದ್ದರು."

ಶೇಖರ ಹೀಗೆ ಹೇಳುತಿದ್ದಾಗ "ಮಹಾತ್ಮಾ ಗಾಂಧೀಕಿ ಜೈ", "ಇಂಕ್ವಿಲಾಬ್ ಜಿಂದಾಬಾದ್", "ನೇತಾಜಿ ಜಿಂದಾಬಾದ್" ಇತ್ಯಾದಿ ಘೋಷಗಳು ಗುಂಡುಗಳ ಶಬ್ದಗಳನ್ನು ಸೀಳಿ ಕೇಳುತಿದ್ದುವು. ಸಂಜೀವ

ಇನ್ನು ಮುಂದೆ ಮುಂದೆ ಹೋಗುತಿದ್ದ. ಶೇಖರ ಮಾರ್ಗದ ಬದಿಯಿಂದ ಗೋಡೆಗೆ ತಾಗಿಕೊಂಡು ಮೆಲ್ಲನೆ ಅವನನ್ನು ಹಿಂಬಾಲಿಸುತಿದ್ದ.

ಸಂಜೀವನಾಗ ಒಂದು ಹಡಗದ ಕೂವೆ ಮರಕ್ಕೆ ಬೊಟ್ಟು ತೋರಿಸುತ್ತ ಶೇಖರನೊಡನೆ "ಅದೋ ಅದು ಯಾವ ಪತಾಕೆ? ಗಾಂಧಿಯದಲ್ಲವೆ? ಅದರ ಒಟ್ಟಿಗೆ ಕಾಣುವ ಆ ಇನ್ನೆರಡು ಪತಾಕೆಗಳು ಯಾವುವು?" ಎಂದ.

ಶೇಖರ ಸ್ವಲ್ಪ ಮುಂದೆ ಹೋಗಿ ಪರಿಶೀಲಿಸುತಿದ್ದಾಗಲೇ ಒಂದು ಗುಂಡು ಅವನ ಹೆಗಲ ಬದಿಯಿಂದ ಹಾರಿ ಹೋಯಿತು. ಕ್ಷಣಕಾಲ ಅವನು ಸ್ತಬ್ಧನಾದ.

ಮರುಗಳಿಗೆಯಲ್ಲಿ "ಭಾವ ಹೌದು ಅದು ಗಾಂಧಿಯ ಪತಾಕೆ, ಅದ ರೊಟ್ಟಿಗಿರುವುದು ಜಿನ್ನನದ್ದು. ಮತ್ತೊಂದು ಕೆಂಪು" ಎನ್ನುತ್ತ ಹಿಂದೆ ನೋಡುತ್ತಾನೆ. ಸಂಜೀವ ಮಾರ್ಗದ ನಡುವೆ ರಕ್ತದ ಹೊನಲಲ್ಲಿ ಬಿದ್ದಿದ್ದಾನೆ!

ಪಠಾಣನೊಬ್ಬ ಸಂಜೀವನ ಅಂಗಿಯ ಜೇಬನ್ನು ಕತ್ತರಿಸುತಿದ್ದ.

ಶೇಖರನು ಸಂಜೀವನನ್ನು ಕಂಡುದು ಅದು ಕೊನೆಯ ಬಾರಿ.

ಸಿಡಿಗುಂಡುಗಳು ಇನ್ನೂ ಅವನಿಗೆ ಕೇಳುತಿದ್ದುವು.

## ಅಧ್ಯಾಯ ಹದಿನಾರು.

ನಾರಾಯಣಸೆಟ್ಟರು ಗದ್ದೆಯ ಕೆಲಸದ ಮೇಲ್ವಿಚಾರಣೆಗೆ ಹೋದವರಿಗೆ ಹೊಗೆಸೊಪ್ಪನ್ನು ಮನೆಯಲ್ಲಿಯೇ ಬಿಟ್ಟು ಬಂದುದರ ನೆನಪಾಯಿತು. ಹೊಗೆ ಸೊಪ್ಪಿಲ್ಲದೆ ಅವರಿಗೆ ವೀಳ್ಯ ತಿನ್ನಲಾಗದು. ಅದು ಬಹಳ ಹಿಂದಿನಿಂದ ಬೆಳೆದು ಬಂದ ಅಭ್ಯಾಸ. ಹಾಗೆಯೇ ಸೆಟ್ಟರು "ಈಗ ಬರುತ್ತೇನೆ ಸರಿ ಯಾಗಿ ಕೆಲಸ ಮಾಡಿ" ಎಂದು ಮನೆಯ ಕಡೆಗೆ ಹೊರಟರು.

ಕೆಲಸಗಾರರಿಗೆ ಒಮ್ಮೆ ಪ್ರಾಣ ಬಂದಂತಾಯಿತು. ಅವರು ಸುಗ್ಗಿ ಬೆಳೆಗೆ ಗೊಬ್ಬರ ಹೊರುತಿದ್ದರು. ಕೆಲವರು ಉಳುತಿದ್ದರು. ಸೆಟ್ಟರಿದ್ದರೆ ಅವರಿಗೆ ಮಾತನಾಡಲುಕೂಡಾ ಸಾಧ್ಯವಿಲ್ಲ ಮತ್ತೆ ನಿಲ್ಲುವುದಾಗಲೀ ಕುಳಿತು

ಕೊಳ್ಳುವುದಾಗಲೀ ಸೆಟ್ಟರೆದುರು ಆಗದು. ಅವರೇ ಸ್ವತಃ ಗದ್ದೆಗಿಳಿದು ಕೆಲಸ ಗಾರರಿಗೆ ಸಿಕ್ಕಾಬಟ್ಟೆ ಬಯ್ಯುತ್ತಿದ್ದರು. ಬಾಬು ಅವರ ಮನೆಯ ದೊಡ್ಡ ಕೋಣಗಳನ್ನು ಉಳುತಿದ್ದ. ಸೆಟ್ಟರು ಹೋದುದನ್ನು ಕಂಡು ಅವರೆಲ್ಲ ಒಟ್ಟು ಸೇರಿ ತಮ್ಮ ತಮ್ಮ ವಸ್ತ್ರಗಳ ಅಂಚಿನಲ್ಲಿ ಕಟ್ಟಿದ್ದ ವೀಳ್ಯದೆಲೆಯ ಗಂಟು ಗಳನ್ನು ಬಿಚ್ಚಿ, ಸಾವಕಾಶವಾಗಿ ಸುಣ್ಣವನ್ನು ಎಲೆಗಳಿಗೆ ಒರಸುತ್ತ ಅವನ್ನು ಒಂವೊಂದಾಗಿ ಮಡಚಿ ಜಗಿಯತೊಡಗಿದರು.

"ನನ್ನ ಹೊಗೆಸೊಪ್ಪು ಏನೂ ಒಳ್ಳೆಯ:ದಿಲ್ಲ ಕರಿಯಣ್ಣ." ಅಂಗರ ನೆಂದ "ನಿನ್ನ ಹೊಗೆಸೊಪ್ಪು ನೋಡೋಣ."

"ನಾನು ಈಸಲ ಕಾದ್ರಿ ಬ್ಯಾರಿಯ ಅಂಗಡಿಯಿಂದ ತಂದುದು ಏನೂ ಒಳ್ಳೆಯದಿಲ್ಲ. ನೀನೂ ಅಲ್ಲಿಂದಲೇ ತಂದುದಲ್ಲ ?" ಕರಿಯ ಹೇಳಿದ.

"ಓಹೋ ಹಾಗೋ ? ನಾನು ಯಾವಾಗಲೂ ಬಂಟ್ವಾಳದ ಬಾಳಿ ಗರ ಅಂಗಡಿಯಿಂದಲೇ ತರುವವ. ಈ ಸಲ ಮಗುವಿಗೆ ಸೌಖ್ಯವಿಲ್ಲದ್ದರಿಂದ ಪೇಟೆಗೆ ಹೋಗಲಾಗದೆ ಮೊನ್ನೆ ನಮ್ಮ ವಾಸು ಪೈಯಲ್ಲಿಂದ ತರಿಸಿದೆ. ಈ ಸೊಪ್ಪು ಹಟ್ಟಿಗೆ ಹಾಕಲಿಕ್ಕಾದೀತಷ್ಟೆ."

"ಸೊಪ್ಪು ತಿಂದರೆ ಧನಿಯುಗಳದ್ದಾಗಬೇಕು. ಒಂದು ಚೂರು ತಿಂದರೆ ಝುಂ ಎಂದು ನೆತ್ತಿಗೇರುತ್ತದೆ. ನಾನೊಮ್ಮೆ ತಿಂದು ತಲೆ ತಿರುಗಿ ವಾಂತಿ ಮಾಡಿದ್ದೆ."

ಅಂಗರ ತಲೆಯಲ್ಲಾಡಿಸಿದ: "ಅದಕ್ಕೆ ಸೇರಿಗೆ ಮೂರೂವರೆ ರೂಪಾ ಯಿಯಂತೆ. ಕುಣಿಯ ಸೊಪ್ಪಂತೆ. ಅದರಲ್ಲಿ ಹೌಗೆ ಒಂದಿಷ್ಟೂ ಇಲ್ಲ. ಎಲ್ಲ ಇಲಿಯ ಬಾಲದ ಹಾಗೆ ಎಸಳುಗಳು........" ಎನ್ನುವಾಗ ನಾಗು ಗೊಬ್ಬ ರದ ಕುಕ್ಕೆಯನ್ನು ತಲೆಯಲ್ಲಿಟ್ಟುಕೊಂಡು ವೈಯ್ಯಾರದಿಂದ "ನನಗಿಲ್ಲವೇ, ಅಂಗರಣ್ಣ ?" ಎಂದಳು.

"ನಿನಗಿಲ್ಲದೇನು ? ಏನಾದರೂ ನಾಯಿ ತಿಂದಿದೆಯೇ ?" ಕರಿಯ ನೆಂದ.

"ಸಾಕು ನಿನ್ನ ತಮಾಷೆ" ನಾಗು ಹೇಳಿದಳು. "ಕೊಡುವುದಾದರೆ ಕೊಡು ಅಂಗರಣ್ಣ."

"ನಿನ್ನ ಹೊಟ್ಟೆಯೇನು ದೊಡ್ಡದಾಗಿದೆ ? ಗಂಜೀನೀರಿನ ಪ್ರಭಾವವೆ ?

ಅಲ್ಲ, ಧನಿಗಳೇನಾದರೂ............" ಎಂದು ಕರಿಯ ಹೇಳುತ್ತಿದ್ದಂತೆಯೇ ನಾಗು ಅವನ ದವಡೆಗೊಂದಿಷ್ಟು ಸೆಗಣಿಯನ್ನು ಸವರಿದಳು.

ನಾಗುವಿನ ಮತ್ತು ನಾರಾಯಣಸೆಟ್ಟರೊಳಗಿನ ಸಂಬಂಧ ಜನಜನಿತ ಸಂಗತಿ. ಅವಳ ಗಂಡ ತಿಮ್ಮಪ್ಪನನ್ನು ಸೆಟ್ಟರೇ ಹಲವು ವರುಷಗಳ ಹಿಂದೆ ಕೊಲ್ಲಿಸಿದ್ದರೆಂದೂ ಕೆಲವರನ್ನುತಿದ್ದರು. ಆದರೂ ನಾಗು, ಸೆಟ್ಟರ ಜಾಗೆಯನ್ನು ಬಿಡಲಿಲ್ಲ. ಅಲ್ಲಲ್ಲಿ ಬೇಸಾಯದ ಕೆಲಸಕ್ಕೆ ಹೋಗುತಿದ್ದಳು. ಈಗ ನಡುಹರೆಯು ದಾಟಿದ್ದರೂ ಅವಳ ದೇಹದ ಮಾಟ ಹಳ್ಳಿಯವರನ್ನೆಲ್ಲ ಮುಗ್ಧಗೊಳಿಸುತಿತ್ತು. ಅವಳ ಜವ್ವನದ ದಿನಗಳಲ್ಲಿ ಅವಳನ್ನು ಬಯಸಿದ ಆಢ್ಯ ಮಹನೀಯರುಗಳಿಗೆ ಲೆಕ್ಕವೇ ಇಲ್ಲವಂತೆ! ಕಾದ್ರಿ ಬ್ಯಾರಿ ಅವಳಿಂದಾಗಿ ಎಲ್ಲವನ್ನೂ ಕಳಕೊಂಡು ಒಮ್ಮೆ ಓಡಿಹೋಗಿದ್ದನಂತೆ. ಜೀನಸಿನ ಭಂಡಸಾಲೆಯ ವೆಂಕಟೇಶ ಶಾನುಭಾಗರು ಅವಳ ಸಂಬಂಧದಿಂದಾಗಿ ಎರಡನೆಯ ಸಲ ದಿವಾಳಿ ತೆಗೆದರಂತೆ. ರಾಮ ಉಪಾಧ್ಯಾಯರು ಅವಳೊಡನೆ ಸಂಪರ್ಕವನ್ನಿಟ್ಟುಕೊಂಡಿದ್ದಾರೆಂದು ಅವರ ಹೆಂಡತಿ ಅವರಲ್ಲಿಂದ ಓಡಿಹೋದುದಲ್ಲದೆ ಸಮಾಜದವರು ಅವರ ಮೇಲೆ ಬಹಿಷ್ಕಾರ ಕೂಡ ಹಾಕಿದ್ದರು. ಜಿನ್ನಪ್ಪ ಬುಣ್ಣಾಳರು ಅವಳಿಂದ ಅಂಟಿಸಿಕೊಂಡ ಮೇಹರೋಗದಲ್ಲೇ ನರಳಿ ಎಷ್ಟೋ ಮದ್ದು ಮಾಡಿಸಿ ಗುಣವಾಗದೆ ಕೊನೆಗೆ ಮರಣಪಟ್ಟಿದ್ದರಂತೆ. ಅವಳಿಗಾಗಿ ತುಕ್ರ ಪೂಜಾರಿ ಮೂರು ಜನರನ್ನು ಒಂದೇ ರಾತ್ರಿ ಕೊಂದಿದ್ದನಂತೆ.

ಸೆಟ್ಟರಿಂದ ಅವಳಿಗೆ ಸಿಕ್ಕಿದುದೆಂದರೆ ಉಳಕೊಳ್ಳಲಿಕ್ಕೆ ಒಂದು ಮನೆ ಮಾತ್ರ.

ಇವರೆಲ್ಲ ಹೀಗೆ ನಿಂತು ಮಾತಾಡುವುದನ್ನು ನೋಡಿ ಬಾಬುವಿಗೆ ಸಹಿಸಲಾಗಲಿಲ್ಲ. ಕೊನೆಗೆ "ಕೆಲಸ ಮಾಡಿ, ಕೆಲಸ ಮಾಡಿ. ಈಗ ಬರುತ್ತಾರೆ" ಎಂದು ಬೊಬ್ಬೆ ಹಾಕಿದ.

ಮಾತನಾಡುವ ಶಬ್ದ ಕಡಿಮೆಯಾಯಿತು. ಒಬ್ಬೊಬ್ಬರೇ ಮೆಲ್ಲನೆ ಒಳದನಿಯಲ್ಲಿ ಮಾತನಾಡುತ್ತ ಚಲಿಸತೊಡಗಿದರು.

"ಹ್ಹ! ಈ ಹುಡುಗನ ದರ್ಪ ನೋಡಿ! ಅವನ ತಾಯಿ ಅಲ್ಲಿ ಕತ್ತೆಯಂತೆ ದುಡಿಯುತ್ತಾಳೆ. ಒಂದಿಷ್ಟೂ ಇವನಿಗೆ ಹುಳಿ ಬೇಕಲ್ಲ?" ಅಂಗರ ಹೇಳಿದ.

"ಅವನಿಗೆ ಈಗ ತಲೆ ಸರಿಯಿಲ್ಲ. ಧನಿಗಳ ಮಗಳು ಈಗ ಮನೆಯಲ್ಲಿದ್ದಾಳಲ್ಲ?........" ನಾಗು ಕಿಲಕಿಲನೆ ಕಣ್ಣು ತಿರುಗಿಸುತ್ತ ಹೇಳಿದಳು.

"ಹ್ಞಂ. ಹಾಗೇನಾದರೂ ಮಾಡಿದರೆ ಧನಿಗಳು ಅವನನ್ನು ಹೊಳ ಬಿಟ್ಟಾರು" ಕರಿಯನೆಂದ.

ಬಾಬು ಇನ್ನೂ ಗಟ್ಟಿಯಾಗಿ ಕೆಲಸ ಮಾಡಿರೆಂದು ಬೊಬ್ಬಿಡುತಿದ್ದ.

"ಇವನಿಗೆ ಒಂದು ಪೈಯ ಪ್ರಯೋಜನವೂ ಇಲ್ಲ." ನಾಗು ಎಂದಳು. "ಇವನು ಕಂಠದ ಪಸೆ ಆರಿಸಿಕೊಳ್ಳುವುದೊಂದೇ ಲಾಭ. ಧನಿಗಳ ಮಗಳ ಮದುವೆಯಮುಂಚೆ ಹೆಣ್ಣನ್ನು ತನಗೆ ಕೊಡುತ್ತಾರೋ ಎಂದು ನಾಲಿಗೆ ನೀಡಿ ಇದ್ದ. ಆದರೆ ಅದು ಬೇರೆ ಕಡೆಗೆ ಹೋಯಿತು. ನೋಡಿ ಅವನ ಜನ್ಮ!"

ಆಗ ಅಂಗರ ಹೇಳಿದ: "ಅದೆಲ್ಲ ಸುಮ್ಮನೆ ನಾಗಕ್ಕ. ಆ ಹುಡುಗನಿಗಿಂತ ಇವನೆಷ್ಟೋ ಒಳ್ಳೆಯವ. ಇವನ ತಾಯಿ ಎಷ್ಟು ಪಾಪ! ಎಲ್ಲದಕ್ಕೂ ಅದೃಷ್ಟ ಬೇಕಲ್ಲ? ಈಗ ಆ ಹುಡುಗ ಎಲ್ಲಿಗೋ ಓಡಿ ಹೋಗಿದ್ದಾನಂತೆ" ಎಂದು.

"ಇವನು ಧನಿಗಳಿಗಿಂತ ಆದೀತು" ಕರಿಯ ನಡುವೆ ಬಾಯಿಹಾಕಿದ. "ಬೇರೆ ಯಾರಾದರೂ ಇವನ ಸ್ಥಾನದಲ್ಲಿರುತಿದ್ದರೆ ಮಾವನನ್ನು ಈ ಒಳಗೆ ಮಣ್ಣು ಮುಕ್ಕಿಸದಿರುತಿದ್ದಿಲ್ಲ. ಅವನವಸ್ಥೆಯನ್ನು ಅವನು ಚಿಕ್ಕವನಾಗಿರುವಾಗ ನೋಡಬೇಕಿತ್ತು! ನಮ್ಮ ಮಕ್ಕಳು ಸಹ ಅಷ್ಟು ಕಷ್ಟಪಟ್ಟಿರಲಿಲ್ಲ. ಒಂದು ದಿನ ಸೆಟ್ಟರು ಅವನ ಪ್ರಾಣವನ್ನೇ ತೆಗೆದುಬಿಡುತ್ತಾರೋ ಎಂದು ನಾನು ಹೆದರಿದ್ದೆ. ಅಂಥ ಹೊಡೆತಗಳನ್ನು ಕೊಟ್ಟಿದ್ದರು!"

ನಾಗು ಕರಿಯನ ಮಾತಿಗೆ ಒಡಂಬಡಲಿಲ್ಲ. ಬದಲಾಗಿ ಹೇಳಿದಳು: "ನಿಮಗೆ ಗೊತ್ತಿಲ್ಲ! ಅವನೆಷ್ಟು ಬಿಗುವಿದ್ದಾನೆ ಗೊತ್ತೇ? ನೋಡುವಾಗ ಆತ ತಣ್ಣಗಾಗಿ ಕಾಣುತ್ತಾನೆಂದು ನೀವು ಹೀಗೆಲ್ಲ ಹೇಳುತ್ತಿರಬೇಕು. ಮತ್ತೆ ಧ್ವನಿಯನ್ನು ಇನ್ನೂ ತಗ್ಗಿಸಿದಳು: "ಧನಿಗಳ ಹೆಂಡತಿಗೂ ಅವನಿಗೂ ಈಗ ಒಳ್ಳೆಯದಿದೆ. ಇವನಿಗೆ ಆ ಮುದುಕಿಯೇ ಗತಿ."

"ಛಿ! ಛಿ!" ಅಂಗರನೆಂದ: "ಮಾಡಿದವನ ಪಾಪ ಹೇಳಿದವನ ಮೇಲಂತೆ. ನಾಗಕ್ಕ, ಈ ಮಾತನ್ನು ನಾನು ನಂಬಲಾರೆ."

"ನಂಬಲಿಕ್ಕೆ ನಾನೇನಾದರೂ ಭೂತವಲ್ಲ" ಎಂದು ನಾಗು ಗೊಬ್ಬರದ ರಾಶಿಯ ಹತ್ತಿರ ಕುಕ್ಕೆಯನ್ನು ಬಿಸಾಡಿ ಅಲ್ಲಿ ಹಾರೆ ಹಿಡಿದುಕೊಂಡು ನಿಂತಿದ್ದ ಗಂಗಯ್ಯನಿಗೆ "ಬೇಗ ತುಂಬಿಸು, ಅಗೋ ಧನಿಯ ಧ್ವನಿ ಕೇಳುವುದಿಲ್ಲವೆ ?" ಎಂದು ನಸುನಕ್ಕಳು.

"ಹ್ಹ! ಮುದುಕಿಯಾದರೂ ನಿನ್ನ ಮಾತುಗಳೇ !" ಎನ್ನುತ್ತ ಗಂಗಯ್ಯ ಅವಳ ತಲೆಯಲ್ಲಿದ್ದ ಮುಟ್ಟಾಳೆಯನ್ನು ಕೆಳಗೆ ತಳ್ಳಿದ. ಗಂಗಯ್ಯನ ಹೆಂಡತಿ ರಾದು ಅಲ್ಲೇ ನಿಂತುಕೊಂಡಳು.

"ತಡವಾಗುತ್ತದೆ ಮತ್ತೆ ನಿಮ್ಮ ಮಂಗಚೇಷ್ಟೆ" ಎಂದು ಅವಳು ಗಂಡನಿಗೆ ಹೇಳಿದಳು.

ಎಲ್ಲರೂ ಗೊಳ್ಳೆಂದು ನಕ್ಕರು.

"ಹಾಂ", ನಾಗು ನಗುವಿನೆಡೆಯಲ್ಲಿ ಹೇಳಿದಳು: "ಗಂಗಯ್ಯ, ರಾದುವಿಗೆ ತಡವಾಗುತ್ತದಂತೆ. ಇನ್ನಾದರೂ ಬೇಗಬೇಗನೇ ತುಂಬಿಸಬಹುದಲ್ಲ ಮಹಾರಾಯಾ !"

ಗೊಬ್ಬರದ ಕುಕ್ಕೆಗಳನ್ನೆಲ್ಲ ಗಂಗಯ್ಯ ತುಂಬಿಸಿದ. ಅದರ ವಾಸನೆ ಅಲ್ಲೆಲ್ಲ ಹರಡಿತ್ತು. ಅದರೆಡೆಯಿಂದ ಮೆಲ್ಲ ಮೆಲ್ಲನೆ ಬಿಳಿ ಬಣ್ಣದ ಹುಳಗಳು ಹೊರಡುತಿದ್ದುವು.

ನಾಗುವಿನ ಬುಟ್ಟಿಯನ್ನು ಗಂಗಯ್ಯ ಒಂದು ಬದಿಯಲ್ಲಿ ಹಿಡಿದು ಎತ್ತಿ ಅವಳ ತಲೆಯ ಮೇಲಿಟ್ಟ. ಬುಟ್ಟಿಯಿಂದ ಕೈಯನ್ನು ಹಿಂದೆ ತೆಗೆಯುವಾಗ ನಾಗುವಿನ ಮೂಗನ್ನು ಮುಟ್ಟಿದ.

ನಾಗುವು ನಗುವಿನ ಕೋಪದಲ್ಲಿ "ಛೆ ! ಗಂಡಸಾದವನಿಗೆ ಸ್ವಲ್ಪವಾದರೂ ನಾಚಿಕೆ ಬೇಕು. ಲಜ್ಜೆಯಿಲ್ಲದವ, ಥೂ ! ಅಗೋ ಎಲ್ಲರೂ ನೋಡುತಿದ್ದಾರೆ" ಎಂದಳು.

"ಹೌದೌದು" ಎನ್ನುತ್ತ ಗಂಗಯ್ಯ ನಾಗುವಿನ ಬೆನ್ನಿಗೆ ಒಂದು ಮೃದುವಾದ ಪೆಟ್ಟು ಕೊಟ್ಟ "ಇಲ್ಲಿ ಎಲ್ಲರೂ ನೋಡುತ್ತಾರೆ............ ನೋಡದಲ್ಲಿಗೇ ಬರಬೇಕೇ........?"

ನಾಗು "ಅಬ್ಬ, ಮದುವೆಯಾಗಿ ಒಂದು ಮಗುವಾದರೂ ನಿನಗೆ ಹುಚ್ಚು ಬಿಡಲಿಲ್ಲ!" ಎಂದು ಮುಗುಳ್ನಗುತ್ತ ಮೆಲ್ಲನೆ ಗದ್ದೆಯ ಕಡೆಗೆ ಹೆಜ್ಜೆ ಯಿಟ್ಟಳು.

"ನಿನ್ನಂಥ ಮುದುಕಿ ಹೀಗೆ.........." ಗಂಗಯ್ಯ ಪೂರ್ಣ ಮಾತು ಮುಗಿಸಿರಲಿಲ್ಲ.

ಅಷ್ಟರಲ್ಲಿ ಅವಳು ಪುನಃ "ಹೌದಪ್ಪಾ ನಾನೀಗ ನಿನಗೆ ಮುದುಕಿಯಾ ಗಿದ್ದೇನೆ. ಒಂದು ಚಿಕ್ಕ ಪ್ರಾಯದ ಚದುರೆಯನ್ನು ಮದುವೆಯಾಗಿದ್ದೀ ಯೆಂದು ಹೆಚ್ಚು ಗರ್ವ ಪಡಬೇಡ?" ಎಂದು ಅವನನ್ನು ಓರೆಕಣ್ಣಿನಿಂದ ನೋಡಿದಳು.

"ಹೋಗು ಮಹಾರಾಯತೀ ಹೋಗು. ಸುಮ್ಮನೆ ಧನಿಗಳ ಕೆಲಸ ವೆಂದು ಹೀಗೆ ಅಸಡ್ಡೆ ಮಾಡಬೇಡ ನಿನ್ನ ಬಾಯಿಯನ್ನು ಇನ್ನು ನಾನು ಕೆಣಕಲಾರೆ"

"ನಿನ್ನಂಥ ನಾಯಿ ಕೂಡ ಸೆಟ್ಟರ ಅನ್ನವನ್ನು ತಿನ್ನುತ್ತಿರುವಾಗ ನನ್ನಂಥ ವಳು ತಿನ್ನಬಾರದೆ? ನನ್ನನ್ನು ಕೆಣಕಲು ನಿನ್ನಪ್ಪನಿಂದಲೂ ಆಗಲಿಕ್ಕಿಲ್ಲ."

ಗಂಗಯ್ಯ ಹಾರೆಯ ಹಿಡಿಕೋಲಿಗೆ ಮುಂಗೈಯನ್ನಿಟ್ಟು ಅರ್ಥರಸವತ್ತಾಗಿ ನಗುತಿದ್ದ.

ಗದ್ದೆಯ ಅಂಚಿನಿಂದ ಕೋಚಣ್ಣ ರೈಗಳು ವೇಗವಾಗಿ ಹೋಗುತಿದ್ದರು. ಅವರು ಬಾಬುವನ್ನು ಹತ್ತಿರ ಕರೆದು ತನ್ನೊಡನೆ ಸ್ವಲ್ಪ ದೂರ ಬರಬೇಕೆಂ ದರು. ಬಾಬು ಹಿಂದೆ ಮುಂದೆ ನೋಡಿ ಒಬ್ಬ ಹೊಲೆಯನನ್ನು ನೇಗಿಲು ಹಿಡಿಯಹೇಳಿ ರೈಗಳನ್ನು ಹಿಂಬಾಲಿಸಿದ.

ರೈಗಳು ಅವಸರವಸರವಾಗಿ ಮಾತನಾಡುತಿದ್ದರು. ಬಾಬುವಿನ ಮಾವ ತುಂಬ ಕೆಟ್ಟವರಂತೆ. ಆಸ್ತಿಯನ್ನೆಲ್ಲ ಅವರ ಹೆಂಡತಿ ಮಕ್ಕಳಿಗೆ ಕೊಡಬೇ ಕೆಂದು ತಂತ್ರ ಹೂಡುತ್ತಿರುವರಂತೆ. ಆದಕ್ಕಾಗಿ ಬಾಬು ಅವರನ್ನು ಕೊಲ್ಲಲೇ ಬೇಕಂತೆ.

"ಅಲ್ಲ ಬಾಬು, ನಿನಗೆ ನನ್ನ ಮಗನೆಂಬ ಭಾವನೆಯಲ್ಲಿ ಹೀಗೆ ಹೇಳು ತಿದ್ದೇನೆ. ನನಗೇನೂ ಇದರಿಂದ ಲಾಭ ಉಂಟೆಂದು ಗ್ರಹಿಸಬೇಡ. ನೀನೇ

ನಾದರೂ ಅವರ ಮೇಲೆ ಕೈಹಾಕಿದರೆ ಯಾರೂ ನಿನ್ನನ್ನು ದೂರಲಿಕ್ಕಿಲ್ಲ. ಅದು ಪುರಾಣ ಕಾಲದಿಂದ ನಡೆದುಬಂದುದು. ಆ ಕಂಸ ಕೃಷ್ಣನಿಗೇನೆಲ್ಲ ಮಾಡಿದ? ಕೃಷ್ಣ ಅವನ ಅಳಿಯ ಅಭಿಮನ್ಯುವನ್ನು ಹೇಗೆ ತಂತ್ರಮಾಡಿ ಕೊಂದ? ಈಗ ನಿನ್ನ ಮಾವನಾದರೂ ಅವರ ಮಾವನನ್ನು ಕೊಂದೇ ಅಲ್ಲವೆ, ಅಧಿಕಾರಕ್ಕೆ ಬಂದದ್ದು? ಮತ್ತೆ ನೀನೇಕೆ ಹಿಂಜರಿಯಬೇಕು?"

ಬಾಬು ರೈಗಳ ಮಾತಿಗೆ ಇನ್ನೂ ತಣ್ಣಗಾಗಿಯೇ ಇದ್ದ.

ಗದ್ದೆಯಲ್ಲಿದ್ದ ಅಂಗರನು ಕರಿಯನೊಡನೆ ಹೇಳುತಿದ್ದ: "ನೋಡು, ನಮ್ಮ ಧನಿಗಳ ಕಿಲಾಡಿ! ಹೇಗೆ ಹೋಗುತಿದ್ದಾನೆ! ಯಾರ ಯಾರ ತಲೆ ಮಂಡೆ ಹೊಡೆಯುವ ಕೆಲಸ ಅವನಿಗೆ" ಎಂದು.

"ಹ್ಹ! ಅವರು ದೊಡ್ಡ ಪ್ರತಾಪದ ಮನುಷ್ಯ" ನಾಗು ನುಡಿದಳು. "ನಿಮಗೆ ಗೊತ್ತಿಲ್ಲ ಅವರ ವಿಷಯ. ಕಾನೂನೆಂದರೆ ಅವರು ಕೊಟ್ಟರೆ ಉಂಟು!"

ರೈಗಳು ನಾಗುವಿನ ಮನೆಯನ್ನು ಸಂದರ್ಶಿಸುತಿದ್ದುದು ಅಂಗರನಿಗೆ ಚೆನ್ನಾಗಿ ಗೊತ್ತಿತ್ತು.

"ಹೌದು ನಾಗಕ್ಕ, ನಮಗೆ ಹೇಗೆ ಅವರ ಪ್ರತಾಪ ತಿಳಿದಿರಬೇಕು? ನಿನಗಾದರೆ ಎಲ್ಲ ತಿಳಿಯುತ್ತದೆ" ಎಂದು ಅವನು ವ್ಯಂಗವಾಗಿ ಹೇಳಿದ.

ನಾಗು ಮಣ್ಣಿನ ಒಂದು ಹೆಂಟೆಯನ್ನು ಹೆಕ್ಕಿ ಅವನ ಕಾಲಿಗೆ ಹೊಡೆ ದಳು. ಅದು ಅವನ ಪಾದದ ಗಂಟಿಗೆ ತಾಗಿ ಹುಡಿ ಹುಡಿಯಾಗಿ ಹೋಯಿತು.

"ಅಯ್ಯೋ" ಎಂದು ಅವನು ಬೇಕೆಂದೇ ಕಣ್ಣುಮುಚ್ಚಿ, ಮುಖವನ್ನು ಹಿಚುಕಿ ಕಾಲಿನ ಗಂಟನ್ನು ತಿಕ್ಕುತ್ತ ಅಲ್ಲೇ ಕೂತ.

ನಾಗುವಿಗೆ ಸ್ವಲ್ಪ ಗಾಬರಿಯಾಯಿತು. ಅವಳೂ ಕುಳಿತು "ನೋಡುವ ಎಲ್ಲಿಗೆ ತಾಗಿತು? ನಾನು ತಮಾಷೆಗೆ ಬಿಸಾಡಿದೆ" ಎಂದು ಸಂತಾಪದ ಧ್ವನಿ ಯಲ್ಲಿ ಹೇಳುತ್ತ ಅವನ ಕಾಲ ಬಳಿ ಕೈಯನ್ನು ಕೊಂಡು ಹೋದಳು.

"ಓ ಇಲ್ಲಿ........" ಎಂದು ಅಂಗರ ನಕ್ಕ.

"ಥೂ ಕೋಣ" ಎನ್ನುತ್ತ ನಾಗು ಅವನ ಕಾಲಿಗೆ ಉಗುಳಿ ಮೇಲಕ್ಕೆ ದ್ದಳು.

ಬಾಬು ಹಿಂತಿರುಗಿ ಬಂದು ನೇಗಿಲು ಹಿಡಿದ. ಅವನ ಮನಸ್ಸು ಕ್ಷೋಭಗೊಂಡಿತ್ತು. ಸೆಟ್ಟರು ಅವನನ್ನು ಅಂದೇ ಕೊಂದುಬಿಡಬೇಕೆಂದು ತಂತ್ರ ಹೂಡುತಿದ್ದಾರೆಂದು ರೈಗಳು ಅವನಿಗೆ ಹೇಳಿದ್ದರು. ಹಾಗೋ ಹೀಗೋ ಮಾಡಿ ಸೂರ್ಯ ನಡುನೆತ್ತಿಗೆ ಬರುವವರೆಗೆ ಗದ್ದೆಯನ್ನು ಉತ್ತು, ಕೋಣ ಗಳನ್ನು ತೊಳೆಯಲು ಹೊಲೆಯರೊಡನೆ ಹೇಳಿ ಮನೆಗೆ ತೆರಳಿದ.

ದಾರಿಯಲ್ಲಿ ಎಷ್ಟೋ ಆಲೋಚನೆಗಳು ಅವನ ಮನಸಿನಲ್ಲಿ ಹೊಳೆಯು ತಿದ್ದುವು. ಅವನು ನೋಡಿದ ಮೊದಲನೆಯ ದಶಾವತಾರ ಆಟ "ಕೃಷ್ಣ ಲೀಲೆ" ಯ ದೃಶ್ಯ ಅವನೆದುರು ಬಂದು ನಿಂತಿತು. ಅಂದಿನ ಆ ಕೊನೆಯ ಜಾವದಲ್ಲಿ ಹೊಳೆಯುತಿದ್ದ ಗ್ಯಾಸ್ ದೀಪಗಳ ಬೆಳಕಿನಲ್ಲಿ, ಆ ಚೆಂಡೆಯ ಕೌರವದಲ್ಲಿ, ಭಾಗವತರ ಆವೇಶಯುತವಾದ ಹಾಡಿನಲ್ಲಿ, ಕೃಷ್ಣನು ಕಂಸನ ಎದೆಯ ಮೇಲೆ ಕುಳಿತು ಅವನಿಗೆ ಕೊನೆಯ ಮಾತುಗಳನ್ನು ಹೇಳುತಿದ್ದ ದೃಶ್ಯ ಬಾಬುವಿನ ಕಣ್ಣೆದುರು ನಿಂತಿತು. ಅವನು ಒಮ್ಮೆಲೇ ಕಿಡಿಕಿಡಿಯಾದ. ನಾರಾಯಣಸೆಟ್ಟರ ಪ್ರತಿಯೊಂದು ವರ್ತನೆಯಲ್ಲಿ ಅವನಿಗೆ ದ್ವೇಷಭಾವ ಕಂಡು ಬಂತು. ತನ್ನ ಜೀವನದ ಏರು-ತಗ್ಗುಗಳ ವಿಹಂಗಮ ನೋಟವನ್ನು ಅವನು ಕ್ಷಣಕಾಲದಲ್ಲೇ ಕಂಡ.

ಕೋಚಣ್ಣ ರೈಗಳ ಮಾತನ್ನು ಅವನು ಸಾಮಾನ್ಯವಾಗಿ ಅಷ್ಟು ತೀವ್ರ ವಾಗಿ ಹೀರಿಕೊಳ್ಳುತಿದ್ದಿಲ್ಲ. ಆದರೆ ಈ ಸಲ ಅವರು ಹೇಳಿದ ಮಾತುಗಳು ಅಷ್ಟು ವಿವೇಕಯುತವಾಗಿದ್ದುವು. ತಕ್ಕ ಆಧಾರಗಳ ಬಲದಿಂದ ಸಮರ್ಥಿಸ ಲ್ಪಟ್ಟಿದ್ದುವು. ಪಾರ್ವತಿಯನ್ನು ಅವನಿಗೆ ಮದುವೆ ಮಾಡಿ ಕೊಡಬೇಕೆಂದು ಮೊದಲು ಸೆಟ್ಟರು ಯೋಚಿಸಿ ಮತ್ತು ಅರ್ಧದಲ್ಲೇ ಅವರು ಮನಸ್ಸು ಬದಲು ಮಾಡಿದುದರ ಕುರಿತಾಗಿಯೂ ರೈಗಳು ಅವನಿಗೆ ಕಾರಣಗಳನ್ನು ಕೊಟ್ಟು ವಿವರಿಸಿದ್ದರು.

ಎಲ್ಲದಕ್ಕಿಂತಲೂ ಬಾಬುವಿಗೆ ಹಿಡಿದ ಹೆದರಿಕೆಯೆಂದರೆ ಅವನ ಜೀವದ್ದು. ರೈಗಳು ಅವನ ಕುತ್ತಿಗೆಯಮೇಲೆ ಕೈ ಇಟ್ಟು ಆಣೆ ಹಾಕಿದ್ದರು.

ಬಾಬು ಮನೆಗೆ ಹೋಗುವ ದಾರಿಯನ್ನು ಬಿಟ್ಟ. ಅವನ ಜೀವದ ಗೆಳೆಯ ಮಾರ್ಟಿನ್ ಸೋಜಿನಲ್ಲಿಗೆ ಹಸಿವನ್ನು ತಡೆದುಕೊಂಡೇ ತೆರಳಿದ.

# ಅಧ್ಯಾಯ ಹದಿನೇಳು.

ಸಂಜೀವ ಮುಂಬಯಿಗೆ ಹೋದ ಬಳಿಕ ಪೂವಕ್ಕೆ ಕಳೆದುದು ದುಃಖದ ದಿವಸ. ಅವಳ ಸಂಗಾತಿಯೆಂದರೆ ಶಂಕರಿಯೊಬ್ಬಳೇ. ಅಡುಗೆಯ ಕೆಲಸ ವಿಡೀ ಶಂಕರಿಯ ಪಾಲಿಗೇ ಬಿದ್ದಿತ್ತು. ರುಕುಮಿಯನ್ನು ಅವಳ ತಂದೆ ಕರೆದುಕೊಂಡು ಹೋಗಿದ್ದ. ಪೂವಕ್ಕೆಯ ಬೇಸಾಯದ ಕೆಲಸ ಹೆಚ್ಚು ಕಡಿಮೆ ನಿಂತೇ ಹೋಗಿತ್ತು. ದೇವಪ್ಪನ ಸಾಲಗಾರರು ಪ್ರತಿದಿನವೂ ಬಂದು ಅವಳನ್ನು ಪೀಡಿಸುತಿದ್ದರು. ಬಂಟವಾಳದ ವರದ ಬಾಳಿಗರು ಮುದ್ದಾಂ ಜನವನ್ನೇ ಕಳಿಸಿದ್ದರು. ಪೂವಕ್ಕೆಗೆ ಅವರ ಜವಳಿ ಅಂಗಡಿಯ ಲೆಕ್ಕವನ್ನು ಕೇಳಿ ಸೋಜಿಗವಾಗಿತ್ತು. ದೇವಪ್ಪನು ಅವಳಿಗೆ ಹೇಳಿದ್ದ ಪ್ರಕಾರ ಬಾಳಿಗರ ಅಂಗಡಿಯಲ್ಲಿ ಬಾಕಿ ಬರೇ ಎಪ್ಪತ್ತೇ ರೂಪಾಯಿ. ಈಗ ಅವರ ಆಳು ಇನ್ನೂರ ಹತ್ತು ರೂಪಾಯಿಗಳೆಂದ. ಅವಳು ಪಟ್ಟಿಯನ್ನು ಓದಿಸಿದಳು: ಒಮ್ಮೆ ಎಂಟು ಸೀರೆಗಳಂತೆ. ಇನ್ನೊಮ್ಮೆ ಆರು ಸೀರೆಗಳು. ಮತ್ತೊಮ್ಮೆ ಎರಡು. ನಗದಿ ರೂಪಾಯಿ ಇಪ್ಪತ್ತು ಒಂದು ಸಲ. ಇನ್ನೊಮ್ಮೆ ಮೂವತ್ತೆರಡು. ಈ ವಿವರವನ್ನು ಸರಿಯೋ ತಪ್ಪೋ ಎಂದು ಕೇಳಲು ದೇವಪ್ಪ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ.

ಹೇಗಿದ್ದರೂ ಸಂಜೀವನಿಗೆ ತಾನು ಮಾಡಿದುದು ತಪ್ಪೆಂದು ಪೂವಕ್ಕೆಗೆ ಹೊಳೆಯದಿರಲಿಲ್ಲ. ಅವಳಿಗೆ ಅವನ ಮೇಲೇನೂ ಹಗೆಯಿರಲಿಲ್ಲವಾದರೂ ಅವನು ಮಂಗಳೂರಲ್ಲಿ ಮಾಡಿದ ದುಂದುಗಾರಿಕೆಯನ್ನು ಅವಳು ಬೇಗನೆ ಮರೆಯಲಿಲ್ಲ. ಅವಳ ಪುತ್ರ ವಾತ್ಸಲ್ಯವು ತಪ್ಪುದಾರಿಯಲ್ಲಿ ಸಾಗಿತ್ತೆಂದು ಅವಳಿಗೆ ವಿದಿತವಾಗುವಾಗ ಪರಿಸ್ಥಿತಿ ಹದ ತಪ್ಪಿತ್ತು. ಅದಕ್ಕೆ ರಾಮಪ್ಪ ಸೆಟ್ಟರ ಆಮಂತ್ರಣರಹಿತವಾದ ಬರೋಣವೂ ಸಹಾಯಕವಾಗಿತ್ತು. ರಾಮಪ್ಪ ಸೆಟ್ಟರು ಅವಳಿಗೆ ಎಷ್ಟು ಉಪಕಾರವನ್ನು ಮಾಡಿದ್ದರೂ ಅವರು ಕೋಚಣ್ಣಾವೈಗಳನ್ನು ದ್ವೇಷಿಸುತ್ತಿದ್ದುದು ಅವಳಿಗೆ ಸರಿಬೀಳಲಿಲ್ಲ. ಆದುದರಿಂದ ಸೆಟ್ಟರ ವರ್ಚಸ್ಸಿನಿಂದ ಅವಳ ಮಕ್ಕಳನ್ನು ಆದಷ್ಟು ದೂರವಿರಿಸಲು ಯತ್ನಿಸುತಿದ್ದಳು. ಅದೇ ಕಾರಣದಿಂದ ಅವರ ಮಗಳನ್ನು ಸಂಜೀವನಿಗೆ ಮದುವೆ ಮಾಡಿಸುವ ಆಲೋಚನೆಯನ್ನೂ ತೊರೆದಿದ್ದಳು.

ಒಂದು ದಿನ ಅವಳಿಗೊಂದು ಕಾಗದ ಬಂತು. ಅವಳು ಅದನ್ನು ಒಳಗಿಟ್ಟಳು. ಶಂಕರಿಗೂ ಓದಲು ತಿಳಿಯದು. ಅವಳಿಗಂತೂ ಮೊದಲೇ ತಿಳಿಯದು. ಅದೇ ದಿನ ಸಂಜೆಯಾಗುವಾಗ ಕೋಚಣ್ಣ ರೈಗಳ ಸವಾರಿಯಾಯಿತು. ಕೋಚಣ್ಣ ರೈಗಳು ಪೂವಕ್ಕೆಯೊಡನೆ ತುಂಬಾ ಸಂತಾಪದಿಂದ ಮಾತನಾಡಿದರು. ಅವಳು ಅತ್ತಳು

ಅವಳಿಗೆ ಕೋಚಣ್ಣ ರೈಗಳ ಮೇಲೆ ತುಂಬಾ ವಿಶ್ವಾಸವಿತ್ತು. ಊರಲ್ಲಿ ಕೋಚಣ್ಣ ರೈಗಳಿಗೆ ಹೆಣ್ಣನ್ನೊಲಿಸುವ ವಶೀಕರಣ ಮಂತ್ರ ಗೊತ್ತುಂಟೆಂದು ಜನರು ಹೇಳುತಿದ್ದರು. ಅದೂ ಅವರು ಸ್ನೇಹ ಹಿಡಿಯುವುದೆಂದರೆ ಚಿಲ್ಲರೆ ಹೆಂಗಸರದಲ್ಲ. ಒಳ್ಳೆಯ ಮನೆತನವಾಗಬೇಕು, ಒಳ್ಳೆ ಆಸ್ತಿ-ಪಾಸ್ತಿ ಬೇಕು ಅಂಥ ಕಡೆಯಲ್ಲಿ ಗಂಡಂದಿರ ಕಣ್ಣಿಗೆ ಮಣ್ಣೆರಚುವುದರಲ್ಲಿ ಅವರನ್ನು ಮಿಂದವರು ಇಲ್ಲವೇ ಇಲ್ಲ. ಹಾಗೆಯೇ ಪೂವಕ್ಕೆಯ ಸ್ನೇಹವೂ ಮಂಜಣ್ಣ ಸೆಟ್ಟರ ಜೀವಾವಧಿಯಲ್ಲೇ ಆಗಿತ್ತು. ಅವರು ಸತ್ತ ಮೇಲಂತೂ ಆ ಸ್ನೇಹ ಇನ್ನೂ ಗಾಢವಾಯಿತು. ಮತ್ತೆ ರೈಗಳು ಪೂವಕ್ಕೆಯನ್ನು ಒಲಿಸಲು ಪ್ರಯತ್ನಿಸಬೇಕಾಗಿರಲಿಲ್ಲ. ಅವಳೇ ಅವರನ್ನು ಹಾರೈಸುತಿದ್ದಳು, ಪ್ರೇರೇಪಿಸುತಿದ್ದಳು. ಮಂಜಣ್ಣ ರೈಗಳ ದಾಂಪತ್ಯದ ಹಾಸಿಗೆಯನ್ನು ಅವರು ಸ್ವಾಧೀನಪಡಿಸಿಕೊಂಡರು. ಕೆಲ ಸಮಯ ಅವರು ಪೂವಕ್ಕೆಯನ್ನು ಎರಡನೇ ಮದುವೆ ಆಗುವರೆಂಬ ಸುದ್ದಿಯೂ ಹಬ್ಬಿತ್ತು. ಆಗ ಕೆಲ ತಿಂಗಳ ಮಟ್ಟಿಗೆ ರೈಗಳು ಊರಿಂದಲೇ ಪರಾರಿಯಾಗಿದ್ದರು.

ಸಂಜೀವನಿಗೂ ದೇವಪ್ಪನಿಗೂ ಬುದ್ಧಿ ತಿಳಿಯುತ್ತ ಬಂದಂತೆ ರೈಗಳ ಮೇಲೆ ಕೋಪ ಹೆಚ್ಚುತಿತ್ತು. ಕೆಲವು ಕಡೆಗಳಲ್ಲಿ ಜನರು ರೈಗಳು ಅವರ ಚಿಕ್ಕಪ್ಪನೆಂದು ನಿಂದಿಸುವುದೂ ಇತ್ತು. ಮತ್ತೆ ರೈಗಳೂ ಸ್ವಲ್ಪ ತಮ್ಮ ಅಧಿಕಾರವನ್ನು ಪೂವಕ್ಕೆಯ ಮನೆಯಲ್ಲಿ ಚಲಾಯಿಸುತಿದ್ದರು. ಉದಾಹರಣೆಗಾಗಿ ಸಂಜೀವನ ವಿದ್ಯಾಭ್ಯಾಸದ ಮೇಲ್ವಿಚಾರಣೆ ಅವರಿಂದಲೇ ನಡೆಯುತಿತ್ತು. ಮತ್ತೆ ಮಂಜಣ್ಣ ರೈಗಳ ಕಾಲದ ಅಪೂರ್ಣ ವ್ಯಾಜ್ಯಗಳನ್ನು ಕೋರ್ಟಿನಲ್ಲಿ ವ್ಯವಹರಿಸಿ ಅಂತ್ಯಗೊಳಿಸಿದುದೂ ರೈಗಳೇ. ಯಾವೊಂದು ದಾಖಲೆಯಾಗಬೇಕಾದರೂ ಪೂವಕ್ಕೆಗೆ ರೈಗಳಿಲ್ಲದೆ ಆಗದು. ಅವಳಿಂದ ಅವರು ಹಣ ಪಡೆಯುತಿದ್ದುದಕ್ಕೂ ಲೆಕ್ಕವಿರಲಿಲ್ಲ. ಆದರೆ ದೇವಪ್ಪನು ಈಚೀ

ಚೆಗೆ ತಾಯಿಯ ಹಣ ಕಾಸಿನ ವ್ಯವಹಾರದಲ್ಲಿ ಆಸಕ್ತಿ ವಹಿಸತೊಡಗಿದ ಮೇಲೆ ಸೆಟ್ಟರ ಲಾಭ ಕಡಿಮೆಯಾಯಿತು. ಇಬ್ಬರು ಮಕ್ಕಳ ಮೇಲೂ ಅವರಿಗೆ ದ್ವೇಷ ಹೆಚ್ಚಿತು. ಸಂಜೀವನೊಮ್ಮೆ ಅವರಿಗೆ ಮಂಗಳೂರಲ್ಲಿ ತನ್ನ ತಾಯಿಯ ಗೋಜಿಗೆ ಹೋಗಬಾರದೆಂದು ಹೇಳಿದ್ದರಿಂದ ಅವನ ವಿದ್ಯಾಭ್ಯಾಸಕ್ಕೆ ಅಲ್ಲೇ ಮುಟ್ಟುಗೋಲು ಹಾಕಿಸಿದರು.

ರೈಗಳು ಅಂದು ಪೂವಕ್ಕೆಗೆ ಎಷ್ಟು ಧೈರ್ಯಹೇಳಿದರೂ ಅವರ ನಾಲಿಗೆ ಹಿಡಿತದಲ್ಲಿರಲಿಲ್ಲ, ಮನಸ್ಸು ಸ್ಥಿಮಿತದಲ್ಲಿರಲಿಲ್ಲ. ಮಾತನಾಡುವಾಗ ಫಕ್ಕನೆ ಮಧ್ಯದಲ್ಲಿ ಸರಿಯಾಗಿ ಶಬ್ದ ಸಿಗದೆ ಎಡವಿ ಬೀಳುತಿದ್ದರು. ಕೆಲವೊಮ್ಮೆ ಒಂದು ಪ್ರಸಂಗವನ್ನು ಅರ್ಧದಲ್ಲೇ ಬಿಟ್ಟು ಮತ್ತೊಂದಕ್ಕೆ ನೆಗೆಯುತಿದ್ದರು.

"ಇನ್ನು ಯಾವುದು, ನನಗೆ ಏಕೆ ರೈಗಳೇ? ನನ್ನ ಭಾಗ್ಯ ಇಷ್ಟೇ ಎಂದಾಯಿತು" ಪೂವಕ್ಕೆ ಹೀಗೆಂದು ಅತ್ತಳು.

"ಛೆ!" -ರೈಗಳು ಅವಳ ಮುಖವನ್ನು ನೋಡದೆ ಉತ್ತರಿಸಿದರು. "ಸರ್ಪದ ಮರಿಗಳ ಹಾಗೆ ಇದ್ದ ಮಕ್ಕಳು ಹೀಗಾದಾವೆಂದು ಯಾರು ಗ್ರಹಿಸಿದ್ದರು? ಅವರವರು ಮಾಡಿದ ಕರ್ಮವನ್ನು ಅವರವರೇ ಉಣ್ಣಬೇಕಲ್ಲ? ಆದರೆ ಪೂವು, ನೀನು ಹೆದರಬೇಡ. ಕೂಗಿ ಏನೂ ಫಲವಿಲ್ಲ. ಎಲ್ಲ ದೇವರ ಆಟ, ದೇವರ ಮಾಯೆ."

ಆಗ ಪೂವಕ್ಕೆಗೆ ಕಾಗದದ ನೆನಪಾಯಿತು. ಅವಳದನ್ನು ಶಂಕರಿಗೆ ತರಲು ಹೇಳಿದಳು.

ಶಂಕರಿ ಕಾಗದವನ್ನು ಕೊಟ್ಟೊಡನೆ ಅದನ್ನು ಒಡೆದು ನೋಡಿದರು. ಅವರ ಮುಖ ಕಪ್ಪಾಯಿತು.

"ಸಂಜೀವನಿಗೇನೋ ಕಾಹಿಲೆಯಂತೆ" ಅವರೆಂದರು: "ವೈದ್ಯರ ಅಭಿಪ್ರಾಯದಲ್ಲಿ ಸ್ವಲ್ಪ ಕಠಿಣವಿದೆಯಂತೆ. ಅವನು ನಿನ್ನನ್ನೂ ಶಂಕರಿಯನ್ನೂ ನೋಡಲು ಬಯಸುವುದರಿಂದ ನಿಮ್ಮಿಬ್ಬರನ್ನೂ ಬೊಂಬಾಯಿಗೆ ಕರೆದು ಕೊಂಡು ಹೋಗಲು ನಿನ್ನ ತಮ್ಮ ಬರುತ್ತಾನಂತೆ."

ಶಂಕರಿಯ ಕಣ್ಣಿನಲ್ಲಿ ನೀರೂರಿತಾಗ. ಸಂಜೀವನನ್ನು ಅವಳು ಎಲ್ಲರಿಗಿಂತ ಹೆಚ್ಚಾಗಿ ಪ್ರೀತಿಸುತಿದ್ದವಳು. ಅವಳಿಗೆ ಅವನು ಹೆಚ್ಚಾಗಿ ಶಿಕ್ಷಿಸುತಿ

ದ್ದಿಲ್ಲ, ಬಯ್ಯುದಿಲ್ಲ. ಮಂಗಳೂರಲ್ಲಿ ಸಾಲೆಗೆ ಹೋಗುತಿದ್ದಾಗ ಆವನು ಮನೆಗೆ ರಜೆಯಲ್ಲಿ ಬರುವ ವೇಳೆ ಆವಳಿಗೆ ಆಟದ ಸಾಮಾನುಗಳನ್ನು ಮತ್ತು ಸಿಹಿ ತಿಂಡಿಗಳನ್ನು ತಾರದಿಲ್ಲ.

ಪೂವಕ್ಕ ಗಟ್ಟಿಯಾಗಿ ಅಳತೊಡಗಿದಳು.

"ಅಯ್ಯೋ ದೇವರೇ, ನನ್ನ ಜೀವವೇಕೆ ಇನ್ನೂ ಉಳಿದಿದೆ? ಇವುಗಳನ್ನೆಲ್ಲ ನಾನೆಷ್ಟು ದಿವಸ ನೋಡಬಹುದು! ಇನ್ನು ಏನೆಲ್ಲ ನನಗೆ ಆಗಲಿಕ್ಕಿದೆ!"

ಸೆಟ್ಟರು ಅಲ್ಲಿಂದೆದ್ದು ಹೊರಗೆ ಹೋಗಿ ಅಂಗಳದಲ್ಲಿ ಅತ್ತಿತ್ತ ತಿರುಗಾಡಿದರು. ಸಂಜೆ ಕಳೆದು ಕತ್ತಲಾಗುತ್ತ ಬರುತಿತ್ತು.

ಅಷ್ಟರಲ್ಲಿ ಒಂದು ವ್ಯಕ್ತಿ ಅಂಗಳದ ಬಾಗಿಲಿನಿಂದ ಒಳಗೆ ಓಡಿ ಬಂತು. ಒಂದು ಕೈಯ್ಯಲ್ಲಿ ತೆಂಗಿನೆಲೆಯ ದೊಂದಿ ಇತ್ತು. ಮುಖದಲ್ಲಿ ಉದ್ದುದ್ದ ಗಡ್ಡ ಬೆಳೆದು ವಿಕಾರವಾಗಿ ಕಾಣುತಿತ್ತು ಎರಡು ನಿಮಿಷ ಅಂಗಳದಲ್ಲೇ ನೆಗೆದು ರೈಗಳನ್ನು ಕೊನೆಗೆ ನೋಡಿ ಅವರ ಹತ್ತಿರ ಓಡಿ ಬಂತು.

ರೈಗಳ ರಕ್ತ ಹೆಪ್ಪುಗಟ್ಟಿತ್ತು. ಅವರು ಅಲ್ಲಿಂದ ಓಡಬೇಕೆಂದು ಎಷ್ಟು ಪ್ರಯತ್ನಿಸಿದರೂ ನಿಂತಲ್ಲಿಂದ ಏಳಲಿಕ್ಕಾಗಲಿಲ್ಲ.

ಶಂಕರಿ ಚಾವಡಿಯ ಕಂಬದ ಅಡ್ಡದಿಂದ ನೋಡುತಿದ್ದಳು. ಮೈಮೇಲೆಲ್ಲ ಚಿಂದಿ ಬಟ್ಟೆಗಳಿವೆ. ಕೈಕಾಲುಗಳಲ್ಲೆಲ್ಲ ಕೆಂಪು ಧೂಳು. ತಲೆಕೂದಲುಗಳು ಗಾಳಿಗೆ ಹಾರುತ್ತಿವೆ. ವ್ಯಕ್ತಿ ದೊಂದಿಯನ್ನು ಹಿಡಿದುಕೊಂಡು ಗಟ್ಟಿಯಾಗಿ ಗರ್ಜಿಸುತ್ತ ಕಣ್ಣು ತಿರುಗಿಸಿ ಕುಣಿಯುತಿತ್ತು. ಪ್ರತಿಯೊಂದು ಆರ್ಭಟೆಗೂ ಶಂಕರಿ ಬೆಚ್ಚಿ ಬಿದ್ದಳು. ಅವಳು ಈತನಕ ಇಂಥ ದೃಶ್ಯವನ್ನು ಭೂತಗಳ "ಕೋಲ" ದಲ್ಲೂ ಕಂಡಿರಲಿಲ್ಲ.

ಅದು ಎದೆಗೊಮ್ಮೆ ದೊಂದಿಯನ್ನು ಹಿಡಿಯಿತು. ಅದರ ಕೂದಲು ಮತ್ತೆ ಚರ್ಮಗಳು ಸುಟ್ಟ ದುರ್ವಾಸನೆ ಗಾಳಿಯಲ್ಲಿ ಹರಡಿತು.

ಪೂವಕ್ಕ ಮರದ ತುಂಡಿನಂತಾಗಿದ್ದಳು.

ಅಂಗಳದ ಮೂಲೆಯಲ್ಲಿದ್ದ ಕೊಡಲಿಯೊಂದನ್ನು ಅದು ಎತ್ತಿ ಹಿಡಿದುಕೊಂಡು ಸೆಟ್ಟರ ಮೇಲೇರಿ ಹೋಯಿತು. ಸೆಟ್ಟರು ಹೇಗೋ ಓಡತೊಡಗಿದರು.

ಶಂಕರಿ ಕಣ್ಣುಗಳನ್ನು ಮುಚ್ಚಿದ್ದಳು.

"ದೇವಪ್ಪಾ ಕೊಲ್ಲಬೇಡ ಮಹಾರಾಯಾ" ಎಂದು ಹೇಳುತಿದ್ದಂತೆಯೇ ಏನೋ ಧೊಪ್ಪನೆ ಬಿದ್ದ ಶಬ್ದವೊಂದು ಕೇಳಿತು.

ಶಂಕರಿ ಕಣ್ಣು ತೆರೆಯುವಾಗ ಎಲ್ಲೆಲ್ಲಿಯೂ ಬೆಳಕು ಕಾಣುತಿತ್ತು. ಮನೆಯ ಗುರುತು ಅವಳಿಗೆ ಸಿಗಲಿಲ್ಲ

* * *

ನಾರಾಯಣಸೆಟ್ಟರು ಮಧ್ಯಾಹ್ನ ಊಟ ಮಾಡಿಲಿಲ್ಲ. ವ್ಯಗ್ರಮನಸಿನಿಂದ ಅವರು ಚಾವಡಿಯಲ್ಲಿ ಶತಪಥ ಹಾಕುತಿದ್ದರು.

ಅಂಚೆ ಜವಾನ ಅವರಿಗೊಂದು ಕಾಗದ ತಂದು ಕೊಟ್ಟ. ಅವರು ಅದ ನ್ನೊಡೆದು ಜವಾನನೊಡನೆ ಓದಲಿಕ್ಕೆ ಕೊಟ್ಟರು. ಜವಾನ ಓದತೊಡಗಿದ.

ಸೆಟ್ಟರು ಒಮ್ಮೆಲೇ ಕುಳಿತುಕೊಂಡರು. ಮುಂಬಯಿಯಿಂದ ರಾಮಪ್ಪ ಸೆಟ್ಟರ ಕಾಗದ. ಸಂಜೀವ ಆಕಸ್ಮಿಕ ಸನ್ನಿವೇಶದಲ್ಲಿ ಮೃತಪಟ್ಟಿದ್ದನಂತೆ.

ಪಾರ್ವತಿಗೂ ಇದು ಕೇಳಿತು.

ಸೆಟ್ಟರ ಕೆರಳಿದ ಮುಖ ಪುನಃ ಬಾಡಿತು. ಅಂಚೆ ಜವಾನನೊಡನೆ ಅವರು ಮತ್ತೆ ಮಾತನಾಡಲಿಲ್ಲ. ಅವನು ಎಂಟು ದಿನಗಳಿಗೊಮ್ಮೆ ಕಾಗದ ಬಟವಡೆ ಮಾಡಲು ಹಳ್ಳಿಗೆ ಇಳಿಯುವವ. ಹಾಗೆ ಬಂದವನಿಗೆ ಸೆಟ್ಟರಲ್ಲಿ ಒಂದು ಊಟ ಸಿಗುವುದು ವಾಡಿಕೆಯಾಗಿತ್ತು. ಆದರೆ ಈಗ ಅವನು ಅವರನ್ನು ಕಾಯಲಿಲ್ಲ ಬದಲಾಗಿ ಅವರಿಗೊಂದು ನಮಸ್ಕಾರ ಮಾಡಿ ಹೊರಗೆ ಹೊರಟ.

ಪಾರ್ವತಿಗೂ ಅಳದಿರಲು ಸಾಧ್ಯವಿರಲಿಲ್ಲ. ನಿಜವಾಗಿಯೂ ಅವಳು ಸಂಜೀವನ ಮೇಲೆ ಅವನ ಕಷ್ಟಗಳಿಗಾಗಿ ತುಂಬಾ ಸಹಾನುಭೂತಿಯನ್ನು ತೋರಿಸುತಿದ್ದಳು. ಅವನು ಮುಂಬಯಿಗೆ ಹೋದ ಮೇಲಂತೂ ಅವಳಿಗೆ ತುಂಬ ಪಶ್ಚಾತ್ತಾಪವಾಗಿತ್ತು.

ಆದರೆ ಅವಳು ಸಂಜೀವನನ್ನು ಎಂದೂ ತನ್ನ ಗಂಡನನ್ನಾಗಿ ಭಾವಿಸಿದ್ದಿಲ್ಲ. ಅವನಲ್ಲಿದ್ದ ಕೊರತೆಗಳೇನೂ ಅವಳಿಗೆ ತೋರಬಾರದಿದ್ದರೂ ಅವನಿಗೆ ಅವಳ ಮನಸ್ಸು ಬಾಗಲಿಲ್ಲ. ಅವನ ಗುಣವನ್ನು ಅವಳು ಮೊದಲ

ರಾತ್ರಿಯೇ ಪರೀಕ್ಷಿಸಿದ್ದಳು. ಅವನು ವಿಚಾರಶೀಲ—ಆದುದರಿಂದ ಸಂದ ರ್ಭಾನುಸಾರವಾಗಿ ಅವನು ಅಂಜುಬುರುಕನಾಗುತ್ತಿದ್ದ.

ಮದುವೆಯಾಗಿ ಒಂದು ವರುಷ ಒಂದೇ ಮನೆಯಲ್ಲಿ ಅವರಿಬ್ಬರೂ ವಾಸಿಸುತ್ತಿದ್ದರೂ, ಒಂದೇ ಕೋಣೆಯಲ್ಲಿ ಮಲಗಿದ್ದರೂ ಅವರು ಒಬ್ಬರೊಡನೆ ಒಬ್ಬರು ಮಾತಾಡಿಕೊಂಡುದಿಲ್ಲ. ಸಂಜೀವನ ಮನಸ್ಸು ತಾಯಿಯ ವರ್ತನೆಯಿಂದಾಗಿ ಯಾವಾಗಲೂ ಬಾಡಿತ್ತು. ಅವನು ಮನಸಿನಲ್ಲಿ ಕರಗುತ್ತಿದ್ದಂತೆಯೇ ದೇಹದಲ್ಲೂ ಸೊರಗುತ್ತಿದ್ದ. ಪಾರ್ವತಿಯನ್ನು ಒಲಿಸಲು ಏನೋ ಕೆಲವೊಮ್ಮೆ ಪ್ರಯತ್ನಿಸಿದ. ಆದರೆ ಅವಳು ಅವನ ವಿಚಾರದಲ್ಲಿ ಶೀತ ತಣ್ಣಗಾಗಿ ಹೋಗಿದ್ದಳು.

ಇದಕ್ಕೆ ಮುಖ್ಯ ಕಾರಣ ಬಾಬುವಿನ ನೆನವು. ಬಾಬು ಚಿಕ್ಕಂದಿನಿಂದಲೇ ಅವಳೆದುರು ಇದ್ದವ ಆಗಲೇ ಅವನಿಗೆ ಅವಳೊಡನೆ ಅಷ್ಟು ಸಲಿಗೆ. ಕೆಲವು ಸಲ ಅವಳನ್ನು ಗುಡೆಗೆ ಅವನು ಕರೆದುಕೊಂಡು ಹೋಗುವುದಿತ್ತು. ಅಲ್ಲಿ ಅವಳನ್ನು ಆಡಿಸುವನು, ಮುದ್ದಿಡುವನು. ಕುಂಟಳ ಹಣ್ಣು, ಕೇಪಳ ಹಣ್ಣು, ಗೇರೆ ಹಣ್ಣು ಇತ್ಯಾದಿಗಳನ್ನು ತಂದು ಕೊಡುವನು. ಅವಳು ದೊಡ್ಡವಳಾಗುತ್ತ ಬಂದಂತೆ ಅವಳ ತಾಯಿ ತಂದೆಯರು ಬಾಬುವನ್ನು ತಾತ್ಸಾರ ಭಾವದಿಂದ ಕಾಣುವುದನ್ನು ಅವಲೋಕಿಸಿದಳು. ಆದರೂ ಅವಳು ಅವನಿಂದ ದೂರವಾಗಲಿಲ್ಲ. ಬದಲಾಗಿ ಅವನೇ ಅವಳಿಂದ ದೂರ ಹೋದ. ಅವಳು ಅವನೊಡನೆ ಮಾತನಾಡಲು ; ಪ್ರಯತ್ನಿಸಿದರೂ ಅವನು ಅವಳನ್ನು ನೋಡಲಾರ. ಕೆಲವೊಮ್ಮೆ ಅವಳು ಬೇಕೆಂದೇ ಅವನನ್ನು ಒಬ್ಬಂಟಿಗನಾಗಿ ಎದುರುಗೊಂಡಾಗ ಅವನು ಅವಳಿದ್ದ ದಾರಿಯನ್ನೇ ಬಿಟ್ಟು ನಡೆಯುತ್ತಿದ್ದ. ಆದೂ ಸೆಟ್ಟರು ಒಮ್ಮೆ ಅವಳನ್ನು ಬಾಬುವಿಗೇ ಕೊಡುವುದೆಂದು ನಿರ್ಣಯವು ಆದಾಗಲಂತೂ ಅವಳ ಸಂತೋಷವನ್ನು ಇಡಲೇ ಜಾಗೆಯಿರಲಿಲ್ಲ. ಅವನ ಕುರಿತಾಗಿ ಎಷ್ಟೋ ಸುಖಸ್ವಪ್ನಗಳನ್ನು ಆಗ ಕಂಡಿದ್ದಳು. ಅವಳು ಮೆಚ್ಚಿದ ಬಾಬುವಿನ ಸರಳತೆ, ಅವನ ಆಕರ್ಷಣೀಯ ದೇಹ, ಅವನಲ್ಲಿದ್ದ ಮಮತಾಮಯ ಸೌಜನ್ಯ—ಇವುಗಳೆಲ್ಲ ಆಗ ಅವಳ ಹೃದಯಕ್ಕೆ ತೀರ ಹತ್ತಿರವಾಗಿದ್ದುವು. ಆದರೆ ಶೆಟ್ಟರ ದೃಷ್ಟಿಯಲ್ಲಿ ಅವಳಿಗೆ ಹೃದಯವೇ ಇರಲಿಲ್ಲ.

ಮ್ಮನಿಗಂತೂ ಬಾಬುವನ್ನು ಕಂಡರೆ ಆಗದು. ಹಾಗಾಗಿ ಅವಳ ಸುಖಸ್ವಪ್ನ ಗಳು ಕುಸಿದು ಬಿದ್ದುವು.

ಮದುವೆಯಾದ ಮೇಲಂತೂ ಅವಳು ಬಾಬುವಿನ ಒಂದಂಶವಾಗಿ ಬಿಟ್ಟಳು. ಬಾಬುವಿನಲ್ಲಿದ್ದ ಆ ಓಜಸ್ಸು, ಆ ಚೈತನ್ಯ ಮತ್ತು ಆ ಉಕ್ಕೇರಿ ಸುವ ಪ್ರೇಮ—ಇವಕ್ಕೆ ಗಂಡನೊಡನಿದ್ದರೂ, ಗದ್ದೆಯಲ್ಲಿದ್ದರೂ, ಹಾತೊರಿ ಯತೊಡಗಿದಳು. ಇಂಥ ಭಾವನೆ ಇನ್ನೂ ಬೆಳೆಯಲು, ಸಂಜೀವನ ಮನೆಯ ವಿಷಮ ಪರಿಸ್ಥಿತಿಯೂ ಬಹುಮಟ್ಟಿಗೆ ಸಹಾಯಕವಾಯಿತು.

ಸಂಜೀವನು ಮುಂಬಯಿಗೆ ಹೋದ ನಂತರ ಪಾರ್ವತಿಯನ್ನು ಅವನ ಮನೆಯಿಂದ ಬಾಬು ಕರೆದು ತರುವಾಗ ಅವಳೊಡನೆ ಹೃದಯ ಬಿಚ್ಚಿ ಮಾತ ನಾಡಿದ್ದ. ಅವನು ಎಂದೆಂದಿಗೂ ಅವಳನ್ನು ಬಿಟ್ಟಿರಲಾರನಂತೆ. ಅವಳಿಗಾಗಿ ಎಂಥ ತ್ಯಾಗವನ್ನು ಮಾಡಲೂ ಅವನು ಸಿದ್ಧನಂತೆ.

ಲಿಂಗಮ್ಮನಾಗಲೀ ಸೆಟ್ಟರಾಗಲೀ ಆ ಬಳಿಕ ಪಾರ್ವತಿಯು ಬಾಬುವಿ ನೊಡನೆ ಮಾತನಾಡುತಿದ್ದುದಕ್ಕೆ ಏನೂ ಆಕ್ಷೇಪಿಸಲಿಲ್ಲ. ಬಾಬುವಿನ ತಾಯಿ ಸಂಕು ಮಾತ್ರ ಬಾಬುವಿಗೆ ಬುದ್ಧಿ ಹೇಳುತಿದ್ದಳು; ಒಮ್ಮೆ ಅವನು ಪಾರ್ವತಿ ಯೊಡನೆ ತಮಾಷೆ ಮಾತನಾಡುತಿದ್ದುದಕ್ಕೆ ಅವನಿಗೆ ಗದರಿಸಿದಳು. ಪಾರ್ವ ತಿಯ ತಮ್ಮ ಕಿಟ್ಟನೂ ಬಾಬುವಿನೊಡನೆ ಈಗ ಹೆಚ್ಚು ಸಲುಗೆಯಿಂದಿದ್ದ. ಅಪ್ಪಿತಪ್ಪಿ ಒಮ್ಮೊಮ್ಮೆ ಅವನು “ ಭಾವ ” ಎಂದು ಬಾಬುವನ್ನು ಕರೆಯು ವುದೂ ಇತ್ತು.

ಪಾರ್ವತಿಗೆ ಸಂಜೀವನ ಮರಣ ವಾರ್ತೆ ಅಂತರಂಗದಲ್ಲಿ ಒಂದಿಷ್ಟೂ ದುಃಖವನ್ನುಂಟು ಮಾಡಿರಲಿಲ್ಲ. ಅವಳು ಅವನು ಎಂದೋ ಸತ್ತುಹೋಗಿದ್ದ ನೆಂದು ಗ್ರಹಿಸಿದ್ದಳು. ಅವಳ ದೃಷ್ಟಿಯಲ್ಲಿ ಬಾಬು ಮಾತ್ರ ಎಂದೆಂದೂ ಮರಣವಿಲ್ಲದವ. ಸಂಜೀವ ಸತ್ತರೂ ಬಾಬೂ ಬದುಕಿದ್ದಾನಲ್ಲ ಎಂದು ಅವಳು ಸಮಾಧಾನಪಟ್ಟಳು.

ಸೆಟ್ಟರು ಕೊನೆಗೆ ಬಾವಿಯ ಬಳಿಗೆ ಹೋಗಿ ಹತ್ತು ಕೊಡ ನೀರನ್ನು ತಲೆಗೆ ಹೊಯ್ದುಕೊಂಡರು. ಅವರಿಗೆ ಸಾವಿನ ದೋಷ ಪರಿಹಾರವಾಯಿತು.

ಪಾರ್ವತಿ ಆಗ ರೋದಿಸುತಿದ್ದಳು.

# ಅಧ್ಯಾಯ ಹದಿನೆಂಟು.

ಬಾಬುವನ್ನು ಮಲಗಿದ್ದಲ್ಲಿಂದ ಬೆಳಿಗ್ಗೆ ಮಾರ್ಟಿನ್ ಸೋಜ ಎಬ್ಬಿಸಿದ. ಬಾಬು ಕಣ್ಣುಜ್ಜುತ್ತ ಎದ್ದ. ಅವನಿಗೆ ಇನ್ನೂ ಮಲಗಬೇಕೆಂದೇ ಇಚ್ಛೆ ಇತ್ತು.

ಅವನಿಗೆ ರಾತ್ರೆ ನಿದ್ದೆ ಬಂದಿರಲಿಲ್ಲ. ಸೆಟ್ಟರ ಮುಖವೇ ಅವನ ಕಣ್ಣ ಮುಂದೆ ಘಳಿಗೆ ಘಳಿಗೆಗೂ ಬಂದು ನಿಲ್ಲುತಿತ್ತು. ಅದೊಮ್ಮೆ ಮೌನವಾಗಿತ್ತು ಒಮ್ಮೆ ಆಹ್ವಾನದ ನಗುವನ್ನು ನಗುತಿತ್ತು. ಇನ್ನೊಮ್ಮೆ ಕೋಪದಿಂದ ಕಿಡಿ ಕಾರುತಿತ್ತು. ಬಾಬು ಮಾರ್ಟಿನ್ ಸೋಜನ ಚಾಪೆಯಲ್ಲಿ ಮೊದಲನೆ ಜಾವದ ಕೋಳಿ ಕೂಗುವ ವರೆಗೂ ಅತ್ತಿತ್ತ ಹೊರಳಾಡಿದ್ದ. ಎಷ್ಟು ಯೋಚಿಸಿದರೂ ಒಂದೋ ಸೆಟ್ಟರನ್ನು ತಾನು ಕೊಲ್ಲಬೇಕು, ಇಲ್ಲವೆ ತನ್ನನ್ನು ಸೆಟ್ಟರು ಕೊಲ್ಲಬೇಕು—ಈ ವಿಷಮ ಚಕ್ರದಿಂದ ಅವನಿಗೆ ಪಾರಾಗಲು ಸಾಧ್ಯವಾಗಲಿಲ್ಲ.

ತನ್ಮಧ್ಯೆ ಪಾರ್ವತಿಯನ್ನು ಅನೇಕ ವೇಳೆ ನೆನೆದಿದ್ದ. ಅವಳನ್ನು ತಾನು ಪ್ರೀತಿಸುತಿದ್ದಾಗ ಅವಳ ತಂದೆಯನ್ನೇ ಕೊಂದರೆ ಅವಳ ಅವಸ್ಥೆ ಏನಾಗಬಹುದು? ಅವಳು ತನ್ನನ್ನು ಹೇಗೆ ಕಂಡಾಳು?

ಪುನಃ ಸೆಟ್ಟರ ಚಿತ್ರ ಮುಂದೆ ಬರುವುದು. ಅವನೂ ಅವರೂ ಒಟ್ಟಿಗೆ ಲೋಕದಲ್ಲಿ ಹೆಚ್ಚು ದಿನ ಬಾಳಲಾರರು. ಪಾರ್ವತಿಯ ಪ್ರೇಮಕ್ಕಾಗಿ ತಾನು ಅವರನ್ನು ಇರಗೊಟ್ಟರೆ ತನ್ನ ಮರಣ ಖಂಡಿತವೆಂದು ಅವನಿಗೆ ಸ್ಪಷ್ಟವಾಯಿತು. ತಾನು ಸತ್ತ ಮೇಲೆ ಪಾರ್ವತಿ ತನ್ನನ್ನು ಪ್ರೀತಿಸಿದರೇನು, ತನ್ನ ಮೇಲೆ ಮುನಿದರೇನು? ಪಾರ್ವತಿ ತನ್ನನ್ನು ಅಷ್ಟು ಗಾಢವಾಗಿ ಪ್ರೀತಿಸುತಿದ್ದರೆ ತನ್ನ ತಪ್ಪು ಕ್ಷಮಾರ್ಹವೇ.

ಸಂಕುವನ್ನೊಮ್ಮೆ ಸ್ಮರಿಸುವನು. ಅವಳು ತನಗಾಗಿ ಎಷ್ಟು ಕಷ್ಟಗಳನ್ನು ಹೊತ್ತಿಲ್ಲ! ಅವಳ ಬಾಳನ್ನು ಸುಖಮಯವನ್ನಾಗಿ ಮಾಡಬೇಕೆಂದು ಯೋಚಿಸದ ದಿನವಿಲ್ಲ. ಸೆಟ್ಟರಲ್ಲಿ ಅವಳಿಗೆಷ್ಟು ಸಲ ಅವಮಾನವಾಗಿತ್ತು. ಎಷ್ಟು ಕೊಡ ಕಣ್ಣೀರನ್ನು ಅವಳು ಸುರಿಸಿದ್ದಳು. ಅದನ್ನು ಕಂಡು ಅನೇಕ ವೇಳೆ ಬಾಬು ತಾನೇ ಯಜಮಾನನಾಗಿರುವ ಲೋಕವನ್ನು ಕಲ್ಪಿಸಿ ತನ

ತಾಯಿಗೆ ಎಂಥೆಂಥ ಸೌಲಭ್ಯಗಳನ್ನೊದಗಿಸಿ ಕೊಡುವೆನೆಂದು ಲೆಕ್ಕ ಹಾಕಿದ್ದ. ಈಗ ಲೋಕದಲ್ಲಿ ಅವಳಿಗೆ ತಾನಲ್ಲದೆ ಬೇರೆ ಗತಿಯಿಲ್ಲ. ಅವಳಿಗೆ ಒಮ್ಮೊಮ್ಮೆ ವಸ್ತ್ರಗಳನ್ನು ಕೂಡಾ ಅವನೇ ಪಡಕೊಳ್ಳಬೇಕಾಗಿತ್ತು; ಅವನ ಉತ್ಪತ್ತಿಯೆಂದರೆ ಕಾಡು ಗುಡ್ಡಗಳಲ್ಲಿರುವ ದಾಲಚೀನಿ, ಕಾಸರಕನ ಕಾಯಿ ಮತ್ತು ಗೇರು ಬೀಜಗಳನ್ನು ಶೇಖರಿಸಿ ಮಾರುವುದು ಮಾತ್ರ. ಸೆಟ್ಟರು ಅಂಕ-ಆಯನಗಳಿಗೆಂದು ಯಾವಾಗಲಾದರೊಮ್ಮೆ ಅವನಿಗೆ ನಾಲ್ಕಾಣೆಯನ್ನೋ ಎಂಟಾಣೆಯನ್ನೋ ಕೊಡುವುದಿತ್ತು. ತಾಯಿಯ ಅವಸ್ಥೆಯನ್ನು ನೆನೆದಂತೂ ಕಿಡಿಕಿಡಿಯಾದ.

ಸೆಟ್ಟರನ್ನು ಕೊಲ್ಲುವ ಬಗೆಯ ಕುರಿತು ವಿಚಾರಿಸಿದ. ಸೆಟ್ಟರು ಅವರ ಮಾವನನ್ನು ಕೊಂದ ಪ್ರಕರಣವನ್ನು ಅವನು ಒಂದೆರಡು ವೇಳೆ ಕೇಳಿದ್ದ. ಆದರೆ ಅವನಿಗೆ ಅವರಿಗಿದ್ದಂತಹ ಪುಂಡ ಸ್ನೇಹಿತರಾರೂ ಇರಲಿಲ್ಲ. ಅವನು ಒಬ್ಬನೇ ಎದುರು-ಎದುರಾಗಿ ಸೆಟ್ಟರನ್ನು ಕೊಲ್ಲುವುದೆಂದರೆ ಅವನ ಉಳಿಗಾಲವೂ ಕಷ್ಟಸಾಧ್ಯವೇ ಸರಿ. ಒಂದು ವೇಳೆ ಸೆಟ್ಟರು ಸತ್ತರೂ ಅವನ ಮೇಲೆ ಖಟ್ಲೆಯಾಗದಿರಲಿಕ್ಕಿಲ್ಲ. ಮಾರ್ಟಿನ್ ಸೋಜನೇನೋ ಅವನ ಜೋಡು ನಳಿಗೆಯ ಕೋವಿಯನ್ನು ಒಮ್ಮೆ ಎರವಲಾಗಿ ಕೊಡಬಹುದು.

ನಿದ್ದೆಯಲ್ಲಿ ಕೂಡ ಭಯಂಕರ ಸ್ವಪ್ನಗಳನ್ನು ಕಂಡ. ಸೆಟ್ಟರೊಂದು ಮರದ ಗೆಲ್ಲನ್ನು ಹಿಡಿದುಕೊಂಡು ಅವನನ್ನು ಓಡಿಸಿಕೊಂಡು ಬರುವಂತೆ ಕಂಡಿತು. ಅವನ ಕಾಲುಗಳಲ್ಲಿ ಬಲವಿರಲಿಲ್ಲ. ಮೊಣಕಾಲುಗಳಲ್ಲಿ ಜೀವವಿಲ್ಲದಂತಾಯಿತು. ನಾಲಿಗೆ ಚಲಿಸದು. ಎಷ್ಟೋ ಯತ್ನಿಸಿ ಕೊನೆಗೆ ಕಂಠದೊಳಗಿಂದ ಚೀರುವ ಶಬ್ದ ಹೊರಟಿತು. ಸೆಟ್ಟರೂ ಇನ್ನೂ ಓಡಿಸಿಕೊಂಡು ಬರುತಿದ್ದರು. ಅವನು ಓಡುತ್ತ ಓಡುತ್ತ ಒಂದು ತೋಡಿಗೆ ಬೀಳುವಾಗ ಒಮ್ಮೆಲೇ ಅವನಿಗೆ ಎಚ್ಚರವಾಯಿತು. ಹೊರಗೆ ಸೋಜನ ನಾಯಿ ಬೊಗಳುತಿತ್ತು.

ಮಾರ್ಟಿನ್ ಸೋಜ ಒಂದು ಲೋಟ ಚಹ ತಂದು ಕೊಟ್ಟುದನ್ನು ಬಾಯಿ ಕುಡಿದು ಮತ್ತೂ ಯೋಚಿಸಿದ.

ಕೊನೆಗೆ ಸೋಜನೊಡನೆ ತನಗೊಮ್ಮೆ ಕೋವಿಯನ್ನು ಕೊಡಬೇಕೆಂದು ಕೇಳಿದ. ಸೋಜ ಏಕೆಂದುದಕ್ಕೆ ಒಂದು ಪಾರಿವಾಳವನ್ನು ಹೊಡೆದು ತರುವೆ

ನೆಂದ. ಸೋಜ ಆಗಾಗ ಬಾಬುವಿಗೆ ಕೋವಿ ಕೊಡುವುದಿತ್ತು. ಅವನ ಕೋವಿಯಲ್ಲಿ ಬಾಬು ಎಂಟು ಹಂದಿಗಳನ್ನು ಹೊಡೆದಿದ್ದ; ಒಂದು ಹುಲಿಯನ್ನು ಧ್ವಂಸ ಮಾಡಿದ್ದ.

ಹಾಗೆಯೇ ನಾಲ್ಕು ತೋಟಿಗಳನ್ನೂ ಕೋವಿಯನ್ನೂ ಸೋಜ ಕೊಟ್ಟ.

ಬಾಬು ಅದನ್ನು ಹಿಡಿದುಕೊಂಡು ಮನೆಯಕಡೆ ಹೋದ. ಒಮ್ಮೊಮ್ಮೆ ಹೆದರಿಕೆಯಲ್ಲಿ ಅವನ ಕೈ ನಡುಗುತಿತ್ತು. ಮನೆಯ ಕೊಟ್ಟಿಗೆಯ ಹಿಂಬದಿಯಲ್ಲಿ ಕೋವಿಯನ್ನು ಮೆಲ್ಲನೆ ಅಡಗಿಸಿಟ್ಟು ಒಳಗೆ ಹೋದ.

ಮನೆಯಲ್ಲಿ ಪಾರ್ವತಿ ಮತ್ತು ಸಂಕು ಅಳುತಿದ್ದರು. ಸೆಟ್ಟರು ಚಾವಡಿಯಲ್ಲಿ ಹಾಸುಗೆಯ ಮೇಲೆ ಮಲಗಿಕೊಂಡು ಬುಸುಗುಟ್ಟುತಿದ್ದರು.

ಬಾಬುವನ್ನು ನೋಡಿದೊಡನೆ "ಅಯ್ಯೋ ಮಗೂ, ನನ್ನ ಪ್ರಾಣ ಒಮ್ಮೆ ಹೋಗುವುದಿಲ್ಲವಲ್ಲ?" ಎನ್ನುವಾಗ ಅವರಿಗೆ ವಾಂತಿಯಾಯಿತು.

ಮನೆಯ ಒಳಗೂ ಅಳುವ ಧ್ವನಿ ಕೇಳುತಿತ್ತು. ಬಾಬು ಒಳಗೆ ಹೋಗುವಾಗ ಲಿಂಗಮ್ಮನು ಕಿಟ್ಟುವಿನ ಹಾಸಿಗೆಯ ಬದಿಯಲ್ಲಿ ಕುಳಿತುಕೊಂಡು ಅಳುತಿದ್ದಳು. ಕಿಟ್ಟು ನಿಶ್ಚೇತನಾಗಿದ್ದ. ಬಾಬುವಿಗೆ ದುರ್ವಾಸನೆಯಿಂದ ನಿಲ್ಲಲಾಗಲಿಲ್ಲ. ಕಿಟ್ಟು ಬೇಗಬೇಗನೆ ಉಸಿರಾಡುತ್ತಿರುವುದು ಹೊರಗೂ ಕೇಳುತಿತ್ತು.

ಸೆಟ್ಟರು ಬೊಬ್ಬಿಡುತಿದ್ದರು. ಆದರೆ ಅವರ ಕಂಠದ ಪಸೆ ಆರುತಿತ್ತು. ಅದರೊಡನೆ ವಾಂತಿಯೂ ಆಗುತಿತ್ತು.

"ಹ್ಹ ಮುಂಡೇ" ಅವರು ಒದರಿದರು. "ಆಯಿತು, ಇನ್ನು ನೀನು ಆ ವಿಶ್ವಾಸಘಾತುಕಿ ರೈಯೊಡನೆಯೇ ಕಾಲ ಕಳೆಯಬಹುದು. ಅಯ್ಯಯ್ಯೋ ಹೊಟ್ಟೆ ಕೊರೆದಂತಾಗುತ್ತಿದೆ. ನೀನು ನನಗೆ ಏನನ್ನು ಹಾಕಿದ್ದೀ, ಶಂಖ ಪಾಷಾಣವನ್ನೇ, ಅಲ್ಲ ಕುಪ್ಪಿ ಚೂರನ್ನೇ? ನಿನ್ನ ಮಿಂಡ ಅದನ್ನು ಕೊಟ್ಟುದೇ, ಅಲ್ಲ ನಿನ್ನದೇ ಆಲೋಚನೆಯೆ? ನಿನ್ನೆ ನೀನು ಅವನೊಟ್ಟಿಗೆ ಮಲಗಿರುವಾಗ ನಿಮ್ಮಿಬ್ಬರನ್ನೂ ಹಾಗೆಯೇ ಬಿಟ್ಟುದು ನನ್ನ ತಪ್ಪು. ಅಯ್ಯೋ ಬಾಬು, ಎಲ್ಲಿದ್ದೀ?"

ಬಾಬು ಅವರ ಮುಂದೆಯೇ ನಿಂತುಕೊಂಡಿದ್ದ. ಆದರೆ ಅವರಿಗೆ ಅವನು ಕಾಣುತಿದ್ದಿಲ್ಲ.

"ನೀನಾದರೂ ಬಾಳು ಮಗೂ. ಹೆಂಡತಿ ಮಕ್ಕಳನ್ನು ನಂಬಿ ನನ್ನ ಗತಿ ಹೀಗಾಯಿತು. ಅವರನ್ನೆಲ್ಲ ಕೂಡಲೇ ಮನೆಯಿಂದ ಹೊರಡಿಸು."

ಲಿಂಗಮ್ಮನ ಕೂಗು ವಿಶೇಷವಾಗುತಿತ್ತು. "ಅಯ್ಯೋ ಮಗ ಕಿಟ್ಟೂ ನನಗೆ ಯಾರು ಗತಿ ?" ಎಂದು ಅವಳು ರೋದಿಸುತಿದ್ದಳು.

ಸೆಟ್ಟರು ಫಕ್ಕನೆ ಎದ್ದು ಕುಳಿತರು. "ಬಾಬೂ, ಒಳಗೆ ಯಾರದು ಕೂಗುತ್ತಿರುವುದು ?" ಎಂದರು.

"ಅತ್ತೆ. ಕಿಟ್ಟುವಿಗೆ ಸೌಖ್ಯವಿಲ್ಲ" ಎಂದು ಹೇಳಿದ.

ಸೆಟ್ಟರು "ಹ್ಹ ! ಹ್ಹ ! ಹ !" ಎಂದು ನಗತೊಡಗಿದರು. "ಅವನೂ ನಿನ್ನೆ ನನ್ನೊಡನೆ ಊಟ ಮಾಡಿದ್ದ. ಓ ಮುಂಡೇ! ನಿನ್ನ ದಾರಿ ಈಗ ನೆಟ್ಟಗಾಯಿತು."

ಸೆಟ್ಟರು ನಗುತ್ತ ನಗುತ್ತ ಪುನಃ ಹಾಸಿಗೆಯ ಮೇಲೆ ಬಿದ್ದು ಬಿಟ್ಟರು. ಬಾಬು ಫಕ್ಕನೆ ಬಗ್ಗಿದ.

ಅವರು ಅವನ ಒಂದು ಕೈಯ್ಯನ್ನು ಹಿಡಿದುಕೊಂಡರು.

ಕಣ್ಣಿನಲ್ಲಿ ಧಾರೆಯಾಗಿ ಇಳಿಯುತಿದ್ದ ಕಣ್ಣೀರು ಅವರ ಕೆನ್ನೆಗಳಮೇಲೆ ಹರಿಯುತಿತ್ತು.

ಬಾಬುವಿನ ಕಣ್ಣಿನಲ್ಲೂ ನೀರು ಉಕ್ಕಿತು.

* * *

ರಾತ್ರಿ ಎಲ್ಲರೂ ಮಲಗಿದ್ದರು. ಆದರೆ ಯಾರಿಗೂ ನಿದ್ದೆ ಹತ್ತಿರಲಿಲ್ಲ. ಸಂಕು ಆಗಾಗ ಬಿಸಿಯುಸಿರು ಬಿಡುತಿದ್ದಳು. ಪಾರ್ವತಿ ಬಿಕ್ಕಿ ಬಿಕ್ಕಿ ಅಳುತಿದ್ದಳು.

ಬಾಬು ಚಾವಡಿಯ ಬರಿ ನೆಲದ ಮೇಲೆ ಹೊರಳಾಡುತಿದ್ದ. ಅವನ ಮನಸ್ಸು ಸಂಪೂರ್ಣವಾಗಿ ಅವನ ದೇಹವನ್ನೇ ಅಂಟಿಕೊಂಡಿತ್ತು.

ಕತ್ತಲಿನ ಪ್ರಶಾಂತ ವಾತಾವರಣದಲ್ಲಿ ಎರಡು ಗೂಗೆಗಳು "ಊಊ ಊ" ಎಂದು ಕೂಗುತಿದ್ದುವು. ಬಾಬುವಿಗೊಮ್ಮೆ ಭಯವಾಯಿತು.

ಅವನು ಗೂಗೆಗಳಿಗೆ ಚಿಕ್ಕಂದಿನಲ್ಲಿ ಬಹಳ ಹೆದರುತಿದ್ದ. ರಾತ್ರಿ ಅವನು ನಿದ್ದೆ ಮಾಡದೆ ಚಂಡಿ ಹಿಡಿದಾಗಲೆಲ್ಲ ಸಂಕು "ಈಗ ನಿನ್ನನ್ನು ಗೂಗೆ ಕೊಂಡು ಹೋಗುತ್ತದೆ" ಎಂದು ಹೆದರಿಸುತಿದ್ದಳು. ಮರಗಳಲ್ಲಿ ಅವುಗಳ ಕೂಗಿಗೂ ಕೊರತೆಯಿರಲಿಲ್ಲ. ಒಂದು ವೇಳೆ ಅವು ಇಲ್ಲದಿದ್ದರೆ ಸಂಕುವೇ ಒಳಗಿಂದ ಅವುಗಳ 'ಉ ಊs ಊ' ಸ್ವರವನ್ನು ಕೂಗುತಿದ್ದಳು. ಆಗ ಅವನಿಗೆ ಗೂಗೆಯೆಂದರೆ ಕನಿಷ್ಠಪಕ್ಷ ನರಮನುಷ್ಯನನ್ನು ತಿನ್ನಲು ಶಕ್ತವಾದ ಪ್ರಾಣಿಯೆಂದು ಕಲ್ಪನೆಯಾಗಿತ್ತು; ಅದರ ಸ್ವರವನ್ನು ಕೇಳಿದೊಡನೆ ಮುಸುಕು ಹಾಕಿ ನಿದ್ರಿಸುತಿದ್ದ. ಆ ಹೆದರಿಕೆ ಸುಳ್ಳಾಗಲು ಅವನಿಗೆ ಹಲವು ವರುಷಗಳು ಬೇಕಾದುವು. ಒಮ್ಮೆ ಅವನು ಗುಡ್ಡೆಗೆ ದನ ಮೇಯಿಸಲು ಹೋಗಿದ್ದಾಗ ಹೊಲೆಯರ ಹುಡುಗರು ಮರದ ಮೇಲಿದ್ದ ಒಂದು ಹಕ್ಕಿಗೆ ಕಲ್ಲು ಹೊಡೆಯು ತಿದ್ದರು. ಮೇಲಿನಿಂದ ಕಾಗೆಗಳು ಅದನ್ನು ಕುಕ್ಕುತಿದ್ದುವು. ಹಕ್ಕಿ ಸಾಧಾರಣ ದೊಡ್ಡದಾಗಿದ್ದರೂ ಅದರ ಮುಖ ಬಹಳ ಚೆಲುವಾಗಿತ್ತು. ಕೊಕ್ಕಿನ ಆಚೆ–ಈಚೆ ಬದಿಗಳಲ್ಲಿ ದೊಡ್ಡ ಎರಡು ಚಕ್ರಗಳಿದ್ದುವು. ಆ ಚಕ್ರಗಳಮಧ್ಯೆ ಸಣ್ಣ ಸಣ್ಣ ಎರಡು ಕಣ್ಣುಗಳು. ಅವನು ಹೋದೊಡನೆ ಹೊಲೆಯರ ಮಕ್ಕಳು ಅದೇ ಗೂಗೆಯೆಂದು ಬೊಟ್ಟು ತೋರಿಸಿದರು.

ಗೂಗೆಯು ಇಂಥ ಸಾಮಾನ್ಯ ಹಕ್ಕಿಯೆಂದು ಅವನಿಗೆ ವಿದಿತವಾಗಿದ್ದರೂ ಅದರ ಮೇಲಿನ ಹೆದರಿಕೆ ಮಾತ್ರ ಸಂಪೂರ್ಣ ಮಾಯವಾಗಿರಲಿಲ್ಲ. ಅಲ್ಲದೆ ಗೂಗೆಯ ಕೂಗು ಅಪಶಕುನವೆಂಬ ಪ್ರತೀತಿಯನ್ನೂ ಅವನು ಕೇಳಿದ್ದ. ಅದೂ ಅಂದಿನ ವಾತಾವರಣದಲ್ಲಿ ಇನ್ನೂ ಹೆಚ್ಚು ಭೀಕರವಾಗಿ ಆ ಕೂಗು ಬಾಬುವಿಗೆ ಕೇಳುತಿತ್ತು.

ಮತ್ತೊಮ್ಮೆ ಒಂದು ದೊಡ್ಡ ಶಬ್ದ ಕೇಳಿತು. ಅವನು ಮುಸುಕನ್ನು ತೆರೆದು ನೋಡಿದ. ಬಿಳೀ ವಸ್ತ್ರವನ್ನು ಕಾಲುತುದಿಯಿಂದ ತಲೆಯವರೆಗೆ ಮುಸುಕು ಹಾಕಿಕೊಂಡ ಎರಡು ವ್ಯಕ್ತಿಗಳು ಅಂಗಳದಲ್ಲಿ ನಿಂತಿರುವಂತೆ ಅವನಿಗೆ ಭಾಸವಾಯಿತು. ಒಂದರದು ಚಿಕ್ಕ ಆಕಾರ, ಇನ್ನೊಂದರದು ದೊಡ್ಡ ದೇಹ. ಬಾಬುವಿನ ದೇಹ ನಡುಗಿತು. ಕೈಕಾಲುಗಳು ಭಯದಿಂದ ತಣ್ಣಗಾದವು.

ಅವು ನೇರವಾಗಿ ಚಾವಡಿಗೆ ಬಂದುವು. ಒಮ್ಮೆ ಭೂತಗಳ ಭಂಡಾರ

ವಿದ್ದ ಕೊಳಡಿಗೆ ಹೋದುವು. ಅಲ್ಲಿಂದ ಮರಳಿ ಸೆಟ್ಟರ ಉಗ್ರಾಣಕ್ಕೆ ತೆರಳಿದುವು. ಅದರ ಬಾಗಿಲು ಒಮ್ಮೆಯೇ ತೆರೆದಂತಾಯಿತು. ಬಾಬುವಿನ ಉಸಿರು ಸಹ ಸರಿಯಾಗಿ ಕೆಳಗೆ ಮೇಲೆ ಹೋಗುತಿದ್ದಿಲ್ಲ. ಅವುಗಳ ನಡಿಗೆಯ ಶಬ್ದ ಕೂಡ ಕೇಳುತಿದ್ದಿಲ್ಲ.

ತುಸು ಹೊತ್ತಾದೊಡನೆ ಒಳಗೆ ಲಿಂಗಮ್ಮ ಚೀರಿದಳು. ಬಾಬು ದೀಪ ಹಚ್ಚಿಸಿ ಒಳಗೆ ಹೋಗುವುದರೊಳಗೆ ಅವಳು ಹಿಂದಿನ ಬಾಗಿಲನ್ನು ತೆರೆದು ಕತ್ತಲಲ್ಲೇ ಓಡಿಯಾಗಿತ್ತು.

ಬಾಬು ದೀಪವನ್ನು ಹಿಡಿದುಕೊಂಡು ಸುಮಾರು ದೂರ ಅವಳನ್ನು ಹುಡುಕಿಕೊಂಡು ಹೋದ. ಅವನ ಹತ್ತಿರದಿಂದಲೇ ಒಂದು ದೊಡ್ಡ ಹುಲಿ ಹಾದು ಹೋಯಿತು. ಅವನು ಒಮ್ಮೆಯೇ ಹಿಂದೆ ನೆಗೆದು ಮನೆಗೆ ಓಡಿ ಬಂದ.

ಮನೆಯ ಹೊಸ್ತಿಲಲ್ಲೇ ಒಂದು ಸಣ್ಣ ಗಾಜಿನ ಸೀಸೆ ಬಿದ್ದು ಚೂರು ಚೂರಾಗಿತ್ತು. ಅದನ್ನು ದೀಪ ಹಿಡಿದು ಪರೀಕ್ಷಿಸಿದ. ಅದರಲ್ಲಿದ್ದ ಏನೋ ಬಿಳಿಯಾದ ಚೂರ್ಣ ನೆಲದಲ್ಲೆಲ್ಲ ಪಸರಿಸಿತ್ತು.

ಬಾಬು ಒಳಗೆ ಬಂದವ ಇನ್ನು ಸೆಟ್ಟರ ಕೋಣೆಯಲ್ಲಿ ಏನಾಗಿದೆಯೆಂದು ನೋಡಬೇಕೆಂದು ಅಲ್ಲಿಗೆ ಹೋದ. ಒಂದು ಕೈಯ್ಯಲ್ಲಿ ಲಾಟಾನು ಇತ್ತು. ಮತ್ತೊಂದರಲ್ಲಿ ಒಂದು ದೊಣ್ಣೆಯನ್ನು ಹಿಡಿದುಕೊಂಡಿದ್ದ.

ಕೋಣೆಯ ಬಾಗಿಲು ಎಂದಿನಂತೆಯೇ ಮುಚ್ಚಿತ್ತು. ಸೊಂಟದಿಂದ ಬೀಗದ ಕೈಯ ಗೊಂಚಲನ್ನು ತೆಗೆದು ಬೀಗದ ಕೈಗಳನ್ನು ಪರೀಕ್ಷಿಸಿದ. ನಾಲ್ಕೈದು ಕೈಗಳನ್ನು ಬೀಗಕ್ಕೆ ಹಾಕಿ ಯತ್ನಿಸಿ, ಕೊನೆಗೊಂದು ಕೈಯನ್ನು ತಿರುಗಿಸುವಾಗ ಬೀಗ ಬಂತು.

ಕೋಣೆಯ ಒಳಗಡೆ ಎಲ್ಲವೂ ಇದ್ದಕಿದ್ದಂತೆಯೇ ಇತ್ತು. ಎಲ್ಲೂ ಅಸ್ತವ್ಯಸ್ತತೆ ಕಂಡುಬರಲಿಲ್ಲ. ಕೋಣೆಯಲ್ಲಿದ್ದುದನ್ನೆಲ್ಲ ಪರಿಶೀಲಿಸತೊಡಗಿದ.

ಬಾಬು ಮಾವನ ಕೋಣೆಗೆ ಈ ಹಿಂದೆ ಬೆರಳಿನಿಂದ ಎಣಿಕೆ ಮಾಡಬಹುದಾದಷ್ಟು ಸಲ ಮಾತ್ರ ಹೋಗಿದ್ದ. ಅದೂ ಅವರು ಕರೆದಾಗ. ಅವರಿಲ್ಲ

ದಾಗ ಅದಕ್ಕೆ ಬೀಗ ಹಾಕುತಿದ್ದರು. ಅವರಿರುವಾಗ ಅದರೊಳಗೆ ಅವರು ಮತ್ತು ಲಿಂಗವ್ವ ಅಲ್ಲದೆ ಬೇರೆ ಯಾರೂ ಸಾಮಾನ್ಯವಾಗಿ ಅದರ ಒಳ ಹೊಕ್ಕುತಿದ್ದಿಲ್ಲ.

ಬಾಬು ನಾರಾಯಣಸೆಟ್ಟರ ಮಂಚವನ್ನೊಮ್ಮೆ ನೋಡಿದ. ಉರುಟು ರುಟಾದ ಬೀಟಿ ಮರದ ಕಾಲುಗಳು ಅದಕ್ಕೆ ಬಿಗಿಯಲ್ಪಟ್ಟಿದ್ದುವು. ಮೇಲೆ ವಿಶಾಲವಾದ ಎರಡು ಸಾಗವಾನಿಯ ಹಲಿಗೆಗಳು. ಅದರ ಮೇಲೆ ಹಾಸಿಗೆ ಮಡಚಿ ಇತ್ತು. ಅದನ್ನು ಬಾಬು ಮೆಲ್ಲನೆ ಬಿಡಿಸಿದ. ಬಹಳ ದಪ್ಪವಾದ ಹಾಸಿಗೆ ಅದು. ಅದಕ್ಕೆ ರೇಶ್ಮೆಯ ಕವಚವಿತ್ತು. ಮುಡಿವಾಳದ ಬೇರಿನ ಪರಿಮಳ ಕೋಣೆಯನ್ನೆಲ್ಲ ತುಂಬಿತ್ತು.

ಹಾಸುಗೆಯನ್ನು ಬಿಡಿಸಿಯಾಗುವಾಗ ಬಾಬು ಒಮ್ಮೆಲೇ ಬೆಚ್ಚಿ ಬಿದ್ದ. ಅದರೊಳಗೆ ಒಂದು ಸಣ್ಣ ಕೋವಿ ಇತ್ತು ! ಅದು ಕಳ್ಳ ಕೋವಿ. ಒಂದು ಒಂದೂವರೆ ಗೇಣು ಉದ್ದವಿರಬಹುದು. ಎರಡು ನಳಿಗೆಗಳು. ಬಾಬು ಅದನ್ನು ಮತ್ತೆ ತೆಗೆದು ದೀಪದ ಬೆಳಕಿನಲ್ಲಿ ಪರೀಕ್ಷಿಸಿದ. ಅದು ಊರಲ್ಲೇ ತಯಾರಿಸಿದ ವಸ್ತುವೆಂದು ಅವನಿಗೆ ತಿಳಿಯಿತು.

ಅದನ್ನಲ್ಲೇ ಬಿಟ್ಟು ಸ್ವಲ್ಪ ಹೊತ್ತು ಹಾಸುಗೆಯ ಮೇಲೆ ಕುಳಿತು ಕೊಂಡ. ಬೆಳಗಾಗಲು ಇನ್ನೂ ಒಂದು ಜಾವವಿತ್ತು. ಅವನಿಗೆ ನಿದ್ದೆ ಬರು ತಿದ್ದಿಲ್ಲ.

ಅಲ್ಲಿಂದೆದ್ದು ಸೆಟ್ಟರ ಮರದ ಕಪಾಟಿನ ಬಾಗಿಲು ತೆರೆದ. ಎಂಥೆಂಥ ನಮೂನೆಯ ಬೆತ್ತಗಳು ಅದರೊಳಗಿದ್ದುವು. ಕೆಲವು ನಾಗಬೆತ್ತಗಳಿಗೆ ಬೆಳ್ಳಿ ಕಟ್ಟಿತ್ತು. ಕೆಲವಕ್ಕೆ ಕೊಂಬಿನ ಹಿಡಿಯಿತ್ತು. ಕೆಲವು ಗಂಟುಗಂಟಾಗಿ ದಪ್ಪವಿದ್ದುವು. ಕೆಲವು ತೆಳುವಾಗಿ ಉದ್ದವಾಗಿದ್ದುವು. ಬಾಬು ಎಲ್ಲವನ್ನೂ ಒಂದೊಂದಾಗಿ ಪರಿಶೀಲಿಸಿದ. ಕೆಲವು ಬೆತ್ತಗಳೊಳಗೆ ಹರಿತವಾದ ಚೂರಿ ಗಳಿದ್ದುವು.

ಕಪಾಟಿನ ಮತ್ತೊಂದು ಭಾಗದಲ್ಲಿ ವಿವಿಧ ಆಕಾರದ ಚೂರಿಗಳಿದ್ದುವು. ಒಂದು ಒಂದು ಮಾರುದ್ದದ ತಲವಾರು. ಹಿಡಿಯುವಾಗ ಥರಥರನೆ ಅದು ನಡುಗುತಿತ್ತು. ಮತ್ತೆ ಮೊಳದಷ್ಟು ಉದ್ದವಾದ ಕತ್ತಿಗಳು ಹತ್ತಿಪ್ಪತ್ತು

ಇದ್ದುವು. ಅವುಗಳಲ್ಲಿ ಕೆಲವಕ್ಕೆ ಮರದ ಹಿಡಿಗಳಿದ್ದುವು. ಕೆಲವಕ್ಕೆ ಜಿಂಕೆಯ ಕೊಂಬಿನ ಹಿಡಿಗಳನ್ನು ಬಿಗಿದಿದ್ದರು. ಎಲ್ಲ ಚೂರಿಗಳ ಮೇಲೂ ಎಣ್ಣೆಯ ಪಸೆ ಹೊಳೆಯುತಿತ್ತು. ಅವುಗಳ ಬಾಯಿ ತುಂಬ ಹರಿತವಾಗಿತ್ತು.

ಮತ್ತೊಂದು ಪೆಟ್ಟಿಗೆಯ ಬಾಗಿಲನ್ನು ಬಾಬು ತೆಗೆದ. ಅದರಲ್ಲಿ ತುಂಬ ಬೆಳ್ಳಿಯ ರೂಪಾಯಿಗಳು! ಅದರ ಕದವನ್ನು ಹಾಗೆಯೇ ಮುಚ್ಚಿ ಇನ್ನೊಂದು ದೊಡ್ಡ ಪೆಟ್ಟಿಗೆಯ ಬೀಗವನ್ನು ತೆಗೆದ.

ಅದರೊಳಗೆ ಭೂತಗಳ ಚಿನ್ನಾಭರಣಗಳಿದ್ದುವು. ಬೆಳ್ಳಿಯ ಕತ್ತಿ, ಬಂಗಾರದ ಮುಖ, ಕೈಯ ದಂಡೆಗಳು, ಭುಜತಾವರೆ—ಇವೆಲ್ಲ ಥಳಥಳನೆ ಹೊಳೆಯುತಿದ್ದುವು. ಬಾಬು ಮನೆಯ ಭೂತಗಳನ್ನೆಲ್ಲ ಮನಸ್ಸಿನಲ್ಲೇ ನೆನೆದು ಕೈಮುಗಿದ.

ಮತ್ತೊಂದು ಪೆಟ್ಟಿಗೆಯಲ್ಲಿ ಸಿಟ್ಟರ ಜರತಾರಿ ವಸ್ತ್ರಗಳಿದ್ದುವು. ಬಾಬು ಅವನ್ನು ಮುಟ್ಟಲಿಲ್ಲ.

ಹೀಗೆಯೇ ಲಿಂಗುವಿನ ವಸ್ತ್ರದ ಪೆಟ್ಟಿಗೆ, ಪಾರ್ವತಿಯ ಪೆಟ್ಟಿಗೆ, ದಾಖಲೆಗಳಿರುವ ಕಪಾಟು ಇವನ್ನೆಲ್ಲ ಪರಿಶೀಲಿಸಿ ನೋಡಿಯಾಗುವಾಗ ನೆಲಬಿಟ್ಟು ಸ್ವಲ್ಪ ಮೇಲೆ ಒಂದು ಹಲಿಗೆಯ ಹಾಗಿದ್ದ ಚೌಕವನ್ನು ಗೋಡೆಯಲ್ಲಿ ಕಂಡ. ದೀಪ ಹಿಡಿದು ನೋಡುವಾಗ ಅದೊಂದು ಸಣ್ಣ ಕಪಾಟಿನ ಬಾಗಿಲಾಗಿತ್ತು. ಅದಕ್ಕೆ ಗೋಡೆಯ ಕೆಂಪು ಮಣ್ಣಿನ ಬಣ್ಣವನ್ನೇ ಸಾರಿಸಿದ್ದುದರಿಂದ ಅದು ಬೇಗನೇ ಗೋಚರವಾಗುವಂತಿರಲಿಲ್ಲ.

ಅದರ ಒಂದು ಮೂಲೆಯಲ್ಲಿ ಒಂದು ಸಣ್ಣ ಕೀಲಿಯಿತ್ತು. ಬಾಬು ಅದನ್ನು ಹಿಡಿದು ಅತ್ತಿತ್ತ ತಿರುಗಿಸಿದ. ಕೊನೆಗೆ ಒಂದು ಸಣ್ಣ ಶಬ್ದವಾಯಿತು. ಹಲಿಗೆಯ ಮಧ್ಯದಲ್ಲಿದ್ದ ಒಂದು ಸಣ್ಣ ಲೋಹದ ತುಂಡು ಕೆಳಗೆ ಹೋಯಿತು. ಬಾಬು ಒಂದೊಂದೇ ಬೀಗದ ಕೈಯ್ಯನ್ನು ಅದರೊಳಗೆ ಹಾಕಿ ನೋಡಿದ. ಕೊನೆಗೆ ಒಂದು ಕೈ ಅದರೊಳಗೆ ಹೋಯಿತು.

ಬಾಗಿಲು ತೆಗೆದು ಒಳಗೆ ಬಾಬು ನೋಡುತ್ತಾನೆ, ಏನು ಆಭರಣಗಳು! ಎಲ್ಲವೂ ಬಂಗಾರದವು. ಕೆಲವು ಕೆಂಪು, ಪಚ್ಚೆ, ಮುತ್ತು, ವಜ್ರದ ಕಲ್ಲುಗಳು

ಉಂಗುರಗಳು, ಕೆಲವು ಕೈಬಳೆಗಳು, ಪವನಿನ ಸರ, ಸೊಂಟಕ್ಕಿಡುವ ಚಿನ್ನದ ಉಡಿದಾರ—ಹೀಗೆ ಅನೇಕ ಆಭರಣಗಳನ್ನು ಕಂಡು ಬಾಬುವಿಗೊಮ್ಮೆ ತನ್ನ ಕಣ್ಣುಗಳನ್ನೇ ನಂಬದಾಯಿತು.

ಮುರಳಿ ಮಂಚದ ಮೇಲಿದ್ದ ಹಾಸಿಗೆಯ ಮೇಲೆ ಕುಳಿತು ಹೊರಗೆ ನೋಡಿದ. ಬೆಳಗಾಗುವ ನಕ್ಷತ್ರ ಆಗ ತಾನೇ ಮೂಡಿತ್ತು. ಹೊರಗಿನಿಂದ ಬರುತಿದ್ದ ತಂಗಾಳಿ ಅವನಿಗೆ ಸ್ವಲ್ಪ ಸುಖವನ್ನಿತ್ತಿತು. ಹಕ್ಕಿಗಳು ಚಿಲಿಪಿಲಿ ಎನ್ನುತ್ತ ಆಗಲೇ ಗೂಡನ್ನು ಬಿಟ್ಟು ಹೊರಗೆ ಹೋಗುವ ಸನ್ನಾಹಗಳನ್ನು ಮಾಡುತಿದ್ದುವು.

ಬಾಬು ಅಂಥ ಹಾಸಿಗೆಯನ್ನೆಂದೂ ನೋಡಿರಲಿಲ್ಲ. ಅಷ್ಟು ದಪ್ಪವಾಗಿತ್ತದು. ಮೇಲಿನ ವಸ್ತ್ರಗಳು ಸ್ವಲ್ಪ ಮಲಿನವಾಗಿದ್ದುವು. ಸೆಟ್ಟರು ಆ ಹಾಸಿಗೆಯಲ್ಲಿ ಮಲಗಿ ಎಷ್ಟು ವರುಷ ಸುಖಪಟ್ಟಿದ್ದರೋ ಎಂದು ನೆನೆಸಿದ.

ಆಗಲೇ ಕೋಣೆಯೊಳಗೆ ಏನೋ ಅತ್ತಿತ್ತ ಚಲಿಸಿದ ಸದ್ದಾಯಿತು. ಬಾಬು ಒಮ್ಮೆಯೇ ಗಾಬರಿಯಿಂದ ಎದ್ದ. ಕೈಯನ್ನು ಹಾಸಿಗೆಯ ಮೇಲೆ ಸವರುವಾಗ ಸೆಟ್ಟರ ಸಣ್ಣ ಕೋವಿ ಸಿಕ್ಕಿತು.

ಅಷ್ಟರಲ್ಲಿ ಒಂದು ಇಲಿ ಅವನು ಇಟ್ಟಿದ್ದ ಲಾಟಾನನ್ನು ದಾಟಿ ಕಿಟಕಿಯಿಂದ ಹೊರಗೆ ಓಡಿಹೋಯಿತು.

ಅವನ ಧೈರ್ಯಕ್ಕೆ ಅವನೇ ಒಳಗೊಳಗೆ ನಕ್ಕ.

ಮತ್ತೊಂದು ಇಲಿ ದೀಪದ ಬಳಿ ಬಂದು 'ಕಿಚಿ ಕಿಚಿ' ಎನ್ನುತ್ತ ಬಾಬುವನ್ನೇ ನೋಡತೊಡಗಿತು. ಅವನ ಅಂಜುಬುರುಕತನವನ್ನು ನೋಡಿ ಅದು ನಗುತ್ತಿರುವಂತೆ ಅವನಿಗೆ ತೋರಿತು.

ಪುನಃ ಒಂದು ಶಬ್ದವಾಯಿತು. ಒಣಗಿದ ವಸ್ತ್ರಗಳು ಗಾಳಿಗೆ ಹಾರುವಾಗ ಆಗುವ ಶಬ್ದದಂತಿತ್ತು. ಬಾಬುವಿಗೆ ಯಾರೋ ಕೋಣೆಯೊಳಗೆ ಸಂಚರಿಸುತ್ತಿರುವಂತೆ ಭಾಸವಾಯಿತು. ಅದರ ಮುಖ ಅವನಿಗೆ ಕಾಣಿಸಲಿಲ್ಲ.

ಕೋವಿಯನ್ನು ಮೆಲ್ಲನೆ ಕೈಗೆ ತೆಗೆದುಕೊಂಡು 'ಕುದುರೆ' ಯನ್ನೆಳೆದ. ನೆರಳಿನಂತೆ ಅಸ್ಪಷ್ಟವಾಗಿ ತೋರುತಿದ್ದ ಆ ರೂಪದ ಕಡೆ ಗುರಿಯಿಟ್ಟು

ಕೀಲನ್ನು ಹಿಂದೆ ದೂಡಿದ. ಒಮ್ಮೆಯೇ ಕೋವಿ ಸಿಡಿಯಿತು.

ದೀಪವನ್ನು ಹಿಡಿದು ನೋಡುವಾಗ ಮದ್ದು ಗುಂಡುಗಳೆಲ್ಲ ಗೋಡೆ ಯೊಳಗೆ ಹೊಕ್ಕಿದ್ದುವು.

ಹೊರಗಿನಿಂದ ಯಾರೋ ಬರುವ ಸದ್ದು ಕೇಳಿತು. ಬಾಬುವಿನ ಧೈರ್ಯ ಕುಂದಿ ಹೋಗಿತ್ತು. ಮತ್ತೊಂದು ನಳಿಗೆಯ 'ಕುದುರೆ' ಯನ್ನು ಎಳೆದು ಬಾಗಿಲಿಗೆ ಗುರಿಯಿಟ್ಟ.

"ನೀವೇನು ಮಾಡುತಿದ್ದೀರಿ ಇಲ್ಲಿ? ಎಂಥ ಶಬ್ದ!" ಎನ್ನುತ್ತ ಪಾರ್ವತಿ ಒಳಗೆ ಬಂದಳು.

ಬಾಬು ಕೋವಿಯನ್ನು ಹಾಸಿಗೆಯ ಮೇಲೆ ಪುನಃ ಬಿಸುಟ.

